ಶಬ್ದಗಳೇ ಬೇಡ ವರ್ಣಿಸಲು... ಕಣ್ಣುಗಳೇ ಸಾಕು.



# ಐಟೆಕ್ಸ್

## ಕಾಜಲ್ ಸುಪ್ರೀಮ್

ಕವಿತೆಯನ್ನು ಹಾಡುವ ಕಣ್ಣುಗುಡ್ಡೆಗಳು.
ಮನವನ್ನು ಸೂರೆಮಾಡುವ
ಹರಿತವಾದ ಕಣ್ಣನೋಟಗಳು. ಅದರ
ರಹಸ್ಯವನ್ನು ಈಗ ಅರಿತುಕೊಳ್ಳಿರಿ.







ಅರವಿಂದ್ ಲ್ಯಾಬೊರಟರೀಸ್
ಮದರಾಸು 600 033.

**ಐಟೆಕ್ಸ್** 50ಕ್ಕೂ ಹೆಚ್ಚು ವರ್ಷಗಳಿಂದ ನಿಮ್ಮ ನಂಬಿಕೆಯ ಮಹೋನ್ನತ ಚಿಹ್ನೆ

Imageads 3089 Kan

## ವನಿತಾವಾಣಿ

ದೀಪಲಕ್ಷ್ಮಿಯಂತಹ ಚೆಲುವೆಯ ಮುಖಪುಟ ಹೊತ್ತ ವನಿತಾಳಿಗೆ ನಮ್ಮ ದೀಪಾವಳಿಯ ಶುಭಾಶಯಗಳು. ಹೊಸ ಧಾರಾವಾಹಿಗೆ ನಮ್ಮ ಸುಸ್ವಾಗತ. 'ತಾಯೆ ಬಾರ ಮೊಗವ ತೋರ' ರಾಜ್ಯೋತ್ಸವಕ್ಕೆ ತಕ್ಕ ಸುಂದರ ಲೇಖನ. ಕತೆಗಳಲ್ಲಿ ನನಗೆ ಅತ್ಯಂತ ಮೆಚ್ಚುಗೆಯಾದದ್ದು ಸಿ.ಎನ್.ಮುಕ್ತಾರ 'ಸಾಧನೆ'. ಪ್ರತಿ ಗಂಡಸಿನ ಸಾಧನೆಯ ಹಿನ್ನೆಲೆಯಲ್ಲಿ ಹೆಣ್ಣೊಬ್ಬಳಿರುತ್ತಾಳೆ ಎಂಬ ಮಾತು ಅದೆಷ್ಟು ಸತ್ಯ! ಅದೂ ಸೀತಾ ಒಳಗಾಗಿದ್ದು ಎಂತಹ ವಿಷಮ ಪರೀಕ್ಷೆ! ಉಳಿದ ಕತೆಗಳು ತಕ್ಕ ಮಟ್ಟಿಗಿವೆ.

ಹೊಸ ರುಚಿಯು ವಿವಿಧ ತಿಂಡಿಗಳು ಬಾಯಲ್ಲಿ ನೀರೂರಿಸಿವೆ. ಎಂಟಿ.ಆರ್ ವೈಶಿಷ್ಟ್ಯದ ಬಗೆಗಿನ ಚಿತ್ರ ಲೇಖನ ಖಂಡಿತ ಸ್ವಾರಸ್ಯಕರವಾಗಿದೆ. ಹಾಸ್ಯ ಲೇಖನಗಳು ನಮ್ಮನ್ನು ನಕ್ಕು ನಲಿಸಿದವು. ದೀಪಾವಳಿಯ ಬಗ್ಗೆ ಮೂಡಿ ಬಂದ ಲೇಖನಗಳು ಮನ ಸೆಳೆದವು.

**ಸುಮತಿ ಕೃಷ್ಣರಾವ್** ತುಮಕೂರು

ಯೋಗಾಭ್ಯಾಸದ ಬಗ್ಗೆ ಪರಿಚಯ ನೀಡಿರುವ ಸಾವಿತ್ರಿಯವರ ಆಸನಗಳು, ಅವುಗಳ ಪ್ರಯೋಜನಗಳು ನಮಗೆ ತುಂಬಾ ಉಪಯುಕ್ತವಾಗಿರುವುದರಿಂದ ಸಾವಿತ್ರಿಯವರಿಗೆ ನನ್ನ ಅಭಿನಂದನೆ.

ಧೃತಿಯವರ 'ನಾದಬಿಂದು' ವನಿತಾ ದೀಪಾವಳಿಯಲ್ಲಿ ಧಾರಾವಾಹಿಯಾಗಿ ಬಹಳ ಚೆನ್ನಾಗಿ ಮೂಡಿ ಬಂದಿತು. ಇಂತಹ ಮನ ಮಿಡಿಯುವ ಧಾರಾವಾಹಿಗಳೇ ಹೆಚ್ಚು ವನಿತಾದಲ್ಲಿ ಮೂಡಿ ಬರಲಿ.

ಹಿಂದೂ ಧರ್ಮದಲ್ಲಿ ಮಹಿಳಾ ಹಬ್ಬಗಳು ಇವುಗಳ ಬಗ್ಗೆ ಮತ್ತು ಈ ಹಬ್ಬಗಳ ದೇವತೆಯರ ಬಗ್ಗೆ ರೇಣುಕಾ ದೇಶಪಾಂಡೆಯವರ ಸಚಿತ್ರ ಲೇಖನಕ್ಕೆ ಧನ್ಯವಾದಗಳು.

ಹೆಣ್ಣಿನ ನಿಜ ಜೀವನದಲ್ಲಿ ಕಷ್ಟಗಳು, ನಿಂದನೆಗಳು ಒಂದೊಂದಾಗಿ ಬರುವುದು ಸಹಜ. ಇವುಗಳನ್ನೆಲ್ಲಾ ಹಗಲು ರಾತ್ರಿಗಳಂತೆ ಎದುರಿಸಿ ಬಾಳಬೇಕು ಭಾರತೀಯ ಸ್ತ್ರೀ ರತ್ನಗಳು. ನಮ್ಮ ಈಗಿನ ಅಕ್ಷರಸ್ಥ, ಅನಕ್ಷರಸ್ಥ ಮಹಿಳೆಯರ ಉದ್ಧಾರಕ್ಕಾಗಿ, ರಾತ್ರಿ ಹಗಲೆನ್ನದೆ ತನ್ನ ಜೀವನದ ಕಷ್ಟಗಳನ್ನು ಎದುರಿಸಿ ಕಷ್ಟಪಟ್ಟು ದುಡಿದು ದುಡಿಯುತ್ತಿರುವ ಧೈರ್ಯವಂತ ಆದರ್ಶ ಮಹಿಳೆ, ಬಹುಮುಖ ಪ್ರತಿಭೆಯ ಸಮಾಜ ಸೇವಾ ಕರ್ತೆ ಶ್ರೀಮತಿ ಡಾ। ಓ.ವಿ. ರತ್ನ ಅರಸ್‌ರವರು. ನಮಗೂ


**ವನಿತಾ**

ಮಹಿಳೆಯರ ಮಾಸಪತ್ರಿಕೆ

ಸಂಪುಟ : 15 ಸಂಚಿಕೆ : 3

ಡಿಸೆಂಬರ್ – 1992

ಬಿಡಿಪ್ರತಿ 6/–ರೂ.

ವಾರ್ಷಿಕ ಚಂದಾ 72/– ರೂ.

ವಿಳಾಸ:

**ಡಾಲ್ಟನ್ ಪಬ್ಲಿಕೇಷನ್ಸ್**

ಚಂದಮಾಮ ಬಿಲ್ಡಿಂಗ್ಸ್

ವಡಪಳನಿ, ಮದರಾಸು – 600 026.

ಬೆಂಗಳೂರು ಕಚೇರಿ ವಿಳಾಸ :

**"ವನಿತಾ"**

ಕಮಾಂಡರ್ಸ್ ಪ್ಲೇಸ್ (ಮಹಡಿ)

ರಾಜಾರಾಮ ಮೋಹನರಾಯ್ ರಸ್ತೆ,

ಬೆಂಗಳೂರು – 560 025.

ಫೋನ್ : 220912


ಇವರ ಚರಿತ್ರೆಯನ್ನು ನೋಡಿದಾಗಿನಿಂದ, ಇವರಂತೆ ನಾವೂ ನ್ಯಾಯ ನಿಷ್ಠೆಗಳಿಂದ ಸಮಾಜದ ಉದ್ಧಾರಕ್ಕೆ ಅನಕ್ಷರತಾ ಮಹಿಳೆಯರೇ ಸುಖಕ್ಕೆ ದುಡಿಯುವ



ಛಲ ಹುಟ್ಟುವುದರಲ್ಲಿ ಸಂದೇಹವೇ ಇಲ್ಲ.

**ಮಂಜುಳಾ ಎಸ್. ಆಚಾರ್ಯ** ಶಿವಾರಪಟ್ಟಣ

ವನಿತಾ ದೀಪಾವಳಿ ಸಂಚಿಕೆಯ ಮುಖಪುಟ ಆಕರ್ಷಕವಾಗಿತ್ತು. "ಅಡಿಗೆ ಮನೆಯಲ್ಲಿ ಯಜಮಾನರು'' ಅಂಕಣ ನಗುಬರುವಂತಹ ಲೇಖನಗಳನ್ನೊಳಗೊಂಡಿದೆ. ಅಷ್ಟಲಕ್ಷ್ಮಿಯ ಫೋಟೋಗಳು 'ಫೋಟೋ ಆಲ್ಬಂ' ನಲ್ಲಿ ಸೇರಿಸುವಂತಹವು. ಧನ್ಯವಾದಗಳು.

**ಎಸ್.ಎಲ್.ವಿ. ರೇಖಾ ವೀರಣ್ಣ ಶೆಟ್ಟಿ**
ಮುದಗಲ್

ನೀವು ಈ ತಿಂಗಳ ಅಂದರೆ ನವೆಂಬರ್‌ನಲ್ಲಿ ಬಂದಿರುವ ವನಿತಾದಲ್ಲಿ ಹಲವು ಬಗೆಯ ಆಸನಗಳ ಪ್ರಯೋಜನಗಳನ್ನು ತಿಳಿಸಿದ್ದೀರಿ. ಆದರೆ ನಮಗೆ ಮೊದಲು ಪ್ರಾರಂಭ ಮಾಡುವ ಬಗೆಯನ್ನು ಮತ್ತು ನಾವು ಮೊದಲು ಪ್ರಾರಂಭಿಸುವವರು ಹೇಗೆ ಪ್ರಾರಂಭಿಸಬೇಕು ಮತ್ತು ಎಷ್ಟು ಗಂಟೆಗಳ ಕಾಲ ಮಾಡಬೇಕು ಎಂಬುದನ್ನು ತಿಳಿಸಿದ್ದರೆ ಬಹಳ ಒಳ್ಳೆಯದು. ಇಲ್ಲದಿದ್ದರೆ ಯೋಗಾಸನ ಪುಸ್ತಕವನ್ನು ಯಾರು ಬರೆದಿರುವುದನ್ನು ತೆಗೆದುಕೊಳ್ಳಬೇಕು ಎಂಬುದನ್ನಾದರೂ ತಿಳಿಸಿ.

**ಟಿ.ಎನ್. ಮಮತ, ಪರಿಮಳ, ಕವಿತ**
ಬೆಂಗಳೂರು – 600 057

ಇದು ಯೋಗಾಸನದ ಪರಿಚಯ ಮಾತ್ರ, ಯೋಗಾಭ್ಯಾಸ ಮಾಡಬೇಕೆಂದಾದಲ್ಲಿ ಅದರಲ್ಲಿ ಪರಿಣತರಾದ ಗುರು ಮುಖೇನ ಕಲಿಯುವುದು ಉಚಿತ.

–ಸಂ

ಕರದಲ್ಲಿ ದೀಪದ ತಟ್ಟೆಯನ್ನಿಟ್ಟುಕೊಂಡು ದೀಪಾವಳಿಯ ಶುಭಾಶಯ ಕೋರುತ್ತಾ ನಿಂತ ಸುಂದರಿಯ ಮುಖಪುಟ ಹೊತ್ತು ಬಂದ ನವೆಂಬರ್ ಮಾಹೆಯ 'ವನಿತಾ' ಸೊಗಸಾಗಿ ಮೂಡಿಬಂದಿದೆ.

ಶುಚಿ, ರುಚಿ, ಆರೋಗ್ಯದ ಸಮ್ಮಿಳನವಾಗಿ ಮೂಡಿ ಬಂದಿರುವ ಎಂ.ಟಿ.ಆರ್.ನ ವೈಶಿಷ್ಟ್ಯ ಬಗೆಗಿನ ಲೇಖನ ಓದಿದಾಗ ನಾವೂ ಒಮ್ಮೆ ಅಲ್ಲಿಗೆ ಭೇಟಿ ನೀಡುವ ಮನಸ್ಸಾಯಿತು.

ಕೇವಲ ದೈಹಿಕ ವ್ಯಾಯಾಮವನ್ನಲ್ಲದೆ ಮಾನಸಿಕ ನೆಮ್ಮದಿಯನ್ನು ಒದಗಿಸುವ ಯೋಗಾಭ್ಯಾಸದ ಬಗ್ಗೆ ನೀಡಿರುವ ವಿಶ್ಲೇಷಣೆ ಹಾಗೂ ಆಸನಗಳು – ಅವುಗಳ ಪ್ರಯೋಜನಗಳ ಬಗ್ಗೆಯೂ ತಿಳಿಸಿರುವುದು ಬಹಳ ಉಪಯುಕ್ತವಾಗಿದ್ದು ಸಂಗ್ರಹ ಯೋಗ್ಯವೂ ಆಗಿದೆ.

ಶೈಲಾ ಛಬ್ಬಿಯವರು ರಚಿಸಿರುವ ಹಾಸ್ಯಲೇಖನ 'ಗಂಗಾವನ' ಓದಿ ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು.

**–ಕು। ಹೆಚ್. ಗೀತಾಮೂರ್ತಿ**
ತುಮಕೂರು

## ವನಿತಾವೇದಿಕೆ

### ಕಾನೂನಿಗೆ ಕಣ್ಣಿಲ್ಲ

ದೊಡ್ಡ ದೊಡ್ಡ ನಗರಗಳಲ್ಲಿ ಚಿಕ್ಕ ಮಕ್ಕಳ ಮೇಲಿನ ಅತ್ಯಾಚಾರದ ಸಂಖ್ಯೆ ಏರುತ್ತಿದೆ. ಅತ್ಯಾಚಾರ ಎಸಗುವವರು ಯಾರೆಂದು ಗೊತ್ತಿದ್ದರೂ ಕೋರ್ಟಿಗೆ ಅಲೆದಾಡುವುದು ಹಾಗೂ ಸಮಾಜದ ತಿರಸ್ಕಾರದಿಂದ ತಪ್ಪಿಸಿಕೊಳ್ಳಲು ತಂದೆ ತಾಯಿಗಳು ಅತ್ಯಾಚಾರ ನಡೆದುದ್ದನ್ನು ಬಹಿರಂಗಪಡಿಸಲಿಚ್ಛಿಸುವುದಿಲ್ಲ. ನಮ್ಮಲ್ಲಿರುವ ಕಾನೂನು ಅಪ್ರಾಪ್ತ ವಯಸ್ಕರ ಹಾಗೂ ವಯಸ್ಕರ ಮೇಲೆ ನಡೆದ ಅತ್ಯಾಚಾರವೆಂದು ವಿಭಜಿಸುವುದಿಲ್ಲ. ಕೋರ್ಟಿನ ಮುಂದೆ ಬಂದಾಗ ನಡೆದದ್ದೇನೆಂದು ಹೇಳಲು ಸಮರ್ಥವಾದ ಮಗು ಕೋರ್ಟು ಕೇಳುವ ಸಾಕ್ಷಿಯನ್ನು ಒದಗಿಸಲಾರದು. ಅತ್ಯಾಚಾರಕ್ಕೊಳಗಾದ ಮಗುವಿಗೆ ತಕ್ಷಣ ಬೇಕಾದ ಶುಶ್ರೂಷೆಯನ್ನು ಒದಗಿಸುವುದು ತಂದೆ ತಾಯಿಗಳ ಕರ್ತವ್ಯವಾದ್ದರಿಂದ ಸಾಕ್ಷಿ ಇಲ್ಲವಾಗಿ ಬಿಡುತ್ತದೆ. ಅತ್ಯಾಚಾರ ಪುಟ್ಟ ಬಾಲೆಯ ಮೇಲಾಗಲಿ ಅಥವಾ ವಯಸ್ಕರ ಮೇಲಾಗಲಿ ಕಾನೂನಿನ ದೃಷ್ಟಿಯಲ್ಲಿ ಎರಡೂ ಒಂದೇ. ಐ. ಪಿ. ಸಿ 376 ಅನ್ವಯವಾಗುತ್ತದೆ. ತನ್ನ ಮೇಲೆ ನಡೆದದ್ದೇನೆಂದು ಅರಿಯದ ಮಗು ಕೋರ್ಟ್ ಕೇಳುವ ಸಾಕ್ಷಿಯನ್ನು ಹೇಗೆ ಒದಗಿಸಬಲ್ಲದು ? ಕೋರ್ಟಿನ ವ್ಯವಹಾರಗಳು ಅಷ್ಟೇ ದೀರ್ಘ ಕಾಲ ತೆಗೆದುಕೊಳ್ಳುತ್ತವೆ.

ಹೆಚ್ಚಿನ ತಂದೆ ತಾಯಿಗಳು ಮಗುವಿನ ಭವಿಷ್ಯದ ದೃಷ್ಟಿಯಿಂದ ಇಂತಹ ಘಟನೆಗಳನ್ನು ಮುಚ್ಚಿ ಹಾಕಬಯಸುತ್ತಾರೆ. ಭಾರತೀಯ ಸಮಾಜದಲ್ಲಿ ಹೆಣ್ಣಿಗೆ ಒಮ್ಮೆ ಇಂತಹ ಕಳಂಕ ಅಂಟಿದರೆ ಆಕೆಯ ಭವಿಷ್ಯವೇ ಹಾಳಾದಂತೆ.

ಅತ್ಯಾಚಾರ ಆರೋಪಕ್ಕೆ ವಿಧಿಸುವ ಶಿಕ್ಷೆ ಅಪ್ರಾಪ್ತರ ಮೇಲಾಗಲಿ, ವಯಸ್ಕರ ಮೇಲಾಗಲಿ ಏಳು ವರ್ಷಗಳು ಮಾತ್ರ. ಕೊಲೆ ನವಜಾತ ಶಿಶುವಿನದೇ ಆಗಿರಬಹುದು. ವಯಸ್ಕರದೇ ಆಗಿರಬಹುದು: ಮಾಡಿದಾತ ಕಾನೂನಿನ ದೃಷ್ಟಿಯಲ್ಲಿ ಕೊಲೆಗಾರ ಅನಿಸಿಕೊಳ್ಳುವುದಿಲ್ಲವೆ ?

ಅತ್ಯಾಚಾರ ವಿರೋಧಿ ಕಾನೂನನ್ನು ತುರ್ತಾಗಿ ಬದಲಿಸುವ ಅಗತ್ಯವಿದೆ. ಅದರ ಜೊತೆ ಅತ್ಯಾಚಾರಕ್ಕೊಳದಾಗ ಮಗುವಿಗೆ ತನ್ನ ಮೇಲೆ ನಡೆದದ್ದನ್ನು ಮರೆಯುವಂತಹ ವಾತಾವರಣ ಕಲ್ಪಿಸಬೇಕು. ಇದು ಅಪರಾಧಿಗೆ ಶಿಕ್ಷೆ ವಿಧಿಸಿದಷ್ಟೇ ಸುಲಭ. ಕಾಮಕ್ಕೆ ಕಣ್ಣಿಲ್ಲ. ಕಾನೂನಿಗೆ ಕಣ್ಣಿಲ್ಲವೆ ?

**— ಎಸ್. ಜೆ. ಸುಜಾತಾ**



ಮುಖಪುಟ ಲೇಖನ

# ಕ್ಲಿಂಟನ್ ದಂಪತಿಗಳು

ಅಮೆರಿಕದ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿ ಬಿಲ್ ಕ್ಲಿಂಟನ್ ಚುನಾವಣಾ ಕಾಲದಲ್ಲಿ ಅಮೆರಿಕದ ಸಮೂಹ ಮಾಧ್ಯಮಗಳ ಪ್ರಮುಖ ಆಕರ್ಷಣೆಯಾಗಿದ್ದರು. ಸಮೂಹ ಮಾಧ್ಯಮಗಳ ಆಕರ್ಷಣೆಗೆ ಕ್ಲಿಂಟನ್ ಸುಂದರ ವ್ಯಕ್ತಿತ್ವ ಮಾತ್ರವಲ್ಲ, ಪ್ರಜೆಗಳ ಆಶೋತ್ತರಗಳಿಗೆ ಆತ ದನಿಯಾಗಿದ್ದಾರೆ ಎಂಬುದಾಗಿ ಸಮೀಕ್ಷೆಯಿಂದ ತಿಳಿದು ಬಂದ ವಾಸ್ತವಿಕ ಸತ್ಯವೂ ಪ್ರಮುಖವಾಗಿತ್ತು.

ಚಿಕ್ಕ ವಯಸ್ಸಿನಲ್ಲೇ ರಾಜಕೀಯ ಪ್ರವೇಶ ಮಾಡಿದ ಕ್ಲಿಂಟನ್ 'ಜನಸೇವೆಯೇ ಜನಾರ್ಧನ ಸೇವೆ' ಎಂಬ ತಾತ್ವಿಕ ಧೋರಣೆಯ ವ್ಯಕ್ತಿ ಎಂದು ಹೆಸರು ಮಾಡಿದ ವ್ಯಕ್ತಿ. 1979ರಲ್ಲಿ ಡೆಮಾಕ್ರಟಿಕ್ ಪಕ್ಷ ಆಡಳಿತ ಸೂತ್ರ ವಹಿಸಿದ ಕಾಲದಲ್ಲಿ ಅರ್ಕಾನ್ ಸಾಸ್ ರಾಜ್ಯದ ರಾಜ್ಯಪಾಲ (ಗವರ್ನರ್)ರಾಗಿ ಆಯ್ಕೆಯಾದರು. ನಡುವೆ ಎರಡು ವರ್ಷಗಳ ಕಾಲ ಮಧ್ಯಂತರ ಬಿಟ್ಟರೆ ಈಗಿನವರೆಗೂ ಕ್ಲಿಂಟನ್ ಆ ರಾಜ್ಯದ ರಾಜ್ಯಪಾಲರಾಗಿ ಆಯ್ಕೆಯಾದ ವ್ಯಕ್ತಿ ಎಂದಾಗ ಆತನ ಪ್ರಜಾವಾತ್ಸಲ್ಯದ ಕುರಿತು ಹೊಸತಾಗಿ ಹೇಳಬೇಕಾದ ಅವಶ್ಯಕತೆ ಇಲ್ಲ.

ಭಾರತದಲ್ಲಿರುವಂತೆ ಅಮೆರಿಕದಲ್ಲಿ ರಾಜ್ಯದ ಆಡಳಿತ ಸೂತ್ರ ಮುಖ್ಯಮಂತ್ರಿ ಕೈಯಲ್ಲಿಲ್ಲ. ರಾಜ್ಯಪಾಲರೇ ಆಡಳಿತ ಸೂತ್ರಧಾರಿ. ಇವರ ಪದವಿ ಕಾಲ, ಎರಡು ವರ್ಷ. 1991ರಲ್ಲಿ ನಡೆಸಿದ ಸಮೀಕ್ಷೆಯಲ್ಲಿ ಕ್ಲಿಂಟನ್ ಅತ್ಯಂತ ಪ್ರಭಾವಶಾಲಿ ರಾಜ್ಯಪಾಲರೆಂದು ತಿಳಿದು ಬಂದಿತ್ತು.

ಅನುಭವಿಸುತ್ತಿರುವ ಆರ್ಥಿಕ ಹಿಂಜರಿತದಿಂದ ಅಮೆರಿಕವನ್ನು ಪಾರು ಮಾಡುವುದು, ಅಡ್ಡ ದಾರಿ ಹಿಡಿದ ಆರೋಗ್ಯ, ಕ್ಷೇಮಾಭಿವೃದ್ಧಿಯ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡುವುದು ಅದರಲ್ಲೂ ಮಹಿಳೆಯರ ಆರೋಗ್ಯದ ಕುರಿತು ವಿಶೇಷ ಕ್ರಮಗಳನ್ನು ಕೈಗೊಳ್ಳುವುದು, ಈಗಿರುವ ಶಿಕ್ಷಣ ವ್ಯವಸ್ಥೆಯನ್ನು ಮತ್ತಷ್ಟು ಸುಧಾರಿಸಿ ಅಭಿವೃದ್ಧಿ ಪಡಿಸುವುದು, ಹೆಚ್ಚುತ್ತಿರುವ ಮಾದಕ ವ್ಯಸನ ಸಂಬಂಧಿತ ಅಪರಾಧಗಳನ್ನು ತಡೆಗಟ್ಟುವುದು, ರಕ್ಷಣಾ ಸಾಮಗ್ರಿಯ ವೆಚ್ಚದಲ್ಲಿ ಕಡಿತ, ಮಧ್ಯಮ ವರ್ಗದ ಜನತೆಯ ಮೇಲಿನ ಕರಭಾರವನ್ನು ತಗ್ಗಿಸುವುದು, ಮೊದಲಾದವು ಕ್ಲಿಂಟನ್ ಚುನಾವಣಾ ಪ್ರಣಾಲಿಕೆಯ ಪ್ರಮುಖ ಘೋಷಣೆಗಳಾಗಿವೆ.

ಕ್ಲಿಂಟನ್ ಮಡದಿ ಹಿಲ್ಲರಿ ಪತಿಗೆ ತಕ್ಕ ಸತಿ. ದೇಶದಲ್ಲಿ ಇರುವ ನೂರು ಜನ ಅಟಾರ್ನಿ ಜನರಲ್‌ರಲ್ಲಿ ಒಬ್ಬರಾದ ಹಿಲ್ಲರಿ ಕ್ಲಿಂಟನ್ ರಾಜಕಾರಣದಲ್ಲಿ ಮಹಿಳೆಯರ ವ್ಯಕ್ತಿತ್ವಕ್ಕೆ ಮೆರಗು ನೀಡಿದ ಹೆಣ್ಣು. ಇಂದಿರಾ ಗಾಂಧಿ, ಸುಚೇತಾ ಕೃಪಲಾನಿ, ವಿಜಯಲಕ್ಷ್ಮಿ ಪಂಡಿತ್, ನಂದಿನಿ ಸತ್ಪತಿ, ಜಯಲಲಿತಾ ಮೊದಲಾದ ದೇಶ–ವಿದೇಶಗಳಲ್ಲಿ ಖ್ಯಾತಿ ಹೊಂದಿದ ಮಹಿಳಾ ರಾಜಕಾರಣಿಗಳನ್ನು ಕಂಡ ನಮಗೆ, ಅತ್ಯಾಧುನಿಕ ರಾಷ್ಟ್ರ ಎನಿಸಿಕೊಂಡ ಅಮೆರಿಕಾದ ರಾಜಕಾರಣದಲ್ಲಿ ಮಹಿಳೆಯರ ಪಾತ್ರ ಅಪರೂಪವಾಗಿರುವುದು ಆಶ್ಚರ್ಯದ ವಿಷಯವೇ ಆಗಿದೆ. ಆದರೆ ಈಗ ಬದಲಾಗುತ್ತಿರುವ ರಾಜಕೀಯ ವಿದ್ಯಮಾನಗಳ ಪ್ರತಿನಿಧಿಯೇನೋ ಎಂಬಂತೆ ಹಿಲ್ಲರಿ ಎಲ್ಲರ ಗಮನ ಸೆಳೆದಿದ್ದಾಳೆ. ಸ್ವಚ್ಛಂದ ಎನಿಸುವಷ್ಟು ಈಕೆಯ ಸ್ವತಂತ್ರ ವ್ಯಕ್ತಿತ್ವ ಹಲವು ಬಾರಿ ವಿಮರ್ಶೆಗೊಳಗಾಗಿದೆ. ಪತ್ರಿಕೆಯಲ್ಲಿ ಒಂದು ಬಾರಿ "ತಾನು ತಂದಿದ್ದನ್ನು ಬೇಯಿಸಿ ಹಾಕುವ ವಿಧೇಯ ಗೃಹಿಣಿಯಲ್ಲ" ಎಂದು ಹಿಲ್ಲರಿ ನೀಡಿದ ಹೇಳಿಕೆಯಿಂದ ಅಮೆರಿಕದ ಸದ್ಗೃಹಿಣಿಯ ಹುಬ್ಬುಗಳು ಮೇಲೇರಿದ್ದು ಉಂಟು. ಅಡಿಗೆ ಮನೆಯಿಂದ ಹೊರಬಂದು ಇತರೇ ರಂಗಗಳಲ್ಲಿ ಹಾಗೂ ರಾಜಕಾರಣದಲ್ಲಿ ಸ್ತ್ರೀಯರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕೆಂಬುದು ಆಕೆಯ ಧೋರಣೆಯಾಗಿದೆ.

ವಿವಾಹದ ಹೊಸತರಲ್ಲಿ ತನ್ನ ಮನೆಯ ಹೆಸರನ್ನು ಬದಲಿಸಿಕೊಳ್ಳಲು ಆಕೆ ಒಪ್ಪಲೇ ಇಲ್ಲ. 1980ರಲ್ಲಿ ಕ್ಲಿಂಟನ್ ಚುನಾವಣೆಯಲ್ಲಿ ಸೋತು ಗವರ್ನರ್ ಪದವಿಯನ್ನು ಕಳೆದುಕೊಂಡಾಗ, ಈ ಸೋಲಿಗೆ ಇದೂ ಕೂಡ ಒಂದು ಕಾರಣ ಎಂದು ವಿಮರ್ಶೆಗಳನ್ನು ಎದುರಿಸಬೇಕಾಗಿ ಬಂದಾಗ ಆಕೆ ತನ್ನ ಹೆಸರಿನಲ್ಲಿ ಬದಲಾವಣೆ ಮಾಡಲೇಬೇಕಾಯಿತು.

ಹಿಲ್ಲರಿ ಕ್ಲಿಂಟನ್ ಬಹು ಕಷ್ಟ ಜೀವಿ. ಸೂರ್ಯೋದಯಕ್ಕೆ ಮೊದಲೇ ಎದ್ದು ಒಂದು ಪದ್ಧತಿ ಪ್ರಕಾರ ಜೀವನ ಸಾಗಿಸುವ ವ್ಯಕ್ತಿತ್ವವನ್ನು ರೂಢಿಸಿಕೊಂಡಾಕೆ. ಸಮಾಜ ಸೇವೆಯಲ್ಲಿ ಆಸಕ್ತಿ ಹೊಂದಿದ ಮಹಿಳೆ.

ಚಿಕಾಗೊದಲ್ಲಿ ಹುಟ್ಟಿ ಬೆಳೆದ ಹಿಲ್ಲರಿ ಎಳವೆಯಿಂದಲೇ ಗರ್ಲ್ಸ್ ಸ್ಕೌಟ್‌ನಲ್ಲಿ ಭಾಗವಹಿಸಿ ಹಲವಾರು ಪದಕಗಳನ್ನು ಗೆದ್ದ ಹೆಣ್ಣು. ಹಲವಾರು ಕಾರ್ಯಕ್ರಮಗಳನ್ನು ಯೋಜನೆ, ಸಂಘಟನಾ ಚತುರಳೆಂದು ಖ್ಯಾತರಾಗಿದ್ದಾರೆ.

'ಲಾ' ಕಾಲೇಜಿನಲ್ಲಿ ಓದುತ್ತಿರುವಾಗಲೇ ಆಕೆಗೆ ಕ್ಲಿಂಟನ್ ಪರಿಚಯವಾಯಿತು. ಕಾನೂನಿನಲ್ಲಿ ಪದವೀಧರೆ ಆಗುತ್ತಿದ್ದಂತೆಯೇ 1974ರಲ್ಲಿ ವಾಷಿಂಗ್ಟನ್ ಡಿ.ಸಿ.ಗೆ ಹೋಗಿ ನಿಕ್ಸನ್ ಮೇಲೆ ಹೊರಿಸಿದ ದೋಷಾರೋಪಣೆಯ (Nixon Impeachment Case) ವಿಚಾರಣಾ ಸಮಿತಿಯಲ್ಲಿ ದುಡಿದರು. 1975ರಲ್ಲಿ ಕ್ಲಿಂಟನ್‌ರೊಂದಿಗೆ ವಿವಾಹವಾಯಿತು. ಈ ದಂಪತಿಗಳಿಗೆ ಚೆಲ್ಸಿಯಾ ಎಂಬ 12 ವರ್ಷ ವಯಸ್ಸಿನ ಮಗಳಿದ್ದಾಳೆ. ರಾಜಕೀಯದಿಂದ ದೂರವಿರಿಸಲು ಮಗಳನ್ನು ತಾತನ ಮನೆಯಲ್ಲಿ ಬಿಡಲಾಗಿದೆ.

ಅಮೆರಿಕದ ಇಂದಿನ ನವ ಯುವ ಜನಾಂಗ ಈಕೆಯಲ್ಲಿ, ಈಕೆಯ ಆಶೋತ್ತರಗಳು ತಾತ್ವಿಕ ನಿಲುವು, ವ್ಯಾವಹಾರಿಕ ಪ್ರಜ್ಞೆ ಕುರಿತು ವಿಶೇಷ ಆಸಕ್ತಿ ತೋರುತ್ತಿದೆ; ಪ್ರಸ್ತುತ ಯುವ ಜನಾಂಗ ಈಕೆಯನ್ನು ಓರ್ವ ಆದರ್ಶ ವ್ಯಕ್ತಿಯಾಗಿ ಪರಿಗಣಿಸಿದ್ದಾರೆ.

**–ಮಂಗಳಾ ಕಂದೂರ್**

ಮುಖಪುಟ ವರ್ಣ ಪಾರದರ್ಶಿಕೆ :
ಅಮೆರಿಕ ವಾರ್ತಾ ಕೇಂದ್ರ ಸೌಜನ್ಯ

# ಪ್ರಪಂಚ ಪ್ರದಕ್ಷಿಣೆ

## ಮಧ್ಯ ಅಮೇರಿಕದಲ್ಲಿ...

ಗ್ವಾಟೆಮಾಲಾ ಮಧ್ಯ ಅಮೇರಿಕದ ಅತ್ಯಂತ ಬಡ ದೇಶಗಳಲ್ಲೊಂದು. ಇಲ್ಲಿಯ ಜನಸಂಖ್ಯೆ ಸುಮಾರು ಒಂದು ಕೋಟಿ. ಇಲ್ಲಿಯ ಮೂಲ ನಿವಾಸಿಗಳು ರೆಡ್ ಇಂಡಿಯನರು. ಆದರೆ ವಲಸೆ ಬಂದ ಬಿಳಿಯರೇ ಇಲ್ಲಿ ಸರ್ವಾಧಿಕಾರಿಗಳು. 500 ವರ್ಷಗಳ ಹಿಂದೆ ಕೊಲಂಬಸ್ ಈ ಪ್ರದೇಶಕ್ಕೆ ಬಂದಂದಿನಿಂದ ಯುರೋಪಿಯನರು ಆಕ್ರಮಣ ನಡೆಸಿ ಇಲ್ಲಿನ ಸಂಸ್ಕೃತಿಯನ್ನೇ ಬದಲಾಯಿಸಿದರು. ಇಲ್ಲಿಗೆ ವಲಸೆ ಬಂದ ವಿದೇಶೀಯರು, ಈ ನಾಡಿನ ಸರ್ವಾಧಿಕಾರಿಗಳಾದರು. ಇಲ್ಲಿನ ಮೂಲ ನಿವಾಸಿಗಳು ಅವರ ಗುಲಾಮರಾದರು. ಅಂತೆಯೇ ಇಲ್ಲಿನ ಬಿಳಿಯರು ಕೊಲಂಬಸ್ ಆಗಮನದ 500ನೇ ವರ್ಷವನ್ನು ಸಂಭ್ರಮದಿಂದ ಆಚರಿಸುತ್ತಿದ್ದರೆ, ಇಲ್ಲಿಯ ಮೂಲ ನಿವಾಸಿ ರೆಡ್ ಇಂಡಿಯನ್ನರು ಗುಲಾಮ ಗಿರಿಯ 500ನೆಯ ವರ್ಷ ಎಂದು ಶೋಕವನ್ನು ಆಚರಿಸುತ್ತಿದ್ದರು. ಸ್ಪೇಯಿನ್ ಆಡಳಿತದಿಂದ ವಿಮುಕ್ತವಾಗಿ 1839ರಲ್ಲಿ ಗ್ವಾಟೆಮಾಲಾ ಸ್ವತಂತ್ರವಾಯಿತು. ಆದರೆ ಅಂದಿನಿಂದ ಇದ್ದಕ್ಕೂ ಸರ್ವಾಧಿಕಾರಿಗಳೇ ಈ ನಾಡನ್ನು ಆಳುತ್ತ ಬಂದಿದ್ದಾರೆ.

ಈ ಸರ್ವಾಧಿಕಾರದ ವಿರುದ್ಧ ಗ್ವಾಟೆಮಾಲಾದ ಮೂಲ ನಿವಾಸಿಗಳು ಆರಂಭದಿಂದ ಹೋರಾಡುತ್ತಾ ಬಂದಿದ್ದಾರೆ. ಇತ್ತೀಚಿನ ಕೆಲವು ದಶಕಗಳಲ್ಲಿ ಈ ಹೋರಾಟ ತೀವ್ರಗೊಂಡಿದೆ. ಹಲವು ಕ್ಷಿಪ್ರ ಕ್ರಾಂತಿಗಳಿಂದ ಜರ್ಜರಿತವಾದ ಈ ದೇಶದಲ್ಲಿ 1986ರಲ್ಲಿ ಪ್ರಜಾತಂತ್ರ ವ್ಯವಸ್ಥೆ ಜಾರಿಗೆ ಬಂದಿತಾದರೂ ಅದು ನಾಮಕಾವಸ್ಥೆ ಮಾತ್ರ. ವಾಸ್ತವವಾಗಿ ಇಲ್ಲಿ ಬಿಳಿಯರದೇ ಮೇಲುಗೈ. ಹೀಗಾಗಿ ಇಲ್ಲಿನ ಮೂಲನಿವಾಸಿಗಳು ತಮ್ಮ ಹಕ್ಕುಗಳಿಗಾಗಿ ತಮ್ಮ ಹೋರಾಟವನ್ನು ಮುಂದುವರಿಸಿದ್ದಾರೆ. ಈ ಹೋರಾಟದ ಮುಂಚೂಣಿಯಲ್ಲಿರುವ ನಾಯಕಿ 32 ವರ್ಷ ವಯಸ್ಸಿನ ಶ್ರೀಮತಿ ರಿಗೋಬರ್ಟ್ ಮೆಂಚು. ಈಕೆಗೆ ಈ ವರ್ಷದ ನೊಬೆಲ್ ಶಾಂತಿ ಬಹುಮಾನ ದೊರೆತಿದೆ. ಈಕೆಗೆ ಬಹುಮಾನ ನೀಡುವ ಮೂಲಕ ನೊಬೆಲ್ ಪ್ರಶಸ್ತಿ ಸಮಿತಿ ಪ್ರಪಂಚದ ಎಲ್ಲೆಡೆಗಳ ಮೂಲ ನಿವಾಸಿಗಳ ಹೋರಾಟಕ್ಕೆ ಮಾನ್ಯತೆ ನೀಡಿದೆ.

ಶ್ರೀಮತಿ ಮೆಂಚು ಚಿಕ್ಕ ವಯಸ್ಸಿನಲ್ಲೇ ಬಡತನದಿಂದಾಗಿ ದುಡಿಮೆಗೆ ಇಳಿಯಬೇಕಾಯಿತು. ಈಕೆಯ ತಂದೆ ವಿ ಸೆಂಟೇ ಮೂಲನಿವಾಸಿ ರೈತರ ಹೋರಾಟದ ನಾಯಕರಾಗಿದ್ದವರು. ಅಕ್ಷರಾಭ್ಯಾಸವೇ ಇಲ್ಲದಿದ್ದ ಈಕೆ 20 ವರ್ಷಗಳ ನಂತರ ಸ್ಪಾನಿಷ್ ಭಾಷೆ ಕಲಿತರು. ಮೂಲ ನಿವಾಸಿಗಳ ಮಾನವ ಹಕ್ಕುಗಳಿಗಾಗಿ ಹೋರಾಡುತ್ತಿದ್ದ ವಿಸೆಂಟೇ ಅವರನ್ನು ಜೈಲಿಗೆ ಕಳಿಸಲಾಯಿತು. ಜೈಲಿನಿಂದ ಹೊರಬರುತ್ತಿದ್ದಂತೆಯೇ ಬೆಂಕಿ ಇಟ್ಟು ಅವರನ್ನು ಕೊಲ್ಲಲಾಯಿತು. ಅನಂತರ ಮೆಂಚು ಅವರ ತಾಯಿಯನ್ನು ಅಪಹರಿಸಿ ಭೀಕರ ಅತ್ಯಾಚಾರವೆಸಗಿ ಆಕೆಯ ದೇಹವನ್ನು ನಾಯಿ ನರಿಗಳ ಪಾಲು ಮಾಡಲಾಯಿತು. ಗ್ವಾಟೆಮಾಲಾದಲ್ಲಿ ನಡೆಯುತ್ತಿದ್ದ ಭೀಕರ ಹತ್ಯಾಕಾಂಡದ ಬಗೆಗೆ ವಿಶ್ವದ ಜನಾಭಿಪ್ರಾಯ ಮೂಡಿಸಲು ಮೆಂಚು ಮೆಕ್ಸಿಕೋಗೆ ಪಲಾಯನ ಮಾಡಿ ಅಲ್ಲಿಂದಲೇ ತಮ್ಮ ಕಾರ್ಯವನ್ನು ಮುಂದುವರಿಸಿದರು. ಮಾನವ ಹಕ್ಕುಗಳ ಸ್ಥಾಪನೆಗಾಗಿ ಆಕೆ ನಡೆಸುತ್ತಿರುವ ಹೋರಾಟವನ್ನು ಗುರುತಿಸಿ ನೊಬೆಲ್ ಸಮಿತಿ ಆಕೆಗೆ ಶಾಂತಿ ಬಹುಮಾನ ನೀಡಿರುವುದು ಗ್ವಾಟೆಮಾಲಾ ಪ್ರಭುತ್ವಕ್ಕೆ ಆಘಾತ ಉಂಟು ಮಾಡಿದೆ.

## ಬ್ರಿಟನ್‌ನಲ್ಲಿ....

ಮೂರು ಬಾರಿ ಪ್ರಧಾನಿಯಾಗಿ ಆಯ್ಕೆಯಾಗಿ ಪ್ರಚಂಡ ಜನಪ್ರಿಯತೆ ಗಳಿಸಿದ್ದ ಮಾರ್ಗರೇಟ್ ಥ್ಯಾಚರ್ ಆಡಳಿತ ಪಕ್ಷದಲ್ಲಿನ ಭಿನ್ನಾಭಿಪ್ರಾಯಗಳಿಂದ ರೋಸಿ ಹೋಗಿ ರಾಜೀನಾಮೆ ನೀಡಬೇಕಾಗಿ ಬಂದ ಸಮಯದಲ್ಲಿ ಪ್ರಧಾನಿ ಪಟ್ಟಕ್ಕೆ ಬಂದ ಜಾನ್ ಮೇಜರ್ ಪ್ರಾರಂಭದಲ್ಲಿ ಭರವಸೆ ಮೂಡಿಸಿದ್ದಾದರೂ ಈಗ ಅವರ ಜನಪ್ರಿಯತೆ ನಶಿಸಿದ್ದು ತೀವ್ರ ಸಂಕಷ್ಟ ಪರಿಸ್ಥಿತಿಯಲ್ಲಿದ್ದಾರೆ.

ದೇಶವನ್ನು ಆರ್ಥಿಕ ದುಃಸ್ಥಿತಿಯಿಂದ ಪಾರು ಮಾಡುವಲ್ಲಿ ವಿಫಲರಾದ ಮೇಜರ್ ವಿರುದ್ಧ ಮೊಟ್ಟ ಮೊದಲಿಗೆ ಥ್ಯಾಚರ್ ಅವರೇ ಘರ್ಷಣೆಗಿಳಿದರು. ಅನಂತರ ಕಲ್ಲಿದ್ದಲ ಗಣಿಗಳನ್ನು ಮುಚ್ಚುವ ಸರ್ಕಾರದ ನಿರ್ಧಾರ ಮೇಜರ್ ಅವರಿಗೆ ಭಾರೀ ಪೆಟ್ಟು ನೀಡಿದೆ. ಈ ವಿಷಯ ಸಂಸತ್ತಿನಲ್ಲಿ ಚರ್ಚೆಗೆ ಬರುವ ಮುನ್ನವೇ ಮೇಜರ್‌ಅವರು ಮುಚ್ಚಲಾಗುವ ಕಲ್ಲಿದ್ದಲ ಗಣಿಗಳ ಸಂಖ್ಯೆಯನ್ನು 30ರಿಂದ10ಕ್ಕೆ ಇಳಿಸಿದಾದರೂ ವಿರೋಧ ಕಡಿಮೆಯಾಗಲಿಲ್ಲ. ಮೇಜರ್ ಅವರ ಈ ನಿರ್ಧಾರಕ್ಕೆ ಕೆಳಮನೆ ಕೇವಲ 13 ಮತಗಳ ಬಹುಮತದಿಂದ ಅನುಮೋದನೆ ನೀಡಿದೆ. ಈ ಅಲ್ಪ ಬಹುಮತದ ಜಯದಿಂದ ಮೇಜರ್ ಸದ್ಯಕ್ಕೆ ಪಾರಾಗಿರುವರಾದರೂ ಅದು ಅವರ ದೌರ್ಬಲ್ಯವನ್ನು ಬೆಳಕಿಗೆ ತಂದಿದೆ. ಥ್ಯಾಚರ್ ಅವರಿಗಾದಂತೆಯೇ ಆಳುವ ಪಕ್ಷವಾದ ಕನ್ಸರ್ವೇಟಿವ್ ಪಕ್ಷವೇ ಮೇಜರ್ ಅವರಿಗೆ ಸರದಿದ್ಧ ಪರಿಸ್ಥಿತಿ ಉಂಟು ಮಾಡುತ್ತಿದೆ.

ಜತೆಗೆ ಮೇಜರ್ ಆಡಳಿತಾವಧಿಯಲ್ಲಿ ಬ್ರಿಟನ್ನಿನ ಆರ್ಥಿಕ ಹಿಂಜರಿತ 30ರ ದಶಕದ ಮಟ್ಟವನ್ನು ತಲುಪುವುದೆಂಬ ಹೆದರಿಕೆ ರಾಷ್ಟ್ರದಲ್ಲಿ ಉಂಟಾಗಿದೆ. ಇತ್ತೀಚೆಗೆ ನಡೆದ ಜನಾಭಿಪ್ರಾಯ ಸಂಗ್ರಹದ ಪ್ರಕಾರ ಮೇಜರ್ ಅವರು ಕಳೆದ 40 ವರ್ಷಗಳ ಅವಧಿಯಲ್ಲೇ ಅತ್ಯಧಿಕವಾಗಿ ಜನಪ್ರಿಯತೆ ಕಳೆದುಕೊಂಡ ಪ್ರಧಾನಿ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಮೇಜರ್ ಅವರು ಹಣದುಬ್ಬರವನ್ನು ನಿಯಂತ್ರಿಸಲು ಮತ್ತು ಸರ್ಕಾರದ ವೆಚ್ಚವನ್ನು ಕಡಿಮೆ ಮಾಡಲು ಭಾರೀ ಕಾರ್ಯಕ್ರಮವನ್ನು ಹಾಕಿಕೊಂಡಿದ್ದಾರೆ. ಮುಂಬರುವ ದಿನಗಳು ಅವರ ಭವಿಷ್ಯವನ್ನು ನಿರ್ಧರಿಸಲಿವೆ.

## ರಷ್ಯದಲ್ಲಿ....

ಸೋವಿಯತ್ ಒಕ್ಕೂಟ ಒಡೆದು ಛಿದ್ರವಾದ ನಂತರ, ರಷ್ಯದ ಆರ್ಥಿಕ ಪರಿಸ್ಥಿತಿ ತೀವ್ರ ಹದಗೆಟ್ಟಿದೆ. ಅಧ್ಯಕ್ಷ ಯಲ್ಟಿನ್ ಅವರು ರಷ್ಯದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಕೈಕೊಂಡ ಕ್ರಮಗಳು ನಿರೀಕ್ಷಿತರೀತಿಯಲ್ಲಿ ಫಲ ನೀಡಿಲ್ಲ. ವಿದೇಶಗಳಿಂದ, ಮುಖ್ಯವಾಗಿ ಅಮೆರಿಕದಿಂದ ಅವರು ಬಹಳಷ್ಟು ನೆರವನ್ನು ನಿರೀಕ್ಷಿಸಿದ್ದರು. ಅದೂ ಬರಲಿಲ್ಲ. ಹೀಗಾಗಿ ರಷ್ಯದ ಜನರಲ್ಲಿ ಯಲ್ಟಿನ್ ಅವರ ಆಡಳಿತದ ಬಗ್ಗೆ ಭ್ರಮನಿರಸನವಾಗಿದೆ. ಈ ಮಧ್ಯೆ ಹಿಂದಿನ ಕಮ್ಯೂನಿಸ್ಟರು ಮತ್ತೆ ಒಂದಾಗಲು ಪ್ರಾರಂಭಿಸಿದ್ದಾರೆ. ಹೆಚ್ಚುತ್ತಿರುವ ಜನ ವಿರೋಧದಿಂದಾಗಿ ಯಲ್ಟಿನ್ ಉಗ್ರರಾಗಿದ್ದಾರೆ. ಅವರ ಕೋಪಕ್ಕೆ ಮತ್ತಷ್ಟು ಆಜ್ಯ ಹುಯ್ಯುವಂತ ಸೋವಿಯತ್ ಒಕ್ಕೂಟದ ಮಾಜಿ ನಾಯಕ ಹಾಗೂ ಯಲ್ಟಿನ್‌ರ ಮಿತ್ರ ಮಿಖಾಯಿಲ್ ಗೋರ್ಬಚೆವ್ ಅವರು ಯಲ್ಟಿನ್‌ರ ಆಡಳಿತವನ್ನು ಬಹಿರಂಗವಾಗಿ ಟೀಕಿಸಲು ಆರಂಭಿಸಿರುವುದು ಯಲ್ಟಿನ್ ಅವರಿಗೆ ನುಂಗಲಾಗದ ತುತ್ತಾಗಿದೆ. ಮತ್ತೆ ಗೋರ್ಬಚೇವ್ ಅವರು ಎಲ್ಲಿ ಜನಪ್ರಿಯತೆ ಗಳಿಸಿ ಅಧಿಕಾರಕ್ಕೆ ಬರುವರೋ ಎಂಬ ಚಿಂತೆ ಯಲ್ಟಿನ್ ಅವರನ್ನು ಕಾಡುತ್ತಿದೆ. ಪರಿಣಾಮವಾಗಿ ಗೋರ್ಬಚೆವ್ ಅವರ ಚಟುವಟಿಕೆಗಳ ಮೇಲೆ ಹಾಗೂ ಅವರ ವಿದೇಶ ಪ್ರವಾಸಗಳ ಮೇಲೆ ನಿಯಂತ್ರಣ ವಿಧಿಸಲಾಗಿದೆ. ಯಲ್ಟಿನ್ ಅವರ ಈ ಕ್ರಮಗಳ ವಿರುದ್ಧ ಗೋರ್ಬಚೆವ್ ಅವರೂ ಪ್ರಚಾರ ನಡೆಸಲಾರಂಭಿಸಿದ್ದಾರೆ. ಇದು ಇಬ್ಬರಲ್ಲಿ ಯಾರಿಗೆ ತಿರುಗುಬಾಣವಾಗುವುದೋ ಕಾದು ನೋಡಬೇಕು.

## ಅಮೇರಿಕದಲ್ಲಿ...

ಜಾರ್ಜ್ ಬುಷ್ ಸೋಲಿನೊಂದಿಗೆ ಹನ್ನೆರಡು ವರ್ಷಗಳ ಕಾಲದ ರಿಪಬ್ಲಿಕನ್ ಆಡಳಿತ ಕೊನೆಗೊಳಿಸಿ ಹದಿನಾರು ವರ್ಷಗಳಿಗೊಮ್ಮೆ ಆಡಳಿತ ಸೂತ್ರ ಹಿಡಿಯುವ ಡೆಮಾಕ್ರಾಟಿಕ್ ಪಕ್ಷ ತನ್ನ ಸಂಪ್ರದಾಯವನ್ನು ಮುಂದುವರಿಸಲೆಂಬಂತೆ ಅದರ ಅಭ್ಯರ್ಥಿ ಬಿಲ್ ಕ್ಲಿಂಟನ್ ಅವರನ್ನು ಗೆಲ್ಲಿಸುವ ಮೂಲಕ ಅಲ್ಲಿನ ಪ್ರಜೆಗಳು ವರ್ಷದ ಆದಿಯಲ್ಲಿ ಆರಂಭಗೊಂಡ ವಿಶ್ವದ ಗಮನ ಸೆಳೆದ ಅಮೆರಿಕ ಚುನಾವಣಾ ಫಲಿತಾಂಶಕ್ಕೆ ಮತ್ತು ಅಮೆರಿಕದ ರಾಜಕಾರಣವನ್ನೊಳಗೊಂಡ ವಿಶ್ವ ರಾಜಕಾರಣಕ್ಕೆ ಹೊಸ ತಿರುವು ನೀಡಿದ್ದಾರೆ.

ಈ ಚುನಾವಣೆ ಒಂದು ಮುಕ್ಕೋಣದ ಸ್ಪರ್ಧೆಯಾಗಿದ್ದು, ಫಲಿತಾಂಶ ಪ್ರಕಟಣೆಯಾಗುವಾಗ ಮೊದಲಿನಿಂದಲೂ ಕ್ಲಿಂಟನ್ ಪ್ರಥಮರಾಗೇ ಉಳಿದು, ಭಾರೀ ಅಂತರದಲ್ಲಿ ಗೆದ್ದರು. ಚುನಾವಣಾ ಸಮಯದಲ್ಲಿ ಎರಡೂ ಕಡೆಯಿಂದ ಕೆಸರೆರಚುವ ಪ್ರಯತ್ನಗಳು ನಡೆದುವಾದರೂ, ಜನತೆ ಮಹತ್ವ ನೀಡಿದ್ದು ಆರ್ಥಿಕ ಸಮಸ್ಯೆಯ ಕುರಿತು ಅಭ್ಯರ್ಥಿಗಳು ಅನುಸರಿಸಲಿರುವ ಧೋರಣೆಗೆ. ವಿದೇಶಾಂಗ ನೀತಿಯಲ್ಲಿ ಬುಷ್ ಸಾಧನೆ ಅಮೆರಿಕನರಿಗೆ ತೃಪ್ತಿ ತಂದಿತ್ತಾದರೂ, ಆಂತರಿಕ ವಿಷಯಗಳಲ್ಲಿ, ಅದರಲ್ಲೂ ದೇಶದ ಆರ್ಥಿಕ ಹಿಂಜರಿತವನ್ನು ತಡೆಯಲು ಬುಷ್ ಏನೇನೂ ಮಾಡಲಿಲ್ಲ ಎಂಬ ಬಗ್ಗೆ ಪ್ರಜೆಗಳ ಅಸಮಾಧಾನ ಗುಟ್ಟಾಗಿರಲಿಲ್ಲ. ಕ್ಲಿಂಟನ್‌ಗೆ ಚುನಾವಣಾ ಸಮಯದಲ್ಲಿ ಅನುಕೂಲವಾದ ಈ ವಿಷಯ ಮುಂಬರುವ ದಿನಗಳಲ್ಲಿ ಬುಷ್ ಎದುರಿಸಿದುದಕ್ಕಿಂತ ಹೆಚ್ಚಿನ ಸವಾಲಾಗಲಿದೆ. ಸಹಸ್ರಾರು ಕೈಗಾರಿಕೆಗಳು ಮುಚ್ಚುವ ಸ್ಥಿತಿಯಲ್ಲಿದ್ದು ಲಕ್ಷಾಂತರ ಅಮೆರಿಕನರು ನಿರುದ್ಯೋಗಕ್ಕೆ ಅದೊಂದು ಬಹಳ ದೊಡ್ಡ ದೇಣಿಗೆಯಾಗಿ ಸಮಸ್ಯೆ ಅಲಕ್ಷಿಸಲಾಗದಂತಹುದು. ಸೋವಿಯತ್ ಒಕ್ಕೂಟ ತಲೆಯೆತ್ತುವ ಸ್ಥಿತಿಯಲ್ಲಿಲ್ಲದಿರುವುದರಿಂದ, ರಕ್ಷಣಾ ವೆಚ್ಚದಲ್ಲಿ ಕಡಿತ ಮಾಡಬಹುದಾದರೂ, ರಕ್ಷಣಾ ಸಾಮಗ್ರಿಗಳ ಕೈಗಾರಿಕೆಗಳನ್ನು ನಿಲ್ಲಿಸಿದರೆ ನಿರುದ್ಯೋಗದ ಸಮಸ್ಯೆ ಭೂತಾಕಾರವಾಗಿ ನಿಲ್ಲಲಿದೆ. ಒಂದೆಡೆ ಆರ್ಥಿಕ ಹಿಂಜರಿತ, ಮತ್ತೊಂದೆಡೆ ನಿರುದ್ಯೋಗದ ಸಮಸ್ಯೆ ಸ್ವಲ್ಪ ಆಯ ತಪ್ಪಿದರೂ ಈ ಗೆಲುವೇ ಗಲಭೆಗೆ ಕಾರಣವಾಗುವ ಸೂಕ್ಷ್ಮ ಸ್ಥಿತಿ ಈಗ ಅಮೆರಿಕದಲ್ಲಿದೆ. ಈ ಸತ್ವಪರೀಕ್ಷೆಯಲ್ಲಿ ಕ್ಲಿಂಟನ್ ಹೇಗೆ ಗೆದ್ದು ಬರುವರೋ ಕಾದು ನೋಡಬೇಕು.

# 'ಭಾರತ ಶಿರೋಮಣಿ ಮದರ್ ತೆರೇಸಾ





ಜಗದ ಸಂಕಟ ಅವಳ ಸಂಕಟ
ವಿಶ್ವ ಶಾಂತಿಯೇ ಅವಳ ಗುರಿಯು
ದೀನದಲಿತರೆ ಅವಳ ಮಕ್ಕಳು
ಅವರ ನೋವಿಗೆ ಮಿಡಿವಳು
ದೀನ ದಲಿತಗೆ ಬಾಳು ಮುಡಿಪು
ಜನರ ಸೇವೆಯೇ ಅವಳ ಮತವು
ಪ್ರಕೃತಿ ಕನಲಲು ವಿಲಪಿಸುತಿರೆ ಜನ
ಧಾವಿಸುವಳ್ಳೆ ತವಕದಿಂ
ವೃದ್ಧೆಯಾದರೂ ಶ್ರದ್ಧೆಯಿಂದಲಿ
ಸೇವೆಗೈವಳು ನೇಮದಿಂ
ಅರಿವಿರಾ ಯಾರಿವಳು?
ಅವಳೇ ಕರುಣಾಮಯಿ
ಅಮೃತಮಯಿ
ನಮಿಸುವೆನು ಮನಸಾ
ನಿನಗೆ ಮದರ್ ತೆರೇಸಾ

ಎಲ್ಬೋ ಯುಗೋಸ್ಲಾವಿಯಾದಲ್ಲಿ 1910ರಲ್ಲಿ ಒಂದು ಆಲ್ಬೇನಿಯನ್ ಕುಟುಂಬದಲ್ಲಿ ಆಗ್ನೆಸ್ ಗೊಂಗ್‌ಷಾ ಬೋಜಾದಿಯಾ ಆಗಿ ಜನನ. 1934ರಲ್ಲಿ ದೀಕ್ಷೆ ಹಿಡಿದ ಶಿಕ್ಷಕಿ ಸಿಸ್ಟರ್ ತೆರೇಸಾ ಆಗಿ ಭಾರತಕ್ಕೆ ಆಗಮನ. ಭಾರತಕ್ಕೆ ಬಂದ ಮೇಲೆ ದಾರಿದ್ರ್ಯಭಾರದಿಂದ ಬಳಲುತ್ತಿರುವ ಜನರನ್ನು ಕಂಡು ಅವರ ಸೇವೆ ಮಾಡಲು 1950ರಲ್ಲಿ "ಮಿಷನರಿ ಆಫ್ ಚಾರಿಟೀಸ್'' ಸಂಸ್ಥೆ ಸ್ಥಾಪಿಸಿ ಅಹರ್ನಿಶಿ ದುಡಿದು, ಸೇವಾ ವೃತ್ತಿಯಿಂದ ನಿವೃತ್ತಿಯಾಗದೇ ದೇಶ–ವಿದೇಶ ಗಳಲ್ಲಿ ಕೋಟ್ಯಂತರ ಹತಭಾಗ್ಯರ ಬಾಳಿನ ಬೆಳಕಾಗಿ ಇಂದು ಮದರ್ ತೆರೇಸಾ ಆಗಿದ್ದಾರೆ.

ಬಿಡುವಿಲ್ಲದ ಅವರ ನಿಷ್ಕಾಮ ಸೇವೆಯನ್ನು ನೋಡಿ, ಅವರ ಆದರ್ಶವನ್ನು ಕೊಂಡಾಡಿ "ಭಾರತರತ್ನ'' ನೀಡಿದ ಭಾರತ ಸರಕಾರ, ಇದೀಗ (8–11–'92) ಪ್ರಧಾನಿ ಪಿ.ವಿ.ನರಸಿಂಹರಾವ್ ಅವರ ಮೂಲಕ "ಭಾರತ ಕೀ ಸುಪುತ್ರಿ'' ಎಂಬ ಬಿರುದನ್ನೂ, ರಾಷ್ಟ್ರಪತಿ ಶಂಕರ್‌ದಯಾಳ್ ಶರ್ಮ ಅವರ ಮೂಲಕ "ಭಾರತ ಶಿರೋಮಣಿ'' ಎಂಬ ಪ್ರಶಸ್ತಿ ನೀಡಿ ಸನ್ಮಾನಿಸಿದೆ. ಈ ಶುಭ ಸಮಯ ದಲ್ಲಿ ಮದರ್ ತೆರೇಸಾಗೆ "ವನಿತಾ'' ದೀರ್ಘಾ ಯುಷ್ಯ ಕೋರುತ್ತದೆ.

# ಹೊರನಾಡಿನಲ್ಲಿ ಕನ್ನಡಿಗರು:
# ಅಹಮದಾಬಾದ್ ಕರ್ನಾಟಕ ಸಂಘ





ಫೋಟೋ: ಚಂದನ್

ಹುಟ್ಟೂರು ಬಿಟ್ಟು ಹೊರನಾಡಿಗೆ ವಲಸೆ ಹೋದವರು ಅಲ್ಲಿ ಸಂಘಟಿತರಾಗುವುದು, ಸಂಘ ಸಂಸ್ಥೆಗಳನ್ನು ಸ್ಥಾಪಿಸುವುದು ಸಾಮಾನ್ಯ. ಆದರೆ ಇಂತಹ ಸಂಘಗಳ ಭವಿಷ್ಯ ಸದಸ್ಯರ ಉತ್ಸಾಹ ಹಾಗೂ ಆಸಕ್ತಿಯನ್ನು ಅವಲಂಬಿಸಿರುತ್ತದೆ. 'ಅಹಮದಾಬಾದ್ ಕರ್ನಾಟಕ ಸಂಘ' ಈ ಮಾತಿಗೆ ಹೊರತಾಗಿಲ್ಲ. ಕನ್ನಡ ನಾಡಿನಿಂದ ಬಲು ದೂರವಿರುವ ಇಲ್ಲಿಯ ಕನ್ನಡಿಗರ ಒಗ್ಗಟ್ಟು ಚಟುವಟಿಕೆಗಳೂ ಪ್ರಶಂಸನೀಯ.

1947ರಲ್ಲಿ ಸ್ಥಾಪನೆಯಾಗಿರುವ ಅಹಮದಾಬಾದ್ ಕರ್ನಾಟಕ ಸಂಘವು 1957ರಲ್ಲಿ ರಿಜಿಸ್ಟರ್ ಆಗಿರುತ್ತದೆ. ಕನ್ನಡಿಗರಲ್ಲದೆ ಭಾಷಾಭಿಮಾನವುಳ್ಳ ಕನ್ನಡೇತರರೂ ಸಂಘದ ಸದಸ್ಯರಾಗುವುದಕ್ಕೆ ಇಲ್ಲಿ ಅವಕಾಶ ಇದೆ. ಗುಜರಾತ್ ಯುನಿವರ್ಸಿಟಿಯ ಮಾಜಿ ಉಪ ಕುಲಪತಿಯವರಾದ ಶ್ರೀ ಉಮಾಶಂಕರ ಜೋಶಿ, ಗುಜರಾತಿನ ಮಾಜಿ ಗವರ್ನರ್ ಶ್ರೀ ಎಚ್.ವಿ. ಸೂರೀನ್, ಕೈಗಾರಿಕೋದ್ಯಮಿ ಶ್ರೀ ಜೈಕೃಷ್ಣ ಹರಿವಲ್ಲಭದಾಸ್, ದರ್ಪಣ್ ಅಕಾಡಮಿಯ ಶ್ರೀಮತಿ ಮೃಣಾಲಿನಿ ಸಾರಾಭಾಯಿ ಮೊದಲಾದ ಮಹನೀಯರೂ ಕರ್ನಾಟಕ ಸಂಘದ ಅಭಿಮಾನಿ ಸದಸ್ಯರಾಗಿರುವುದು ಹೆಮ್ಮೆಯ ವಿಷಯ.

ಈ ಸಂಘದ ಮುಖ್ಯ ಉದ್ದೇಶ ಕರ್ನಾಟಕ ಮತ್ತು ಗುಜರಾತದ ನಡುವೆ 'ಭಾಷಾಸೇತು' ಏರ್ಪಡಿಸುವುದು, ಕರ್ನಾಟಕದ ಕಲೆ, ಭಾಷೆ, ಸಾಹಿತ್ಯ, ಸಂಸ್ಕೃತಿ ಮುಂತಾದವುಗಳನ್ನು ಹೊರನಾಡಿನಲ್ಲಿ ಪ್ರಚುರ ಪಡಿಸುವುದು, ಯುವ ಪೀಳಿಗೆಗೆ ತಾಯಿನಾಡಿನ ಸಂಸ್ಕೃತಿ, ಸಂಪ್ರದಾಯಗಳನ್ನು ಪರಿಚಯಿಸಿ, ಅದರ ಬಗ್ಗೆ ಅಭಿಮಾನ ಜಾಗೃತಗೊಳಿಸುವುದಾಗಿದೆ. ಆದರೆ ಇಂತಹ ಕಾರ್ಯಕಲಾಪಗಳನ್ನು ನಡೆಸುವುದಕ್ಕಾಗಿ ಸಂಘಕ್ಕೆ ಸ್ವಂತ ಕಟ್ಟಡವಿಲ್ಲದಿದ್ದುದೂ ಒಂದು ಕೊರತೆಯಾಗಿತ್ತು. ಆದರೂ ಹತ್ತು ಸಾವಿರ ಮಂದಿ ಕನ್ನಡಿಗರಿರುವ ಅಹಮದಾಬಾದ್‌ನಲ್ಲಿ ಈ ಸಮಸ್ಯೆಗೂ ಪರಿಹಾರ ದೊರೆಯಿತು. ಅಂದಿನ ಸ್ಥಾಪಕ ಸದಸ್ಯರ ಪ್ರಯತ್ನದಿಂದಾಗಿ ಗುಜರಾತ ಸರಕಾರ ನೀಡಿರುವ ನಿವೇಶನ ಹಾಗೂ ದಾನಿಗಳಿಂದ ದೊರೆತ ಧನ ಸಹಾಯವೂ ನೆರವಿಗೆ ಬಂತು. 1988ರಲ್ಲಿ ರಿಲಯನ್ಸ್‌ನ ಮೇನೇಜಿಂಗ್ ಡೈರೆಕ್ಟರರಾದ ಶ್ರೀ ರಮಣಿಕ್ ಭಾಯಿ ಅಂಬಾನಿಯವರು ಸಂಘದ ಕಟ್ಟಡವನ್ನು ಉದ್ಘಾಟಿಸಿದ್ದರು.

ಕರ್ನಾಟಕ ಸಂಘವು ಕನ್ನಡ ಭಾಷಾಭಿವೃದ್ಧಿಗಾಗಿ ಕೈಗೊಂಡಿರುವ ಕಾರ್ಯವೂ ಹತ್ತು ಹಲವು. '85ರಲ್ಲಿ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರ ಮುಖಾಂತರ ಗುಜರಾತ ವಿದ್ಯಾಪೀಠದಲ್ಲಿ 'ಕನ್ನಡ ಸಾಹಿತ್ಯ ಪ್ರಚಾರ' ವಿಭಾಗವನ್ನು ಉದ್ಘಾಟಿಸಲಾಗಿತ್ತು.

ಮುಂಬಯಿ ಯುನಿವರ್ಸಿಟಿಯ ಕನ್ನಡ ವಿಭಾಗದ ಮುಖ್ಯಸ್ಥರಾಗಿರುವ ಡಾ। ತಾಳ್ತಜೆ ವಸಂತಕುಮಾರ್ ಅವರಿಂದ 'ಕಾವ್ಯ ಸೌಂದರ್ಯ' ಶೀರ್ಷಿಕೆಯ ಕುರಿತು ಹಾಗೂ ಉಡುಪಿ ಪೇಜಾವರ ಮಠದ ಸ್ವಾಮಿ ವಿಶ್ವೇಶ್ವರ ತೀರ್ಥ ಇವರಿಂದ ಭಗವದ್ಗೀತೆಯ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಲಾಗಿತ್ತು.

ಕರ್ನಾಟಕ ಸಂಘದ ಗ್ರಂಥಾಲಯದಲ್ಲಿ ಸುಮಾರು ಹತ್ತು ಸಾವಿರಕ್ಕಿಂತಲೂ ಹೆಚ್ಚಿನ ಕನ್ನಡ ಪುಸ್ತಕ ಮತ್ತು ಮ್ಯಾಗಜಿನ್‌ಗಳಿವೆ. '74ರಲ್ಲಿ ಶ್ರೀ ಬಿ.ಕೆ. ಹೆಗಡೆಯವರ ಸ್ಮರಣಾರ್ಥವಾಗಿ ಮಕ್ಕಳ ವಿಭಾಗವನ್ನು ತೆರೆಯಲಾಗಿದೆ. ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದ ಶ್ರೀ ಹೆಗಡೆಯವರು ಕರ್ನಾಟಕ ಸಂಘಕ್ಕಾಗಿ ಅಪಾರ ಸೇವೆ ಸಲ್ಲಿಸಿದವರಾಗಿದ್ದರು.

ಆಸಕ್ತರಿಗೆ ಕನ್ನಡದಲ್ಲಿ ಶಿಕ್ಷಣ ಕೊಡಿಸುವುದು, ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಗಳಿಸಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಬಹುಮಾನಗಳನ್ನು ನೀಡಿ ಪ್ರೋತ್ಸಾಹಿಸುವುದು.

ಗುಜರಾತಕ್ಕೆ ಭೇಟಿ ನೀಡುತ್ತಿರುವ ಕನ್ನಡದ ಕವಿ ಕಲಾವಿದರನ್ನು, ಹಿರಿಕಿರಿ ಬರಹಗಾರರನ್ನು, ಪ್ರತಿಭಾವಂತ ಗಣ್ಯ ಅತಿಥಿಗಳನ್ನು ಸಭೆಯಲ್ಲಿ ಗೌರವಿಸುವುದಲ್ಲದೆ ಗಣರಾಜ್ಯೋತ್ಸವ, ಸ್ವಾತಂತ್ರ್ಯೋತ್ಸವಗಳಂತಹ ವಿಶೇಷ ದಿನಗಳಲ್ಲಿ ಕರ್ನಾಟಕದಿಂದ ಕಲಾಕಾರರನ್ನು ಆಹ್ವಾನಿಸಿ ನಾಟಕ, ಯಕ್ಷಗಾನ ಮುಂತಾದ ಕಲೆಗಳ ಪ್ರದರ್ಶನಕ್ಕೂ ಅವಕಾಶ ನೀಡುತ್ತಿರುತ್ತದೆ.

ಮಕ್ಕಳಿಗಾಗಿ ಪೈಂಟಿಂಗ್, ಡ್ರಾಯಿಂಗ್, ನಾಟಕ, ಹಾಡುಗಾರಿಕೆ ಹಾಗೂ ಮಹಿಳೆಯರಿಗಾಗಿ ಅಡುಗೆ, ರಂಗೋಲಿ, ಫಲಪುಷ್ಪ ಪ್ರದರ್ಶನಗಳ ಸ್ಪರ್ಧೆಗಳನ್ನು ಏರ್ಪಡಿಸುವುದು, ತಿಂಗಳಿಗೊಮ್ಮೆ ಸದಸ್ಯೆಯರ ಭೇಟಿ, ಚರ್ಚಾಕೂಟ, ಭಜನೆ, ಶಾಸ್ತ್ರೀಯ ಸಂಗೀತ, ಯೋಗ ತರಬೇತಿ, ಗಣೇಶ ಚತುರ್ಥಿಯಂತಹ ಹಬ್ಬಗಳನ್ನು ಸಾಂಪ್ರದಾಯಿಕ ರೀತಿಯಲ್ಲಿ ಆಚರಿಸುವುದು ಇವೇ ಮೊದಲಾದ ಚಟುವಟಿಕೆಗಳನ್ನೂ ನಡೆಸುತ್ತಿರುತ್ತದೆ.

ರಕ್ತದಾನ ಶಿಬಿರ, ವೈದ್ಯಕೀಯ ತಪಾಸಣೆಗಳಂತಹ ಸಮಾಜ ಸೇವೆಯನ್ನು ಸಂಘ ನೆರವೇರಿಸುತ್ತದೆ.

'72ರಲ್ಲಿ ಅಹಮದಾಬಾದ್ ಕರ್ನಾಟಕ ಸಂಘವು ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿತು. 'ಹೊರನಾಡ ಕನ್ನಡಿಗರು' ಹೆಸರಿನಿಂದ ಸಮ್ಮೇಳನವೂ ಇಲ್ಲಿ ಯಶಸ್ವಿಯಾಗಿ ನೆರವೇರಿಸಲ್ಪಟ್ಟಿದೆ.

ವರ್ಷಗಳು ಉರುಳಿದಂತೆ ಕರ್ನಾಟಕ ಸಂಘದ ಚಟುವಟಿಕೆಗಳು ಮತ್ತು ಸದಸ್ಯರ ಸಂಖ್ಯೆಯೂ ಹೆಚ್ಚುತ್ತಿರುವುದರಿಂದ ಈಗಿರುವ ಕಟ್ಟಡದಲ್ಲಿ ಸ್ಥಳಾಭಾವ ಉಂಟಾಗಿರುವುದೂ ಸಹಜವೇ. ಈ ಕಾರಣದಿಂದಾಗಿ ಇದೀಗ ನೂತನ ಕಟ್ಟಡಕ್ಕೆ ಬೇಕಾಗುವ ಪ್ರಯತ್ನಗಳನ್ನೂ ಕೈಗೊಳ್ಳಲಾಗಿದೆ.

ಇಂದು ಅಹಮದಾಬಾದ್ ಕರ್ನಾಟಕ ಸಂಘದ ಕಾರ್ಯಕರ್ತರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಎಚ್.ವಿ. ಮೂರ್ತಿ, ಎ.ಆರ್.ಕೆ. ಹೆಬ್ಬಾರ್, ಪಿ.ಎಸ್. ಉಪಾಧ್ಯ, ಜಯಂತ್ ಕಾಂಚನ್, ಲಕ್ಷ್ಮಣ ಪೂಜಾರಿ, ಶ್ರೀಮತಿ ವಸಂತಮೂರ್ತಿ, ಶ್ರೀಮತಿ ವಾಣಿ ರಾಮ್‌ಜಿ, ಎ. ಗುರುರಾಜ್, ಬಿ.ಡಿ. ಶ್ರೀಯಾನ್, ಎನ್.ಕೆ. ಸ್ವಾಮಿ ಹಾಗೂ ಇನ್ನಿತರ ಅನೇಕ ಸದಸ್ಯರೂ ಸಂಘದ ಅಭಿಮಾನಕ್ಕೆ ಪಾತ್ರರಾಗಿರುವರು. ಇವರಲ್ಲಿ ಶ್ರೀ ಚಿರಂಜಯಕುಮಾರ್ ಕಾಂಚನ್ ಅವರೂ ಒಬ್ಬರು.

ಸಿಂಡಿಕೇಟ್ ಬ್ಯಾಂಕ್‌ನ ಅಹಮದಾಬಾದ್ ಶಾಖೆಯಲ್ಲಿ ಇವರು ಮ್ಯಾನೇಜರರಾಗಿರುವರು. ಇವರ ಪತ್ನಿ ಶ್ರೀಮತಿ ಸರೋಜ್ ಕಾಂಚನ್‌ರವರು ಕರ್ನಾಟಕ ಸಂಘ ಏರ್ಪಡಿಸಿರುವ ವಿವಿಧ ರೀತಿಯ ಸ್ಪರ್ಧೆಗಳಲ್ಲಿ ಸರೋಜಾ ಹಾಗೂ ಅವರ ಇಬ್ಬರು ಮಕ್ಕಳಿಗೆ ವಿವಿಧ ರೀತಿಯ ಐದು ಬಹುಮಾನಗಳು ದೊರಕಿವೆ. ತಿಂಗಳ ಹಿಂದೆಯಷ್ಟೇ ಅಹಮದಾಬಾದ್‌ನಲ್ಲಿ ಈ ದಂಪತಿಗಳ ಭೇಟಿಯಾದುದೂ ಒಂದು ಆಕಸ್ಮಿಕವೆಂದೇ ಹೇಳಬೇಕು. ಆದರದ ಆಹ್ವಾನ ಮೇರೆಗೆ ಇವರ ಮನೆಗೂ ಹೋಗಬೇಕಾಯಿತು. ಅಲ್ಲಿ ಈ ಕುಟುಂಬದ ಸದಸ್ಯರ ಸದಭಿರುಚಿಗಳನ್ನು ಕಂಡು ಬೆರಗಾಗಿದ್ದೆ. ಸಂಗೀತ ಸಾಧನಗಳು, ಕರಕುಶಲ ವಸ್ತುಗಳು, ಮತ್ತು ಗೋಡೆಯನ್ನು ಅಲಂಕರಿಸಿರುವ ಚಿತ್ರಕಲೆಗಳೂ ನನ್ನನ್ನು ಆಕರ್ಷಿಸಿದವು.



ಕುಮಾರ್ ದಂಪತಿಗಳು ತಮ್ಮ ಪುತ್ರಿಯರೊಂದಿಗೆ

*—ಓಹ್! ವೀಣೆ, ತಬಲ, ತಂಬೂರಿ, ಹಾರ್ಮೋನಿಯಂ! ಇವುಗಳನ್ನ ನಿಮ್ಮಲ್ಲಿ ಯಾರು ನುಡಿಸುತ್ತಿರುವರು?*

ಕುಮಾರ್ ಕಾಂಚನ್:— ಸಂಗೀತವೆಂದರೆ ನಮ್ಮಲ್ಲಿ ಎಲ್ಲರಿಗೂ ಅಚ್ಚುಮೆಚ್ಚು. ನಮ್ಮ ದ್ವಿತೀಯ ಪುತ್ರಿ ಭಾವನಾ ತಬಲ ಬಾರಿಸುವುದರಲ್ಲಿ ತರಬೇತಿ ಪಡೆದಿರುವಳು. ನಾನೂ ಕೆಲವೊಮ್ಮೆ ಅದರಲ್ಲಿ ಇದರಲ್ಲಿ ಕೈಯಾಡಿಸುತ್ತಿದ್ದೇನೆ. ನನ್ನ ಶ್ರೀಮತಿಯು ಇವೆಲ್ಲವನ್ನೂ ನುಡಿಸಲು ಅರಿತಿರುವಳು.

*—ಇನ್ನಿಬ್ಬರು ಮಕ್ಕಳು?*

ಕುಮಾರ್:— ಹಿರಿ ಮಗಳು ಅನುಶ್ರೀ ಹಾಡುವುದು ಮಾತ್ರವಲ್ಲದೆ ನೃತ್ಯದಲ್ಲೂ ಶಿಕ್ಷಣ ಹೊಂದಿರುವಳು. ಕೊನೆ ಮಗಳು ಚಂದನಾ ಹಾಡುಗಾರಿಕೆಯಲ್ಲಿ ಹೆಚ್ಚಿನ ಶ್ರದ್ಧೆ ವಹಿಸಿರುವಳು. ಆದ್ದರಿಂದ ತನ್ನ ತಾಯಿಗೆ 'ಸಾಥಿ'ಯಾಗಿಯೂ ದನಿಗೂಡಿಸುತ್ತಿರುವಳು.

*— ಸರೋಜಾರವರೇ ಹಾಡುಗಾರಿಕೆಯಲ್ಲಿ ಯಾವುದು ನಿಮಗೆ ಇಷ್ಟವಾದುದು? ದಕ್ಷಿಣಾದಿಯೋ ಇಲ್ಲ ಉತ್ತರಾದಿ?*

ಸರೋಜಾ — ಎರಡೂ ವಿಧದ ಹಾಡುಗಾರಿಕೆಯನ್ನು ನಾನು ಇಷ್ಟಪಟ್ಟು ಕಲಿತಿರುವೆನು. ಅಲ್ಲದೆ ಗಜಲ್, ಮರಾಠಿ ಅಭಂಗ, ಜಾನಪದ ಹಾಡುಗಳು, ಗಮಕ ಮತ್ತು ಮಾಡರ್ನ್ ಹರಿಕಥೆ ಮಾಡುವುದರಲ್ಲೂ ನನಗೆ ಬಹಳ ಆಸಕ್ತಿ.

*—ಮಾಡರ್ನ್ ಹರಿಕಥೆ ಅಂದರೇನು? ಇದಕ್ಕೆ ನೀವು ಯಾವ ಕಥೆಯನ್ನು ಆರಿಸಿಕೊಂಡಿರುವಿರಿ? ನೀವು ಕಲಿತಿರುವ ಈ ಎಲ್ಲಾ ವಿಧದ ವಿದ್ಯೆಗಳ ಗುರುಗಳು ಯಾರು?*

ಸರೋಜಾ:— ನಾನು ಸಂಗೀತ ಕಲಿತುದು ಶ್ರೀ ಶಂಕರರಾವ್ ಹಾಗೂ ಬಳ್ಳಾರಿ ಬ್ರದರ್ಸ್ ಅವರಿಂದ. ಶ್ರೀ ರಾಘವೇಂದ್ರರಾವ್‌ರಿಂದ ಗಮಕ ಪಾಠ ಕಲಿತಿದ್ದೆ. ವೀಣೆ ಹೇಳಿಕೊಟ್ಟವರು ಶ್ರೀಮತಿ ಆರತಿ ಆಸುಂಡಿಯವರು. ಆದರೆ ಮಾಡರ್ನ್ ಹರಿಕಥೆಯ ರಚಯಿತರು ಹಾಗೂ ಗುರುಗಳು ಬೇರಾರೂ ಅಲ್ಲ ನಮ್ಮ ಯಜಮಾನರೇ. ಆಧುನಿಕ ರೀತಿ ನೀತಿಯ ಹಾಸ್ಯ ಪ್ರಧಾನವಾದ ಕಥೆಗಳನ್ನು ರಚಿಸಿ ನನ್ನ ಮೂಲಕ ಹಾಡಿಸಿ, ನಲಿಸಿ ಸಭಿಕರ ಮನ ಗೆಲ್ಲುವ ಕಲೆಯನ್ನು ಅವರು ಕರಗತ ಮಾಡಿಕೊಂಡಿರುವರು.

*—ನಿಮ್ಮ ಸ್ಫೂರ್ತಿಗೆ ಕಾರಣ? ಮನೆತನದಿಂದ ಬಂದುದೋ ಅಲ್ಲ ಪರಿಸರದಿಂದ ಪಡೆದುದೋ?*

ಸರೋಜಾ:— ಕಲೆಯ ಬಗ್ಗೆ ಚಿಕ್ಕಂದಿನಿಂದಲೂ ನನಗಿದ್ದ ಆಸಕ್ತಿಗೆ ಮನೆತನದ ಪರಂಪರೆಯೂ ಕಾರಣವಲ್ಲದೆ ಪರಿಸರದ ಪ್ರಭಾವವೂ ನನ್ನ ಮೇಲೆ ಸಾಕಷ್ಟು ಪರಿಣಾಮ ಬೀರಿತ್ತು.

*—ಕುಮಾರ್‌ರವರೇ ಮಾಡರ್ನ್ ಹರಿಕಥೆ ರಚಿಸುವುದಲ್ಲದೇ ಬೇರೆ ಯಾವ ತರದ ಹವ್ಯಾಸಗಳನ್ನು ಬೆಳೆಸಿಕೊಂಡಿರುವಿರಿ ನೀವು?*

ಕುಮಾರ್:— ಮೊದಲೇ ಹೇಳಿದಂತೆ ನಾನು ಸಂಗೀತ ಪ್ರಿಯ. ಇತರ ಹಾಡುಗಾರಿಕೆಗಳಿಗಿಂತ ದೇವರ ನಾಮ ಮತ್ತು ಭಾವಗೀತೆಗಳನ್ನು ಹಾಡುವುದೆಂದರೆ ನನಗೆ ತುಂಬಾ ಸಂತೋಷ. ಚಿಕ್ಕ ವಯಸ್ಸಿನಿಂದಲೂ ಕಥೆ, ಕವನ ಹಾಗೂ ಇನ್ನಿತರ ವಿಷಯಗಳ ಕುರಿತು ಲೇಖನಗಳನ್ನು ಬರೆಯುವ ಗೀಳೂ ನನಗಿದೆ. ಹಿಂದೆ ವ್ಯಾಸಂಗ ಮಾಡುತ್ತಿದ್ದಾಗ ಕಾಲೇಜಿನ ಕಥಾ ಸ್ಪರ್ಧೆಯಲ್ಲಿ ನಾನು ಬರೆದಿರುವ 'ತರ್ಲೆ ಅಪ್ಪಣ್ಣ' ಕಥೆಯು ದ್ವಿತೀಯ ಬಹುಮಾನ ಪಡೆದಿತ್ತು.

*—ನಿಮ್ಮ ಅಭಿರುಚಿಗಳಿಗೆ ಯಾರಿಂದ ಪ್ರೋತ್ಸಾಹ ದೊರಕಿತ್ತು?*

ಕುಮಾರ್:— ನನ್ನ ಅಭಿರುಚಿಗಳನ್ನು ಮೊದಲಿನಿಂದಲೂ ಪ್ರೋತ್ಸಾಹಿಸುತ್ತಿದ್ದವರು ನಮ್ಮ ತಂದೆಯವರಾದ ಶ್ರೀ ಪದ್ಮನಾಭಯ್ಯನವರು. ಇವರೇ ನನ್ನ ಸಂಗೀತದ ಗುರುಗಳೂ ಆಗಿದ್ದರು. ಮುಖ್ಯವಾಗಿ ಭಜನೆಗಳನ್ನು ಹಾಡುವುದರಲ್ಲಿ ಇವರು ಪ್ರಸಿದ್ಧರಾಗಿದ್ದರು. ಸಿಂಡಿಕೇಟ್ ಬ್ಯಾಂಕಿನಲ್ಲಿ ಉನ್ನತ ಹುದ್ದೆಯಲ್ಲಿದ್ದು '62ನೇ ಇಸವಿಯಲ್ಲಿ ನಿವೃತ್ತರಾಗಿದ್ದರು. ಆ ಬಳಿಕ ನನಗೂ ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗ ದೊರೆಯಿತು.

*—ನಿಮ್ಮ ಸ್ವಂತ ಊರು?*

ಕುಮಾರ್:— ನನ್ನ ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಸಮೀಪದ ಮಲ್ಪೆ. ಆದರೆ ಉದ್ಯೋಗ ನಿಮಿತ್ತ ವರ್ಗವಾದ ಕಡೆಗಳಲ್ಲೆ ನನ್ನ ಹೆಚ್ಚಿನ ಜೀವನ ಕಳೆದಿರುತ್ತದೆ.

*—ಸರೋಜಾರವರೇ, ನಿಮ್ಮ ವಿದ್ಯಾಭ್ಯಾಸ ಎಲ್ಲಿವರೆಗೆ ಸಾಗಿದೆ? ನಿಮ್ಮ ವಂಶದಲ್ಲಿ ಯಾರಾದರೂ ಹಾಡುಗಾರರಿದ್ದಾರೆಯೇ?*

ಸರೋಜಾ:— ನನ್ನ ಪೂರ್ವಜರು ದಕ್ಷಿಣ ಕನ್ನಡದ ಕುಂದಾಪುರದವರು. ಆದರೆ ನಾನಿನ್ನೂ ಆ ಊರನ್ನು ನೋಡಿಯೂ ಇಲ್ಲ. ನಾನು ಹುಟ್ಟಿ ಬೆಳೆದುದು ತೀರ್ಥಹಳ್ಳಿಯಲ್ಲಿ. ಪ್ರಥಮ ವಿದ್ಯಾಭ್ಯಾಸವೂ ಅಲ್ಲೇ ಆಯಿತು. ಆ ಬಳಿಕ ಹೈಸ್ಕೂಲು, ಕಾಲೇಜು ಹಾಗೂ ಸಂಗೀತ ಶಿಕ್ಷಣ ತುಮಕೂರು ಮತ್ತು ಬೆಂಗಳೂರಿನಲ್ಲಾಯಿತು. ನಮ್ಮ ಮದುವೆಯಾಗಿ ಮೂರು ಮಕ್ಕಳು ಜನಿಸಿದ ಮೇಲೆ ನಾವಿಬ್ಬರೂ ದಂಪತಿಗಳು ಜತೆಯಾಗಿಯೇ ಎಂ.ಎ. ಪರೀಕ್ಷೆಗೆ ಕಟ್ಟಿ ಪಾಸಾಗಿದ್ದೇವೆ. ನಮ್ಮ ತಾಯಿ ಶ್ರೀಮತಿ ಗಿರಿಜಮ್ಮನವರು. ಅವರ ಸೋದರಿ ಶ್ರೀಮತಿ ಸುಶೀಲರವರು. ಈ ಇಬ್ಬರು ಅಕ್ಕ ತಂಗಿಯರ ಹಾಡುಗಾರಿಕೆ ಅಂದು ತೀರ್ಥಹಳ್ಳಿಯಲ್ಲಿ ಮನೆ ಮಾತಾಗಿತ್ತು. ನನ್ನ ಅಣ್ಣಂದಿರೂ ಭಾಗವಹಿಸುತ್ತಿದ್ದು ಹೆಸರಾಗಿದ್ದರು. ಇಂಥ ಪರಿಸರದಲ್ಲಿ ಬೆಳೆದಿರುವ ನನಗೂ ಸಹಜವಾಗಿ ಆಸಕ್ತಿಗಳು ಮೂಡಿದ್ದವು.

*—ನಿಮ್ಮ ಇನ್ನಿತರ ಹವ್ಯಾಸಗಳೇನು? ಬಿಡುವಿನ ವೇಳೆಯನ್ನು ಅದೇಗೆ ಕಳೆಯುತ್ತಿರುವಿರಿ?*

ಸರೋಜಾ:— ರಂಗೋಲಿ ಹಾಕುವುದು, ತರತರದ ಪಕ್ವಾನ್ನಗಳನ್ನು ತಯಾರಿಸುವುದು, ಹೊಲಿಗೆ, ಹೆಣಿಗೆ, ಗೊಂಬೆ ಮತ್ತು ಇತರ ಕರಕುಶಲ ವಸ್ತುಗಳನ್ನು ತಯಾರಿಸುವುದು, ಥ್ರೋಬಾಲ್ ಮತ್ತು ಶಟಲ್ ಆಡುವುದೂ ನನ್ನ ಬಿಡುವಿನ ವೇಳೆಯ ಹವ್ಯಾಸಗಳಾಗಿವೆ.

*—ನಿಮ್ಮಲ್ಲಿರುವ ಕಲಾಭಿರುಚಿಗಳನ್ನು ನಿಮ್ಮ ಮಕ್ಕಳೂ ಅನುಸರಿಸುತ್ತಿರುವರೇ?*

ಕುಮಾರ್:— ನಮ್ಮಿಬ್ಬರದೂ ಒಂದೇ ತರದ ಅಭಿರುಚಿಗಳಾದುದರಿಂದ ನಾವು ಒಬ್ಬರಿಗೊಬ್ಬರು ಬೆಂಬಲಿಗರಾಗಿರುತ್ತೇವಲ್ಲದೆ ಮಕ್ಕಳಿಗೂ ಕಲೆಯ ಬಗ್ಗೆ ಮಾಹಿತಿ ಉತ್ತೇಜನ ನೀಡಿ ಪ್ರೋತ್ಸಾಹಿಸುತ್ತಿದ್ದೇವೆ. ವಿದ್ಯಾಭ್ಯಾಸದಲ್ಲೂ ನಮ್ಮ ಮಕ್ಕಳು ಬಹಳ ಮುಂದಿದ್ದಾರೆ.

*—ಅಂತೂ ಕುಮಾರ್ ದಂಪತಿಗಳೇ, ನಿಮ್ಮದು ಅಪರೂಪದ ಪರಿವಾರವೆಂದೇ ಹೇಳಬೇಕು. ನೀವೆಲ್ಲರೂ ಸಂಗೀತ ಸಾಹಿತ್ಯಾದಿ ಕಲೆಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡು ಪೋಷಿಸುತ್ತಿರುವುದು ಬಹಳ ಸಂತೋಷದ ವಿಷಯವೇ. ಅಂದ್ಹಾಗೆ ನೀವೀಗ ಅಹಮದಾಬಾದ್‌ಗೆ ವರ್ಗವಾಗಿ ಬಂದು ಇನ್ನೂ ಏಳೆಂಟು ತಿಂಗಳು ಕೂಡಾ ಕಳೆದಿಲ್ಲವೆನ್ನುತ್ತೀರಿ. ಆದರೆ ಇಲ್ಲಿಯ ಭಾಷೆ, ವ್ಯವಹಾರ, ಜನಜೀವನದ ಬಗ್ಗೆ ನಿಮ್ಮ ಅಭಿಪ್ರಾಯ?*

ಕುಮಾರ್ — ಇದುವರೆಗೆ ನಾವು ಭಾರತದ ದಕ್ಷಿಣ ಭಾಗದಲ್ಲೇ ಇದ್ದವರು. ಈಗಷ್ಟೇ ಉತ್ತರ ಭಾರತಕ್ಕೆ ಬಂದಿದ್ದೇವೆ. ಇಲ್ಲಿಯ ಭಾಷೆ, ರೀತಿ ನೀತಿ ಆಚಾರ ವಿಚಾರಗಳು ನಮ್ಮತ್ತ ಕಡೆಗಿಂತ ಭಿನ್ನವಾಗಿರುವುದಾದರೂ ಈ ಪರಿಸರಕ್ಕೆ ಹೊಂದಿಕೊಳ್ಳುವುದಕ್ಕೆ ನಮಗೆ ಅಂತಹ ತೊಂದರೆಗಳೇನೂ ಉಂಟಾಗಲಿಲ್ಲ. ಅದೇನೋ ಹೇಳುತ್ತಾರಲ್ಲಾ? "ಅವರನ್ನು ಮಕ್ಕಾದಲ್ಲಿ ಬಿಟ್ಟು ಬಂದರೂ ಮಧ್ಯಾಹ್ನದ ಊಟಕ್ಕೆ ಮನೆಗೆ ಬರುತ್ತಾರೆಂದು" ಅದೇ ರೀತಿ ನಾವೂ ನಮ್ಮ ಸಮಸ್ಯೆಗಳನ್ನು ಎದುರಿಸಿ ನಮ್ಮ ಕರ್ತವ್ಯಗಳ ಯಶಸ್ಸಿಗಾಗಿ ಪ್ರಯತ್ನಿಸುತ್ತಲೂ ಇದ್ದೇವೆ.

—ಯಜ್ಞಾವತಿ ಕೇಶವ್ ಕಂಗೆನ್,
ಮಂಗಳೂರು

ನವೆಂಬರ್ 30 ಸುಬ್ರಹ್ಮಣ್ಯ ಷಷ್ಠಿ ಪ್ರಯುಕ್ತ:

# ಸುಪ್ರಸಿದ್ಧ ಸುಬ್ರಹ್ಮಣ್ಯ ಕ್ಷೇತ್ರ: ಬಳ್ಳಮಂಜ

—ಶಾರದಾ ಆರ್. ಶಾಸ್ತ್ರಿ


ಶ್ರೀ ಅನಂತೇಶ್ವರ ದೇವರು


ಅಪೂರ್ವ ರಥೋತ್ಸವಕ್ಕೆ ಸೇರಿದ ಜನಸಾಗರ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಬ್ರಹ್ಮಣ್ಯ ಕ್ಷೇತ್ರಗಳೆಂದು ಕಾಟುಕುಕ್ಕೆ, ಸುಬ್ರಹ್ಮಣ್ಯ, ಕುಡುಪು ಮುಂತಾದವುಗಳು ಪ್ರಸಿದ್ಧವಾಗಿದ್ದರೂ ಎಲ್ಲಕ್ಕಿಂತ ಹೆಚ್ಚು ಮಹಿಮಾನ್ವಿತ ಕ್ಷೇತ್ರವೆಂದು ಸುವಿಖ್ಯಾತವಾಗಿ ಬೆಂಗಳೂರು, ಮುಂಬೈ, ಮದರಾಸುಗಳಂಥ ದೂರದ ನಗರಗಳಿಂದಲೂ ಭಕ್ತಾದಿಗಳನ್ನು ಆಕರ್ಷಿಸುವ ಸ್ಕಂದ ದೇವಾಲಯವು ಬೆಳ್ತಂಗಡಿ ತಾಲೂಕಿನಲ್ಲಿದೆ. ಮಂಗಳೂರಿನಿಂದ ಧರ್ಮಸ್ಥಳಕ್ಕೆ ಬರುವ ರಸ್ತೆಯಲ್ಲಿ ಮೂವತ್ತು ಮೈಲು ಬಂದಾಗ ಮಡಂತ್ಯಾರ್ ಎನ್ನುವ ಸ್ಥಳವನ್ನು ಬಳ್ಳಮಂಜ' ಎಂಬ ಹೆಸರಿನಿಂದ ಕರೆಯುತ್ತಿದ್ದು ಇಲ್ಲಿ ಸುಬ್ರಹ್ಮಣ್ಯ ಸ್ವಾಮಿಗೆ ಶ್ರೀ ಅನಂತೇಶ್ವರನೆಂಬ ನಾಮಧೇಯವಿದೆ. ಮಡಂತ್ಯಾರಿನಿಂದ ಇಲ್ಲಿಗೆ ಬರಲೂ ಕೂಡ ಸಾಕಷ್ಟು ಬಸ್ಸು ಮತ್ತು ರಿಕ್ಷಾಗಳ ಸೌಕರ್ಯವೂ ಲಭಿಸುವುದು.

ಹಸಿರಿನ ಹಚ್ಚಡ ಹೊದ್ದ ಪಶ್ಚಿಮ ಘಟ್ಟದ ಭದ್ರಕೋಟೆಯ ನಡುವೆ ನಿಸರ್ಗದೇವಿ ಪಚ್ಚೆ ಸೀರೆಯುಟ್ಟು ನಲಿಯುವ ಪ್ರಶಾಂತ ತಾಣದಲ್ಲಿರುವ ಈ ದೇವಾಲಯದ ನಯನ ಮನೋಹರ ನೋಟ ಚಿತ್ತಾಕರ್ಷಕವೂ ಭಕ್ತಿ ಭಾವ ಪ್ರೇರಕವೂ ಆಗಿದೆ. ಸುಬ್ರಾಯ, ಸುಬ್ಬಪ್ಪ ಮುಂತಾದ ಎಲ್ಲ ಹೆಸರುಗಳೂ ಸಲ್ಲುವ ಸ್ವಾಮಿ ಷಣ್ಮುಖ ನೆಲೆ ನಿಂತಿರುವ ಈ ಕ್ಷೇತ್ರ ತುಳುನಾಡಿನ ನಾಗ ಕ್ಷೇತ್ರಗಳ ಪೈಕಿ ಅತಿ ಪುರಾತನವಾದುದೆಂದು ಇತಿಹಾಸ ಸಂಶೋಧಕರು ಉಲ್ಲೇಖಿಸಿದ್ದಾರೆ. ದಿ. ಎನ್. ಎಸ್. ಕಿಲ್ಲೆಯವರು ತುಳುನಾಡಿನ ವಿವಿಧ ವಿಚಾರಗಳನ್ನು ಸಂಗ್ರಹಿಸಿ ಪ್ರಕಟಿಸಿದ ಪುಸ್ತಕದಲ್ಲೂ ಬಳ್ಳಮಂಜದ ಪ್ರಾಚೀನತೆಯನ್ನು ಕುರಿತು ದಾಖಲೆಗಳಿವೆ. ಕುಕ್ಕೆ ಸುಬ್ರಹ್ಮಣ್ಯದ ಸುಬ್ಬಪ್ಪನಿಗೆ ಬಳ್ಳಮಂಜದ ಅನಂತೇಶ ಸ್ವಾಮಿ ಅಣ್ಣನಾದುದರಿಂದ ಅಲ್ಲಿಗೆ ಹೊತ್ತುಕೊಂಡ ಹರಕೆಗಳನ್ನು ಬಳ್ಳಮಂಜಕ್ಕೆ ಸಲ್ಲಿಸಿದರೆ ಆಗುತ್ತದೆ. ಆದರೆ ಬಳ್ಳಮಂಜಕ್ಕೆ ಹೊತ್ತ ಹರಕೆಯನ್ನು ಇಲ್ಲಿಗೆ ವಿನಾ ಇನ್ನೆಲ್ಲಿಗೆ ಸಲ್ಲಿಸಿದರೂ ಆಗದೆನ್ನುವ ನಂಬುಗೆ ಭಕ್ತಾದಿಗಳಲ್ಲಿ ನೆಲೆಸಿದೆ.

ಪುರಾತನ ಹೇಳಿಕೆ, ಸಾಕ್ಷ್ಯಗಳು, ಅಷ್ಟಮಂಗಲ ಪ್ರಶ್ನೆಯಿಂದ ದೊರಕಿದ ವಿವರಗಳನ್ನು ಪರಿಶೀಲಿಸಿದರೆ ಈ ಸ್ಥಳದಲ್ಲಿ ನಡೆದಿರುವ ಸುಬ್ರಹ್ಮಣ್ಯಾರಾಧನೆ ಏಳುನೂರರಿಂದ ಸಾವಿರ ವರುಷಗಳಷ್ಟು ಹಿಂದಿನದೆಂದು ನಂಬಲು ಆಧಾರಗಳಿವೆ.

ಮಚ್ಚಿನ ಗ್ರಾಮಕ್ಕೆ ಸೇರಿದ ಈ ದೇವಾಲಯ ಸ್ಥಳೇತಿಹಾಸದ ಪ್ರಕಾರ ಬಹು ಹಿಂದೆ ಯಾವ ದೇವರ ನೆಲೆಯೂ ಇಲ್ಲದ ಪ್ರದೇಶವಾಗಿತ್ತು. ಇಲ್ಲಿಗೆ ಅನಂತೇಶ್ವರ ಸ್ವಾಮಿ ಆಗಮಿಸಿ, ಈ ಊರಿಗೆ ಬಳ್ಳಮಂಜ ಎಂಬ ಹೆಸರು ಬರಲು ಕಾರಣವೇನು ಎಂಬುದಕ್ಕೆ ರೋಚಕವಾದ ಒಂದು ಕತೆ ಜನಜನಿತವಾಗಿ ಇದೆ.

ಮಂಗಳೂರಿನ ಬಳಿಯ ಒಂದು ಗ್ರಾಮದಲ್ಲಿದ್ದ ಬ್ರಾಹ್ಮಣ ದಂಪತಿಗಳಿಗೆ ಸಂತಾನವಿರಲಿಲ್ಲ. ಅದಕ್ಕಾಗಿ ಹಲವು ವ್ರತೋಪವಾಸಗಳನ್ನು ಮಾಡಿದರೂ ಫಲ ಸಿಗದೆ ಕಡೆಗೆ ಸುಬ್ರಹ್ಮಣ್ಯನ ಆರಾಧನೆಯಿಂದ ಬ್ರಾಹ್ಮಣಿತಿ ಗರ್ಭವತಿಯಾಗುತ್ತಾಳೆ. ಒಂದು ದಿನ ಅವಳು ನೀರು ತರಲು ಬಾವಿಗೆ ಹೋದಾಗ ಮುದ್ದಾದ ಮಗುವಿನ ಬದಲು ಮೂರು ಮೊಟ್ಟೆಗಳನ್ನು ಪ್ರಸವಿಸುತ್ತಾಳೆ. ಅವುಗಳನ್ನು ಒಂದು ಕುಡುಪು (ತುಳು—ಕುಕ್ಕೆ)ನಲ್ಲಿರಿಸಿ ಮನೆಗೆ ಓಡಿ ಬಂದು, ಈ ವಿಷಯ ತಿಳಿಸುತ್ತಾಳೆ. ಎಲ್ಲರೂ ಬಂದು ನೋಡಿದಾಗ ಮೊಟ್ಟೆಗಳ ಬದಲು ಹೆಡೆ ತೂಗುತ್ತಿದ್ದ ಮೂರು ನಾಗರೂಪಗಳನ್ನು ಕಂಡರು. ಷಣ್ಮುಖನು ಅನಂತ, ಪದ್ಮನಾಭ ಮತ್ತು ಸುಬ್ರಹ್ಮಣ್ಯ ಎಂಬ ಹೆಸರಿನಿಂದ ಹೀಗೆ ಅವತರಿಸಿರುವುದು ಅಶರೀರವಾಣಿಯಿಂದ ತಿಳಿಯಿತು. ಅಲ್ಲೇ ಅವರಿಗಾಗಿ ದೇವಾಲಯ ನಿರ್ಮಿಸಿ ಊರಿಗೆ ಕುಡುಪು ಎಂದೇ ಹೆಸರಿಡಲಾಯಿತು.

ಪ್ರತಿ ವರ್ಷ ಕುಕ್ಕೆ ಷಷ್ಠಿಯಲ್ಲಿ ಅಲ್ಲಿ ರಥೋತ್ಸವ. ಉತ್ಸವದ ರಾತ್ರಿ ದೇವಾಲಯದ ಒಳಾಂಗಣದಲ್ಲಿ ನಡೆಯುವ ವಿಶಿಷ್ಟ ಸೇವೆ ಭೂತಬಲಿಯನ್ನು ಅರ್ಚಕ ವರ್ಗದ ಹೊರತು ಬೇರೆ ಯಾರೂ ನೋಡಬಾರದು. ಆದರೆ ಒಬ್ಬ ಬಾಲ ಬ್ರಹ್ಮಚಾರಿ ಒಂದು ಮರವೇರಿ ಕುಳಿತು ಭೂತಬಲಿಯನ್ನು ನೋಡಿದ. ಬಲಿ ನಡೆಯುವಾಗ ಪಲ್ಲಕ್ಕಿಯಲ್ಲಿ ವಿರಾಜಮಾನನಾಗಿದ್ದ ಅನಂತ ಸ್ವಾಮಿಯು ಅದನ್ನು ಕಂಡು ಹೆಡೆಯೆತ್ತಿ ಫೂತ್ಕರಿಸಿದ. ಆ ವಿಷಾಗ್ನಿಗೆ ಸಿಲುಕಿ ಬಾಲ ಬ್ರಹ್ಮಚಾರಿಯು ಸುಟ್ಟು ಕರಕಲಾಗಿ ಹೋದ.

ಬ್ರಹ್ಮ ಹತ್ಯಾ ಪಾತಕ ದೇವರನ್ನೂ ಬಿಡಲಿಲ್ಲ. ಆ ಕಾರಣಕ್ಕಾಗಿ ಉಳಿದಿಬ್ಬರು ಅನಂತ ಸ್ವಾಮಿಯನ್ನು ಗರ್ಭಗುಡಿಯ ಹೊರಗೆ ನಿಲ್ಲಿಸಿ, ಬಹಿಷ್ಕಾರ ವಿಧಿಸಿ ಬಿಟ್ಟರು. ಅನಂತ ಅಲ್ಲಿ ನಿಂತ ಕುರುಹಿಗೆ ಈಗಲೂ ವಿಸ್ತಾರವಾದ ಹುತ್ತವೊಂದು ಸಾಕ್ಷಿಯಾಗಿದೆ.

ಅಲ್ಲಿಂದ ತಾನು ನಿಲ್ಲಲು ನೆಲೆಯೊಂದನ್ನು ಹುಡುಕುತ್ತಾ ಅನಂತ ಬೆಳ್ತಂಗಡಿ ತಾಲೂಕಿನ ಕುತ್ಯಾರಿನ ಈಶ್ವರ ದೇವಾಲಯ ಹಾಗೂ ನಾಳದ ದುರ್ಗಾ ಪರಮೇಶ್ವರಿ ದೇವಾಲಯಗಳಿಗೆ ಹೋದನಂತೆ. ಅಲ್ಲೂ ಬ್ರಹ್ಮಹತ್ಯಾ ಪಾತಕದ ಕಾರಣದಿಂದ ನೆಲೆ ಸಿಗಲಿಲ್ಲ. ತಾನಲ್ಲಿಗೆ ಬಂದ ನೆನಹಿಗಾಗಿ ಆಳೆತ್ತರದ ಹುತ್ತಗಳನ್ನು ಸಾಕ್ಷಿಯಾಗಿ ಉಳಿಸಿ, ಅನಂತೇಶ ಕುಡುಪಿನಿಂದ ಜತೆಗಾರರಾಗಿ ಬಂದ ಭೂತದೈವಗಳನ್ನು ಕರೆದು ತನಗೆ ನಿಲ್ಲಲು ಪ್ರಶಸ್ತ ಸ್ಥಳಗಳನ್ನು ಅರಸಿಕೊಂಡು ಬರಲು ಆಜ್ಞಾಪಿಸಿದನು. ಅವು ಮಚ್ಚಿನ ಗ್ರಾಮಕ್ಕೆ ಬಂದು ಅಲ್ಲಿ ಪ್ರಕೃತಿ ಮನೋಹರ ದೃಶ್ಯಗಳನ್ನು ಕಂಡು ತಮಗೆ ಸರಿಯೆನಿಸಿದಲ್ಲಿ ನೆಲೆ ನಿಂತುವು.

ಆಗ ಮಚ್ಚಿನ ಗ್ರಾಮದಲ್ಲಿ ಜೈನ ವಂಶದ ಬಲ್ಲಾಳರು ಮುಖ್ಯಸ್ಥರಾಗಿದ್ದರು. ಊರಿನಲ್ಲಿ ದೇವಾಲಯವಿರಲಿಲ್ಲ. ದೈವ ಭಕ್ತರಾದ ಬಲ್ಲಾಳರು ದಿನಾಲೂ ನೆರೆಯ ಪಾರೆಂಕಿ ಗ್ರಾಮದ ಮಹಿಷ ಮರ್ದಿನಿ ದೇವಾಲಯಕ್ಕೆ ಹೋಗಿ ತೀರ್ಥ ಪ್ರಸಾದ ಪಡೆಯದೆ ಆಹಾರ ಸ್ವೀಕರಿಸುತ್ತಿರಲಿಲ್ಲ. ಅದೊಂದು ಸಾರೆ ಪೂಜಾರಿ ಬೇಗನೆ ಪೂಜೆ ಮುಗಿಸಿ ಹೋದುದರಿಂದ ಬಲ್ಲಾಳರು ತೀರ್ಥ ಸಿಗದೆ ನಿರಾಶೆಯಿಂದ ಹಿಂತಿರುಗಿ ಉಪವಾಸ ಇರಬೇಕಾಯಿತು. ಪ್ರತಿ ವರ್ಷ ಮಚ್ಚಿನ ಗ್ರಾಮದ ಮಲೆಕುಡಿಯರು ನೆರೆ ಗ್ರಾಮದ ಕಾಲ್ಚೆಂಡಾಟ ಮೊದಲಾದ ಪಂದ್ಯಗಳಿಗೆ ಹೋಗುತ್ತಿದ್ದರು. ಸೋತು ಬರುತ್ತಿದ್ದರು. ದೇವರಿಲ್ಲದ ಗ್ರಾಮದವರು ಗೆಲ್ಲಲಿಕ್ಕುಂಟೆ? ಎಂಬ ಅವಹೇಳನ ಪಡೆಯುತ್ತಿದ್ದರು. ಆಕಸ್ಮಿಕ ಎಂಬಂತೆ ಆ ದಿನ ಮಚ್ಚಿನದವರು ಗೆದ್ದರು. ಆದರೆ ದೇವರಿಲ್ಲದ ಗ್ರಾಮದವರು ಗೆದ್ದರೆಷ್ಟು ಸೋತರೆಷ್ಟು ಎಂಬ ಕೀಳು ನುಡಿ ಕೇಳಿ ಬಂದು ಬಲ್ಲಾಳರಲ್ಲಿ ನಡೆದುದನ್ನು ಹೇಳಿ ಗೋಳಿಟ್ಟರು.

ಇದೇ ಚಿಂತೆಯಲ್ಲಿದ್ದ ಬಲ್ಲಾಳರಿಗೆ ಆ ದಿನ ರಾತ್ರಿ ಕನಸಿನಲ್ಲಿ ಹೆಡೆದೂಗುತ್ತಾ ಸುಬ್ರಹ್ಮಣ್ಯ ಸ್ವಾಮಿ ಕಾಣಿಸಿ, "ನಿನ್ನ ಊರಿಗೆ ಬಂದು ದೇವರಿಲ್ಲದ ಗ್ರಾಮವು ಎಂಬ ಕೊರತೆಯನ್ನು ನೀಗುತ್ತಿದ್ದೇನೆ. ನನಗೆ ದೇವಾಲಯ ಕಟ್ಟಿಸಿ ಕೊಡು'' ಎಂದು ಆದೇಶಿಸಿದ.

ಆ ಊರಿನಲ್ಲಿ ಸೇಂದಿ ಮಾರುವ ಬಿಲ್ಲತಿ ಹೆಂಗಸು ರಾತ್ರೆ ವ್ಯಾಪಾರ ನಿಲ್ಲಿಸಿ, ಪ್ರತಿಯಾಗಿ ಬಂದ ಒಂದು ಮುಡಿ ಬತ್ತವನ್ನು ಒಬ್ಬ ಕುಡಿಯನಿಂದ ಹೊರಿಸಿಕೊಂಡು ಮನೆಗೆ ಹೊರಟಳು. ನಡು ದಾರಿಯಲ್ಲಿ ಒಂದು ವಿಚಿತ್ರ ನಡೆಯಿತು. ಇದ್ದಕ್ಕಿದ್ದ ಹಾಗೆ ಆ ಬತ್ತದ ಮುಡಿ ಗಿರಗಿರನೆ ಗಾಳಿಯಲ್ಲಿ ತಿರುಗಿ ಮಾಯವಾಯಿತು. ಆ ಸ್ಥಳಕ್ಕೆ ಈಗ 'ಮುಡಿಪ್ಪುರೆ' ಎಂದು ಕರೆಯುತ್ತಾರೆ. ಆಗ ಬಿಲ್ಲತಿಗೆ ತಾನು ಸಿಕ್ಕಿದ ಚಿಲ್ಲರೆ ಹಣವನ್ನು ಸೇಂದಿ ಮಾರುವ ಕಟ್ಟೆಯಲ್ಲಿ ಬತ್ತ ಅಳೆಯುವ ಬಳ್ಳ ಎಂಬ ಸಾಧನದೊಳಗೆ ಬಿಟ್ಟು



ಪಾಲಕಿ ಉತ್ಸವದ ಮುನ್ನ



ದರ್ಶನ ಬಲಿ



ಪಾಲಕಿ ಉತ್ಸವ

ಬಂದುದು ನೆನಪಾಗಿ ಅದನ್ನು ತರಲು ಕುಡಿಯನೊಂದಿಗೆ ಬಂದು ಬಳ್ಳದೆಡೆಗೆ ಬಾಗಿದಳು. ಅದರೊಳಗೆ ಕೋಟಿ ಸೂರ್ಯ ಪ್ರಭೆಯಿಂದ ಪ್ರಕಾಶಿಸುತ್ತಾ ಬಂಗಾರದ ಬಣ್ಣದಿಂದ ಮಿಂಚುವ ಹಳದಿ ಹೆಡೆಮೂಗುತ್ತಿದ್ದ ಅನಂತಸ್ವಾಮಿಯನ್ನು ಕಂಡು, "ಬಳ್ಳೊಡು ಮಂಜಲ್!" (ತುಳು – ಬಳ್ಳದಲ್ಲಿ ಹಳದಿಯವನು) ಎಂದು ಕೂಗಿದಳು. ಕೂಡಲೇ ಈ ಸುದ್ದಿ ಬಲ್ಲಾಳರಲ್ಲಿಗೆ ಹೋಗಿ ಹೇಳಿದಳು.

ಬಲ್ಲಾಳರು ಬಂದಾಗ ಸೇಂದಿ ಕಟ್ಟೆಯಲ್ಲಿ ಬಳ್ಳದೊಳಗೆ ಆಳೆತ್ತರದ ಬೃಹದಾಕೃತಿಯ ಹುತ್ತವೊಂದು ತಲೆಯೆತ್ತಿರುವುದನ್ನು ನೋಡಿದರು. ಗ್ರಾಮಕ್ಕೆ ಆಗ ಮಿಸಿದ ಅನಂತೇಶ ಸ್ವಾಮಿಯ ಮೂಲಸ್ಥಾನ ಎಂದು ಪರಿಗಣಿಸಿ, ಅದೇ ಸ್ಥಳಕ್ಕೆ ಪ್ರತ್ಯೇಕವಾದ ಗುಡಿಯೊಂದನ್ನು ಕಟ್ಟಿಸಿದರು. ಅಲ್ಲಿಗೆ ಪ್ರತ್ಯೇಕ ಪೂಜೆ ನಡೆಯುವುದು. ಮೂಲಸ್ಥಾನದ ಮೃತ್ತಿಕೆಯ ಲೇಪನ ರೋಗನಿವಾರಕ, ಸೇವನೆಯೂ ಪಾಪಹರ – ಪುಣ್ಯಕರವೆಂಬ ನಂಬಿಕೆಯೂ ಹರಡಿದೆ. ಬಳ್ಳದಲ್ಲಿ ಹಳದಿಯ ಸ್ವಾಮಿ ಉದಿಸಿದ ಊರು 'ಬಳ್ಳಮಂಜ' ಎಂದೇ ಖ್ಯಾತಿಯನ್ನು ಪಡೆಯಿತು.

ಪ್ರತ್ಯೇಕವಾಗಿ ಅನಂತೇಶ್ವರ ಸ್ವಾಮಿಯನ್ನು ಪ್ರತಿಷ್ಠಾಪಿಸಿ, ದೇವಾಲಯ ನಿರ್ಮಾಣ ಮಾಡಿ ನೈಮಿತ್ತಿಕ ಸೇವೆಗಳಿಗೆ ವ್ಯವಸ್ಥೆ ಮಾಡಲಾಯಿತು. ಇದಲ್ಲದೆ ಗಣಪತಿ ವಿಗ್ರಹ ಸ್ಥಾಪನೆ, ಪಕ್ಕದಲ್ಲೇ ಈಶ್ವರ ದೇವರಿಗಾಗಿ ಒಂದು ಗುಡಿಯನ್ನೂ ನಿರ್ಮಾಣ ಮಾಡಲಾಯಿತು. ಇತ್ತೀಚೆಗೆ ಇಲ್ಲಿ ನೂತನ ಶಿವ ಲಿಂಗವನ್ನು ಸ್ಥಾಪಿಸಿ, ಬ್ರಹ್ಮ ಕಲಶಾದಿ ಧಾರ್ಮಿಕ ವಿಧಿಗಳು, ಮೂಲಸ್ಥಾನ ಗುಡಿಯ ಸುಸಜ್ಜಿತ ಕಾರ್ಯ ನಡೆಯಿತು.

ಪ್ರತಿ ವರ್ಷ ಸುಬ್ರಹ್ಮಣ್ಯ ಷಷ್ಠಿಯಂದು ಇಲ್ಲಿ ವೈಭವೋಪೇತವಾದ ರಥೋತ್ಸವ ನಡೆಯುತ್ತಿದ್ದು ದೂರದೂರದ ಊರುಗಳಿಂದಲೂ ಸಹಸ್ರಾರು ಸಂಖ್ಯೆಯಲ್ಲಿ ಭಕ್ತರು ಬರುತ್ತಾರೆ. ಪಂಚಮಿಯಂದು ರಾತ್ರೆ ನಡೆಯುವ ಕಿರು ರಥೋತ್ಸವವೂ ವೈಶಿಷ್ಟ್ಯಪೂರ್ಣವಾಗಿದೆ. ಸಂತಾನವಿಲ್ಲದವರಿಗೆ ತುಲಾಭಾರದ ಹರಕೆ ಹೊತ್ತಾಗ ಸಂತಾನ ಭಾಗ್ಯ ಲಭಿಸಿದ ಉದಾಹರಣೆಗಳಿವೆ. ನಾನಾ ಹರಕೆಗಳಿಂದ ರೋಗಮುಕ್ತರಾದವರ ಪುರಾವೆಗಳಿವೆ. ದೇವಾಲಯದ ಎದುರಿನ ಧ್ವಜಸ್ತಂಭಕ್ಕೆ ಕರುವನ್ನು ಕಟ್ಟುವುದಾಗಿ ಹರಕೆ ಹೊತ್ತರೆ ಗೊಡ್ಡು ಆಕಳುಗಳು ಕರು ಹಾಕುತ್ತವೆ. ಮೂಲಸ್ಥಾನದ ಬಳಿ ಬರೇ ನೆಲದಲ್ಲಿ (ಎಲೆ ಹಾಕದೆ) ಭೋಜನ ಮಾಡುವ ಹರಕೆ ಹೊತ್ತರೆ ಸಕಲ ಅಭೀಷ್ಟಗಳೂ ಸಿದ್ಧಿಸುತ್ತವೆ.

ಜಾತ್ರೆಯ ದಿನ ಅಂಗಣದಲ್ಲಿ ಮಾಡುವ ಮಡೆಸ್ನಾನ ಎಂಬ ಉರುಳು ಸೇವೆಯಲ್ಲಿ ಅನೇಕ ಭಕ್ತರು ಪಾಲ್ಗೊಳ್ಳುತ್ತಾರೆ. ಬೆಳ್ಳಿಯ ಹೆಡೆ ಹಾಗೂ ನಾನಾ ವ್ಯಾಧಿಗಳ ನಿವಾರಣೆಗೆ ಆಯಾ ಅಂಗದ ಪ್ರತಿರೂಪ ದೇವರಿಗೆ ಸಲ್ಲಿಸುವುದು ಒಂದು ಹರಕೆ.

ರಥೋತ್ಸವದ ವೇಳೆಗೆ ಗರುಡ ಪಕ್ಷಿ ಆಗಮಿಸುವುದು ಕಾಣಲೇಬೇಕಾದ ದೃಶ್ಯ. ಪ್ರತಿವರ್ಷ ರಥ ಎಳೆಯಲು ಆರು ಬೆತ್ತಗಳು ಬೇಕು. ಇದೇ ಗ್ರಾಮದ ಹಾಂತ್ರಲು ಎಂಬಲ್ಲಿ ಪ್ರಕೃತಿ ನಿಯಮವಾಗಿ ಆರು ಬೆತ್ತಗಳು ಮಾತ್ರ ಬೆಳೆಯುತ್ತಿದ್ದು ಅವನ್ನು ಕಡಿದರೆ ಮುಂದಿನ ವರ್ಷ ಅಷ್ಟೇ ಬೆತ್ತಗಳು ಸಿದ್ಧವಾಗುತ್ತವೆ.

ಬಳ್ಳಮಂಜದಲ್ಲಿ ವಿಶೇಷ ಉತ್ಸವ, ಬಲಿಗಳು ನಡೆಯುತ್ತಲೇ ಇರುತ್ತವೆ. ಕುಡುಪಿನಲ್ಲಿ ಸ್ವಾಮಿ ಎಸಗಿದ ಬ್ರಹ್ಮಹತ್ಯಾ ದೋಷ ನಿವಾರಣೆಗಾಗಿ ಸಿಂಹಮಾಸದಲ್ಲಿ ಈ ದಿನಾಲೂ ಬ್ರಾಹ್ಮಣ ಸಂತರ್ಪಣೆ ನಡೆಯುತ್ತದೆ. ಏಪ್ರಿಲ್ ತಿಂಗಳ ಕೊನೆಯಲ್ಲಿ ಈಶ್ವರ ದೇವರ ರಥೋತ್ಸವ, ಚಂದ್ರಮಂಡಲ ರಥೋತ್ಸವ ನಡೆಯುತ್ತದೆ. ದೇವರ ಅವಭೃತ ಸ್ನಾನಕ್ಕಾಗಿ ಪ್ರಕೃತಿಯೇ ನಿರ್ಮಿಸಿದ ದೇವರ ಗುಂಡಿ ಎಂಬ ಸರೋವರ ಇದೆ. ಇದರಲ್ಲಿ ಕಡುಬೇಸಿಗೆಯಲ್ಲೂ ನೀರು ಕಮ್ಮಿಯಾಗದೆ, ಮಳೆಗಾಲದಲ್ಲಿ ಅಧಿಕವಾಗದೆ ಸ್ಫಟಿಕ ಜಲ ಲಕಲಕಿಸುತ್ತದೆ. ದೇವಾಲಯದ ಬಳಿಯೇ ಅನಂತ ತೀರ್ಥ ಎಂಬ ಕೆರೆ ಇದೆ.

ಈ ದೇವರ ಮಹಿಮೆ, ಪವಾಡಗಳ ಬಗೆಗೆ ಸಾಕ್ಷ್ಯಗಳು, ನಂಬಿಕೆಗಳು ಹೆಜ್ಜೆ ಹೆಜ್ಜೆಗೂ ಕಾಣಸಿಗುತ್ತವೆ. ಕ್ಲಾರಿಯೋನೆಟ್ ವಾದಕ ಕದ್ರಿ ಗೋಪಾಲನಾಥ್, ಯೋಗಪಟು ಬಂಟ್ವಾಳ ನವೀನಕುಮಾರ್ ಮೊದಲಾದವರು ಈ ಕ್ಷೇತ್ರಕ್ಕೆ ಬಂದು ಸೇವೆ ಸಲ್ಲಿಸಿದ ಬಳಿಕ ಜಗತ್ಪ್ರಸಿದ್ಧರಾಗಿ ವಿದೇಶ ಯಾತ್ರೆಯನ್ನು ಮಾಡಿ ಬಂದರು. ಈಗ ಇಲ್ಲಿಯ ಅಪಾರ ಭಕ್ತವೃಂದದಲ್ಲಿ ಅಂತಹ ಅನೇಕರನ್ನು ಕಾಣಬಹುದು.

ದಿನದಿಂದ ದಿನಕ್ಕೆ ಆಸ್ತಿಕರನ್ನು ಹೆಚ್ಚು ಸಂಖ್ಯೆಯಲ್ಲಿ ಬಳಿಗರೆಯುವ ಬಳ್ಳಮಂಜ ಕಾಣಲೇಬೇಕಾದ ಮಹಿಮಾನ್ವಿತ ಕ್ಷೇತ್ರ. ನಾಗರಪಂಚಮಿಯಂದು ಇಲ್ಲಿ ನಾಗಾರಾಧನೆಯೂ ನಡೆಯುತ್ತದೆ.

ಚಿತ್ರಗಳ ಕೃಪೆ : ಅನುಪಮಾ ಜಿ. ಕೈಲಾಸ ಮತ್ತು ಜಯಪ್ರಕಾಶ ಸುಳಿಗೆತ್ತಾಯ

**ದೀನ ದಲಿತ ಮಹಿಳೆಯರ ಅಭ್ಯುದಯಕ್ಕೆ ಶ್ರಮಿಸುತ್ತಿರುವ ಸಮಾಜ ಸೇವಕಿ**





# ಶ್ರೀಮತಿ ರೋಹಿಣಿ ಹರಿಹರೇಶ್ವರ





ಮೋಹನ್ ದಾರಿಯಾ ಅವರಿಂದ 'ವಿಕಾಸ್ ರತನ್' ಪ್ರಶಸ್ತಿ



ಮಹಿಳೆಯರ ಶೋಷಣೆ ತಪ್ಪಬೇಕಾದರೆ ಪ್ರತಿಯೊಬ್ಬ ಮಹಿಳೆಯೂ ವಿದ್ಯಾವಂತಳಾಗಬೇಕು, ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವಂತಾಗಬೇಕು. ಇದು ಸಾಧ್ಯವಾಗಬೇಕಾದರೆ ಮೊದಲು ಅವರಲ್ಲಿರುವ ಅಜ್ಞಾನ, ಮೂಢ ನಂಬಿಕೆಗಳನ್ನು ತೊಡೆದು ಹಾಕಬೇಕು. ಆಗಲೇ ಅವರ ಅಭ್ಯುದಯ ಸಾಧ್ಯ. ಈಚಿನ ವರ್ಷಗಳಲ್ಲಿ ಅನೇಕ ಮಂದಿ ಸುಶಿಕ್ಷಿತ ಮಹಿಳೆಯರು ಈ ಕಾರ್ಯಕ್ಕೆ ಮುಂದಾಗಿದ್ದಾರೆ. ಅವರಲ್ಲಿ ಕೆಲವರು ತಮ್ಮ ಬಿಡುವಿನ ವೇಳೆಯಲ್ಲಿ ಈ ಸಮಾಜ ಸೇವೆಯ ಕಾರ್ಯ ನಿರ್ವಹಿಸುತ್ತಿದ್ದಾರೆ. ಮತ್ತೆ, ಕೆಲವರು, ಶ್ರೀಮಂತ ಮಹಿಳೆಯರು ತಮ್ಮ ಸ್ವಂತ ಕೀರ್ತಿ ಪ್ರತಿಷ್ಠೆಗಳನ್ನು ಮೆರೆಸಲು ಸಮಾಜ ಸೇವೆಗೆ ತೊಡಗುತ್ತಾರೆ. ಆದರೆ ಸಮಾಜ ಸೇವೆಗೆಂದೇ ತಮ್ಮ ಇಡೀ ಸಮಯವನ್ನು, ಜೀವನವನ್ನು ಮುಡಿಪಾಗಿಟ್ಟ ಮಹಿಳೆಯರು ಬಹಳ ವಿರಳ. ಅಂಥ ಒಬ್ಬ ಸಮಾಜ ಸೇವಕಿ ಬೆಂಗಳೂರಿನ ಶ್ರೀಮತಿ ರೋಹಿಣಿ ಹರಿಹರೇಶ್ವರ.

ಸಮಾಜ ಸೇವೆಗೆ ಉದ್ಯೋಗ ಅಡ್ಡಬರುತ್ತಿದೆ, ಎಂದು ಮನವರಿಕೆಯಾದಾಗ ತನ್ನ ಉದ್ಯೋಗಕ್ಕೇ ರಾಜೀನಾಮೆ ನೀಡಿ ಪೂರ್ಣ ಪ್ರಮಾಣದ ಸಮಾಜ ಸೇವಿಕೆಯಾಗಿ ಶ್ರಮಿಸುತ್ತಿರುವ ವನಿತೆ ರೋಹಿಣಿ.



## ವ್ಯಕ್ತಿ ಪರಿಚಯ

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕಂಡ್ಲೂರಿನಲ್ಲಿ ರೋಹಿಣಿ ಜನಿಸಿದರು. ತಂದೆ ಬಿ. ಆರ್. ಕೃಷ್ಣ ಸ್ವಾತಂತ್ರ್ಯ ಹೋರಾಟದಲ್ಲಿ ಸೆರೆಮನೆವಾಸ ಅನುಭವಿಸಿದರು. ಸ್ವಾತಂತ್ರ್ಯಾನಂತರ ಸಾಗರದಲ್ಲಿ ಶ್ರೀ ಸರಸ್ವತಿ ಮಿತ್ರ ಮಂಡಳಿಯ ಅನೇಕ ನಾಟಕಗಳಲ್ಲಿ ಅಭಿನಯಿಸಿ ಪ್ರಶಸ್ತಿಗಳನ್ನು ಪಡೆದವರು. ತಾಯಿ ಸರೋಜಮ್ಮ ಅವರಿಗೆ ಬಡವರ ಬಗ್ಗೆ ಕಳಕಳಿ. ಸಮಾಜ ಸೇವೆಯಲ್ಲಿ ತೊಡಗಿಕೊಂಡರು. ಈ ಇಬ್ಬರ ಲಕ್ಷಣಗಳು ರೋಹಿಣಿ ಅವರಲ್ಲಿ ರಕ್ತಗತವಾಗಿ ಮೂಡಿಬಂದವು. ಚಿಕ್ಕಂದಿನಲ್ಲೇ ನೃತ್ಯ ನಾಟಕಗಳ ಗೀಳು. ಅದಕ್ಕೆ ತಾಯಿ ತಂದೆಯರ ಪ್ರೋತ್ಸಾಹದ ಶ್ರೀರಕ್ಷೆ.

ಬಡ ಮಹಿಳೆಯರು, ಅದರಲ್ಲೂ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವ ನಿತ್ಯ ಶೋಷಿತ ಮಹಿಳೆಯರು ಮತ್ತು ಅವರ ಅಭಾಗ್ಯ ಮಕ್ಕಳ ಭವಿಷ್ಯದ ಬಗೆಗೆ ರೋಹಿಣಿ ಅವರಿಗೆ ವಿಶೇಷ ಕಾಳಜಿ. ಎಂತಲೇ ಅನೇಕ ಕೊಳಚೆ ಪ್ರದೇಶಗಳಲ್ಲಿ ಅವರು ಕೆಲಸ ಮಾಡಿ ಅಲ್ಲಿನ ಬಡ ಹಾಗೂ ಕೂಲಿ ಜನರಿಗೆ ಬಹಳಷ್ಟು ನೆರವು ನೀಡಿದ್ದಾರೆ. ರೇಷನ್ ಕಾರ್ಡ್‌ಗಳಿಲ್ಲದೆ, ಆಹಾರಕ್ಕಾಗಿ ಪರದಾಡುತ್ತಿರುವ ಬಡ ಜನರಿಗೆ ರೇಷನ್ ಕಾರ್ಡ್‌ಗಳನ್ನು ಮಾಡಿಸಿಕೊಡುವುದು, ವೃದ್ಧಾಪ್ಯ ವೇತನ ಕೊಡಿಸುವುದು, ಗರ್ಭಿಣಿ ಸ್ತ್ರೀಯರಿಗೆ ವೈದ್ಯಕೀಯ ಸೇವೆ, ಬಟ್ಟೆ ಬರೆ ಹಾಗೂ ಪುಸ್ತಕಗಳ ವಿವರಣೆ, ಕುಡಿಯುವ ನೀರಿನ ಪೂರೈಕೆಗೆ ಸಹಾಯ, ಕಾನೂನಿನ ನೆರವು ಹೀಗೆ ಹಲವು ಹತ್ತು ಸೇವಾ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ ರೋಹಿಣಿ. ಸಂಜೆ ತರಗತಿಗಳನ್ನು ತೆರೆದು ಅವಿದ್ಯಾವಂತ ವಯಸ್ಕರಿಗೆ ಶಿಕ್ಷಣ ನೀಡುತ್ತಿದ್ದಾರೆ. ಹರಿಜನ-ಗಿರಿಜನರ ಮಕ್ಕಳಿಗಾಗಿ ವೈದ್ಯಕೀಯ ಶಿಬಿರಗಳನ್ನು ನಡೆಸಿದ್ದಾರೆ.

ರೋಹಿಣಿ ಅವರ ಸರ್ವತೋಮುಖ ಸಮಾಜ ಸೇವೆಯನ್ನು ಗುರುತಿಸಿ ದೆಹಲಿಯ ಶಿರೋಮಣಿ ಇನ್‌ಸ್ಟಿಟ್ಯೂಟ್‌ನವರು 'ಮಹಿಳಾ ಶಿರೋಮಣಿ' ಪ್ರಶಸ್ತಿಯನ್ನೂ, ದೆಹಲಿಯ ಫ್ರೆಂಡ್‌ಷಿಪ್

ಅಸೋಸಿಯೇಷನ್ ಆಫ್ ಇಂಡಿಯಾರವರು 'ವಿಕಾಸ್ ರತನ್' ಪ್ರಶಸ್ತಿಯನ್ನೂ ನೀಡಿ ಗೌರವಿಸಿದ್ದಾರೆ.

ಸಮಾಜ ಸೇವೆಗೆ ದಿನದ 24 ಗಂಟೆಗಳೂ ಸಾಲದು ಎನ್ನುವ ರೋಹಿಣಿ ಇತರ ಚಟುವಟಿಕೆಗಳನ್ನೂ ಹಮ್ಮಿಕೊಂಡಿದ್ದಾರೆ. ಸ್ವತಃ ಸಂಗೀತ, ನೃತ್ಯಗಳಲ್ಲಿ ಪರಿಣತೆಯಾಗಿರುವ ಈಕೆ ಸುಮಾರು 45 ಮಂದಿ ಮಹಿಳಾ ಕಲಾವಿದೆಯರನ್ನು ಸಂಘಟಿಸಿ 'ಮಹಿಳಾ ನಾಟಕ ಮಂಡಳಿ' ಯೊಂದನ್ನು ಸ್ಥಾಪಿಸಿ ನಾಟಕಗಳನ್ನು ಪ್ರದರ್ಶಿಸಿದ್ದಾರೆ. 'ಟಿಪ್ಪು', 'ಕಿತ್ತೂರು ಚೆನ್ನಮ್ಮ', 'ಶಿವಶಕ್ತಿ', 'ಅಮೋಘ ವರ್ಷ ನೃಪತುಂಗ' ಮೊದಲಾದವು ಈ ಮಂಡಳಿಯ ಜನಪ್ರಿಯ ನಾಟಕಗಳು. ಸದ್ಯದಲ್ಲಿಯೇ ಈ ತಂಡದ 13 ಮಂದಿ ಕಲಾವಿದೆಯರೊಂದಿಗೆ ರೋಹಿಣಿ ಅಮೆರಿಕಾ ಪ್ರವಾಸ ಕೈಗೊಂಡು ಅಲ್ಲಿನ ವಾಷಿಂಗ್ಟನ್, ಪಿಟ್ಸ್‌ಬರ್ಗ್, ಡೆಟ್ರಾಯಿಟ್, ಸ್ಯಾನ್‌ಫ್ರಾನ್ಸಿಸ್ಕೋ, ಕ್ಯಾಲಿಫೋರ್ನಿಯಾ, ಲಾಸ್ ಏಂಜಲಿಸ್, ಟೊರಾಂಟೋ ಮುಂತಾದ ಸ್ಥಳಗಳಲ್ಲಿ ನಮ್ಮ ಮಹಿಳೆಯರ ಕಲಾ ಪ್ರತಿಭೆಗಳನ್ನು ಪ್ರದರ್ಶಿಸಲಿದ್ದಾರೆ.

ಸಾಗರದ ಮುನಿಸಿಪಲ್ ಹೈಸ್ಕೂಲ್‌ನಲ್ಲಿ ವಿದ್ಯಾಭ್ಯಾಸ ಮುಗಿಸಿದ ನಂತರ ಹಿಂದೀ ರಾಷ್ಟ್ರ ಭಾಷಾ ವಿಶಾರದ ಪದವಿ ಗಳಿಸಿ ಸಮಾಜ ಸೇವೆಗೆ ತೊಡಗಿದರು ರೋಹಿಣಿ. ಸರ್ಕಾರಿ ಕೆಲಸ ಅವರನ್ನು ಅರಸಿ ಬಂತು. ಸಾಗರದಲ್ಲಿ ವ್ಯವಸಾಯ ಇಲಾಖೆಯಲ್ಲಿ ಉದ್ಯೋಗ. ಮದುವೆ ಸಮಾಜ ಸೇವೆಗೆ ಅಡ್ಡಿ ಬರಲಿಲ್ಲ. ಪತಿ ಹರಿಹರೇಶ್ವ ಎಲ್ಲ ರೀತಿಯಲ್ಲಿ ಈ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ. ಮುಂದೆ ಬೆಂಗಳೂರಿಗೆ ಬಂದ ನಂತರ ಇಲ್ಲಿನ ಕೊಳಚೆ ಪ್ರದೇಶಗಳ ಮಹಿಳೆಯರ ಉದ್ಧಾರಕ್ಕಾಗಿ ಶ್ರಮಿಸಲಾರಂಭಿಸಿದರು. ರೋಹಿಣಿ ಸಮಾಜ ಸೇವೆ ಪೂರ್ಣಾವಧಿಯಾದಾಗ ಉದ್ಯೋಗಕ್ಕೆ ರಾಜೀನಾಮೆ ನೀಡಿದರು.

ಜತೆಗೇ ಇಂದಿರಾ ಕಾಂಗ್ರೆಸ್ ಪಕ್ಷದ ಕಾರ್ಯಕರ್ತೆಯಾಗಿ ರಾಜಕೀಯದಲ್ಲೂ ತೊಡಗಿಕೊಂಡ ಈಕೆ ಪ್ರದೇಶ ಕಾಂಗ್ರೆಸ್‌ನ ವಿಜ್ಞಾನ ಮತ್ತು ಪರಿಸರ ವಿಭಾಗದ ಆರ್ಗನೈಸಿಂಗ್ ಸೆಕ್ರೆಟರಿಯಾಗಿ ಸೇವೆ ಸಲ್ಲಿಸಿದ್ದಾರೆ. ಮಹಿಳೆಯರು, ಮಕ್ಕಳಿಗೆ ಸಂಬಂಧಿಸಿದ ಅನೇಕ ಸಂಘ ಸಂಸ್ಥೆಗಳಲ್ಲಿ ಅಧ್ಯಕ್ಷೆಯಾಗಿ, ಕಾರ್ಯದರ್ಶಿಯಾಗಿ ಶ್ರಮಿಸುತ್ತಿದ್ದಾರೆ.

## ಭವಿಷ್ಯದ ಯೋಜನೆಗಳು

"ಪ್ರತಿಯೊಂದು ಹಂತದಲ್ಲೂ ಮಹಿಳೆಯರ ಏಳಿಗೆಗಾಗಿ ಶ್ರಮಿಸಬೇಕೆನ್ನುವುದೇ ನನ್ನ ಮುಖ್ಯ ಧ್ಯೇಯ" ಎನ್ನುವ ರೋಹಿಣಿ ರಾಜ್ಯದ ಪ್ರತಿ ಹಳ್ಳಿ ಹಳ್ಳಿಗೂ ಸೇವೆ ಸಲ್ಲಿಸುವ ಸಂಕಲ್ಪ ಹೊಂದಿದ್ದಾರೆ. "ಪ್ರತಿಯೊಬ್ಬ ಮಹಿಳೆಯೂ ಮೊದಲು ವಿದ್ಯಾವಂತಳಾಗಬೇಕು. ಇದಕ್ಕಾಗಿ ಮೊದಲಿಗೆ ಸಾಗರ ತಾಲ್ಲೂಕನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಅನಂತರ ಹಂತ ಹಂತವಾಗಿ ಎಲ್ಲ ಪ್ರದೇಶಗಳಿಗೂ ಈ ಸೇವೆಯನ್ನು ವಿಸ್ತರಿಸುವ ಉದ್ದೇಶವಿದೆ" ಎನ್ನುತ್ತಾರೆ ಶ್ರೀಮತಿ ರೋಹಿಣಿ ಹರಿಹರೇಶ್ವರ. ಹೆಣ್ಣು ಮಗುವಿನ ತಾಯಿಯಾಗಿ ಗೃಹಕೃತ್ಯದ ಹೊಣೆಗಾರಿಕೆ ಹೆಚ್ಚಿದ್ದರೂ ಸಮಾಜ ಸೇವೆಯೇ ಈಕೆಯ ಪರಮ ಗುರಿ. **



## ಕಡಲ ಕರೆಯ ಕೋಟೇಶ್ವರ

— ಶ್ರೀಮತಿ ರತ್ನ ಎಸ್. ತಂತ್ರಿ

ಪಶ್ಚಿಮ ಕರಾವಳಿಯ ಕಡಲ ತಡಿಯಲ್ಲಿ ಸಾಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಕುಂದಾಪುರದಿಂದ ಸುಮಾರು ಏಳು ಕಿ.ಮೀ. ದಕ್ಷಿಣದಲ್ಲಿದೆ ಕೋಟೇಶ್ವರ. ಕುಂದಾಪುರ ತಾಲೂಕಿಗೆ ಸೇರಿದ ಕೋಟೇಶ್ವರವನ್ನು ಧ್ವಜೇಶ್ವರವೆಂದೂ ಕರೆಯುವರು. ಪುರಾಣ ಹಾಗೂ ಇತಿಹಾಸ ಪ್ರಸಿದ್ಧ ಕೋಟಿಲಿಂಗೇಶ್ವರ ದೇವಸ್ಥಾನ ಜಿಲ್ಲೆಯ ಮೋಕ್ಷದಾಯಕ ಸಪ್ತ ಪುಣ್ಯಕ್ಷೇತ್ರಗಳಲ್ಲೊಂದು. ಅತಿ ಪುರಾತನ ಕೋಟಿಲಿಂಗೇಶ್ವರ ದೇವಾಲಯದಲ್ಲಿ ಶಿವನ ಕೋಟಿ ಲಿಂಗಗಳಿತ್ತೆಂದೂ ಪ್ರತೀತಿಯಿದೆ. ಈಶ್ವರ ಅಲ್ಲಿಯ ಪ್ರಧಾನ ಆರಾಧ್ಯ ದೈವ. ದೇವಾಲಯ ಹೊರಸುದಲ್ಲಿರುವ ಪ್ರಾಚೀನೇತಿಹಾಸದ ಶಿಲಾಶಾಸನಗಳಿಂದ ಕೋಟೇಶ್ವರ ತಿರುಂಬಳ್ ಪೆರುಮಾಳನ ರಾಜಧಾನಿಯಾಗಿತ್ತೆಂದು ತಿಳಿದು ಬರುತ್ತದೆ. ದೇವಾಲಯದ ಉತ್ತರ ಪಾರ್ಶ್ವದಲ್ಲಿ ಐದು ಎಕರೆ ವಿಸ್ತೀರ್ಣದ ವಿಜಯನಗರ ಕಾಲದ ಚೌಕಾಕೃತಿಯ ಭಾರಿ ಕೆರೆಯೊಂದಿದೆ. ಅದು ಕೋಟಿ ತೀರ್ಥ ಹೆಸರಿನಿಂದಲೇ ಕರೆಯಲ್ಪಡುತ್ತಿದೆ.

### ಇತಿಹಾಸ—ರಚನೆ

ಕೋಟೇಶ್ವರ ದೇವಾಲಯ ಕ್ರಿ.ಶ. 8—9ನೇ ಶತಮಾನ ಅಥವಾ ಕ್ರಿ.ಶ. 15—16ನೇ ಶತಮಾನದ ನಂತರ ನಿರ್ಮಾಣಗೊಂಡ ಶಿಲ್ಪ ರಚನೆಯು ಚಾಲುಕ್ಯ ಹೊಯ್ಸಳ, ವಿಜಯನಗರ, ಕೆಳದಿ ಅರಸರ ಕಾಲ ಮಾನಗಳನ್ನು ಬಿಂಬಿಸುತ್ತದೆ. ದೇವಾಲಯದ ನವರಂಗದ ಮೇಲೆ ಬ್ರಹ್ಮ ವಿಷ್ಣು ದೇವತೆಗಳ ಉಬ್ಬು ಶಿಲ್ಪ; ವಿಮಾನದಲ್ಲಿ ಸಮುದ್ರ ಕುದುರೆ; ಜೈನ ವಿಗ್ರಹಗಳು ದೇವಾಲಯದ ಪ್ರಾಚೀನತೆಗೆ ಸಾಕ್ಷಿಯಾಗುಳಿದಿವೆ.

ಪೂರ್ವಾಭಿಮುಖವಾಗಿರುವ ದೇವಾಲಯದಲ್ಲಿ ಆಗಮೋಕ್ತ ಪೂಜಾವಿಧಿ, ಉತ್ಸವಗಳು ನಡೆಯುತ್ತವೆ. ಗರ್ಭಗುಡಿ, ಹೊರ ಪ್ರಾಂಗಣಗಳ ಮೇಲ್ಭಾಗದಲ್ಲಿ ಶಿಲಾಮಯ ಪದ್ಮ ಪುಷ್ಪಗಳ ಕೆತ್ತನೆಯಿದೆ. ಆದಿ ಪರಮೇಶ್ವರನ ಅಂಶಗಳಾದ ಕೋಟಿ ಲಿಂಗಗಳು ಚಿಕ್ಕ ಬಾವಿಯಂತಿರುವ ಶಿಲೆಯ ಒಳ ಮಗ್ಗುಲಲ್ಲಿ ಅಡಕಗೊಂಡಿವೆಯೆಂದು ನಂಬಿಕೆ. ಈ ಬಾವಿಯ ಮೇಲಿನ ಪಾಣಿಪೀಠದ ಮೇಲೆ ಶಿವಲಿಂಗವನ್ನಿರಿಸಿ ಪೂಜಿಸಲಾಗುತ್ತದೆ. ಶಿವಲಿಂಗಕ್ಕೆ ಅಭಿಮುಖವಾಗಿ ನಾಲ್ಕನೇ ಸುತ್ತಿನ ಎಡಬದಿಯಲ್ಲಿ ನಾಲ್ಕು ಅಡಿ ಉದ್ದ, ಆರು ಅಡಿ ಎತ್ತರದ ಕುಶಿಲೆಯ ನಂದಿ (ಬಸವ) ವಿಗ್ರಹವಿದೆ. ನಂದಿ ವಿಗ್ರಹದ ರಚನೆಯೂ ತೀರ ಪುರಾತನ ಕಾಲದ್ದು. ಗರ್ಭ ಗುಡಿಯ ಸುತ್ತ ಪ್ರಾಂಗಣದಲ್ಲಿ ಮೂಲ ಗಣಪತಿ; ಸುಬ್ರಹ್ಮಣ್ಯ; ಗೋಪಾಲಕೃಷ್ಣ ಗುಡಿಗಳೂ, ಒಳ ಪ್ರಾಕಾರದಲ್ಲಿ ಪಾರ್ವತಿ ಗುಡಿಯೂ ಇದೆ. ಸಪ್ತ ಮಾತೃಕೆಯರು; ವೀರಭದ್ರ; ವೇಣು ಗೋಪಾಲಕೃಷ್ಣನ ಮೂರ್ತಿಗಳು ಹೊಯ್ಸಳ ಕಾಲದ ಶಿಲ್ಪಗಳೆಂಬುದನ್ನು ದೃಢೀಕರಿಸುತ್ತವೆ. ಗರ್ಭಗೃಹ ಸುಮಾರು ಕ್ರಿ.ಶ. 8—9ನೇ ಶತಮಾನಕ್ಕೂ ಅದರೆದುರಿರುವ ದ್ವಾರವು ವಿಜಯನಗರ ಕಾಲಕ್ಕೂ ಇನ್ನುಳಿದ ಕಟ್ಟಡಗಳು ಕೆಳದಿಯ ಕಾಲಕ್ಕೂ ಅನ್ವಯಿಸುತ್ತವೆ.

### ಉತ್ಸವ

ಕಾರ್ತಿಕ ಪೌರ್ಣಮಿಯಂದು ವಾರ್ಷಿಕ ರಥೋತ್ಸವ ಅತಿ ವೈಭವದ ಪರ್ವ. ಬ್ರಹ್ಮರಥದ ಸುತ್ತ ಅಪೂರ್ವ ದೇವತಾ ವಿಗ್ರಹಗಳ ಚಿತ್ರ ರಚನೆಗಳಿವೆ. ಕೋಟೇಶ್ವರದ ಬ್ರಹ್ಮರಥ ಉಡುಪಿಯ ಬ್ರಹ್ಮರಥದಷ್ಟೇ ಅದ್ವಿತೀಯವಾಗಿದ್ದು; ರಥ ನಿರ್ಮಾಣ ಕಾರ್ಯ ಅತ್ಯಂತ ಕುಶಲವಾದುದು. ಆರು ದಿನಗಳ ವಾರ್ಷಿಕೋತ್ಸವದಲ್ಲಿ ಏಳನೆಯ ದಿನವೇ ರಥೋತ್ಸವ. ಉತ್ಸವ ಹೊರಸುರಕ್ಕೆಲ್ಲ ಸಂಭ್ರಮದ ಜಾತ್ರೆ.

ನವೆಂಬರ್—ಡಿಸೆಂಬರ್ ತಿಂಗಳಿನಲ್ಲಿ ನಡೆಯುವ ಕೊಡಿಹಬ್ಬ ತಾಲೂಕಿನ ಅತಿ ದೊಡ್ಡ ಪರ್ವ. ಕ್ರಿ.ಶ. 16ನೇ ಶತಮಾನದ ಶಾಸನ ರೀತ್ಯಾ ಹಬ್ಬವನ್ನು "ಕುಡಿ ಹಬ್ಬ"ವೆಂದೇ ಉಲ್ಲೇಖಿಸಲಾಗಿದೆ. ಇದು ಇತರಲ್ಲ ಕಡೆಗಳ ಹಬ್ಬ—ವಾರ್ಷಿಕೋತ್ಸವಗಳಿಗೆ ನಾಂದಿಯಾದುದರಿಂದ "ಕುಡಿಹಬ್ಬ" ಹೆಸರು ಅನ್ವರ್ಥಗೊಂಡಿರಬಹುದು. ಕೋಟೇಶ್ವರ ರಥ ಶಿಲ್ಪಿಗೆ ರಾಜ್ಯ ಪ್ರಶಸ್ತಿ ದೊರೆತಿರುವುದನ್ನು ಸ್ಮರಿಸಬಹುದು. ಧಾರ್ಮಿಕ ಯತಿ ಪುಂಗವ ಗುರು ವಾದಿರಾಜರ ಜನ್ಮಭೂಮಿ "ಹೂವಿನ ಕೆರೆ" ಕೋಟೇಶ್ವರದ ಸಮೀಪದಲ್ಲಿರುವುದು ಇನ್ನೊಂದು ವಿಶೇಷತೆ.

### ಅಭಿವೃದ್ಧಿ

ದೇವಾಲಯ ಅಭಿವೃದ್ಧಿ ಕಾರ್ಯಗಳಿಂದ ನವೀಕರಣಗೊಂಡಿದೆ. ನೂತನ ತ್ರಿಶೂಲ—ಡಮರು ರಚನೆ ಪ್ರಾಂಗಣದ ದಕ್ಷಿಣ ಪೌಳಿಯಲ್ಲಿ ಆಕರ್ಷಣೀಯ. ಸಭಾಮಂಟಪ; ಕಲ್ಯಾಣ ಮಂಟಪಗಳೂ ರಚನೆಗೊಂಡಿವೆ. ಮಂಗಳೂರು—ಕುಂದಾಪುರ ರಾಷ್ಟ್ರೀಯ ಹೆದ್ದಾರಿಯಲ್ಲಿ ಎಲ್ಲ ಎಕ್ಸ್‌ಪ್ರೆಸ್ ಹಾಗೂ ಇತರ ಬಸ್ಸುಗಳು ಕೋಟೇಶ್ವರದಲ್ಲಿ ನಿಲ್ಲುತ್ತವೆ. ಅಲ್ಲಿಂದ ದೇವಸ್ಥಾನಕ್ಕೆ ಕಾಲ್ನಡಿಗೆ ದೂರ. ಕೋಟಿಲಿಂಗೇಶ್ವರನ ಪುಣ್ಯಕ್ಷೇತ್ರ ಸಂದರ್ಶನ ಹಾಗೂ ಕೋಟಿ ತೀರ್ಥಸ್ನಾನ ಸರ್ವ ಕಷ್ಟ—ಪಾಪಗಳನ್ನು ಪರಿಹರಿಸುವುದೆಂಬ ನಂಬಿಕೆಯಿದೆ.

(ಸಾದಾರ)

# ನೃತ್ಯ ಗುರುವಿನ ಉನ್ನತ ಆದರ್ಶ





ಡಾ। ಹೇಮಾ ಗೋವಿಂದರಾಜನ್ ಶ್ರೇಷ್ಠ ನೃತ್ಯ ಕಲಾವಿದೆ. ಮುಂಬೈಯ ರಾಜರಾಜೇಶ್ವರಿ ನಾಟ್ಯ ಶಾಲೆ ಹಾಗೂ ಮದರಾಸಿನ ಹಿರಿಯ ಕಲಾವಿದೆ ನಾರಾಯಣ್ ಅವರ ಬಳಿ ಶಾಸ್ತ್ರೀಯ ನೃತ್ಯಾಭ್ಯಾಸ ಮಾಡಿ ಡಾಕ್ಟರೇಟ್ ಪಡೆದಿದ್ದಾರೆ.

"ಕಲೆ ನನಗೆ ಹೆಸರು, ತೃಪ್ತಿ ತಂದಿದೆ. ಈ ಕಲೆಯ ಮೂಲಕ ಯಾವುದಾದರೂ ಮಾನವೀಯ ಕಾರ್ಯಗಳಿಗೆ ನೆರವಾಗಿ ಕಲೆಯ ಋಣ ತೀರಿಸಬೇಕೆಂಬ ಸಂಕಲ್ಪ ನನ್ನದು" ಎನ್ನುವ ಡಾ। ಹೇಮಾ ತಮ್ಮ ಶಿಷ್ಯೆಯರಿಬ್ಬರ (ಕು। ಅಶ್ವಿನಿ, ಬಿಂದಿಯ) ತಂದೆ ಶ್ರೀ ಸುಭಾಶ್ ಮೋಟ್ಟೆ ಅವರ ಮೂತ್ರಪಿಂಡ ಕಸಿ ಚಿಕಿತ್ಸೆಗಾಗಿ ಒಂದು ಸಹಾಯಾರ್ಥ ನೃತ್ಯ ಪ್ರದರ್ಶನ ನಡೆಸಿ 64,000 ರೂ.ಗಳನ್ನು ಸಂಗ್ರಹಿಸಿ ನೆರವಾಗುವ ಮೂಲಕ ಉನ್ನತ ಆದರ್ಶ ಮೆರೆದಿದ್ದಾರೆ.



ಡಾ। ಹೇಮಾ ಗೋವಿಂದರಾಜನ್ ಇವರ ತಮ್ಮ ನೃತ್ಯ ಮಿಹಿರ ಸಂಸ್ಥೆಯ ವಿದ್ಯಾರ್ಥಿನಿಯರಿಂದ ಅಕ್ಟೋಬರ್ 21ರಂದು ಬೆಂಗಳೂರಿನ ಎ.ಟಿ.ಎ. ರಂಗ ಮಂದಿರದಲ್ಲಿ ನೃತ್ಯ ಪ್ರದರ್ಶನ ಏರ್ಪಡಿಸಿದ್ದರು. ಕರ್ನಾಟಕ ಸರ್ಕಾರದ ವಾರ್ತೆ, ಪ್ರವಾಸೋದ್ಯಮ ಹಾಗೂ ಯುವ ಜನ ಸೇವೆಯ ಕಮಿಷನ್ ಫಿಲಿಪ್ಪೋಸ್ ಮಥಾಯ್ ಅವರು ಮುಖ್ಯ ಅತಿಥಿಯಾಗಿ ಭಾಗವಹಿಸಿ ಹೇಮಾ ಅವರ ಉನ್ನತ ಆದರ್ಶವನ್ನು ಮುಕ್ತ ಕಂಠದಿಂದ ಪ್ರಶಂಸಿಸಿದ್ದರು. 12 ಮಂದಿ ವಿದ್ಯಾರ್ಥಿನಿಯರು ನೀಡಿದ ವಿವಿಧ ನೃತ್ಯ ಪ್ರದರ್ಶನಗಳು ಚೇತೋಹಾರಿಯಾಗಿದ್ದವು. ಅವರಲ್ಲಿ ಕಂಡು ಬಂದ ಸಮಷ್ಟಿ ಕಲೆಗಾರಿಕೆ ನಿಜಕ್ಕೂ ಮೆಚ್ಚುವಂಥದ್ದು. ಹೇಮಾ ಅವರ ನೇತೃತ್ವದ ನಟುವಾಂಗದಲ್ಲಿ ಶ್ರೀಮತಿ ಬೃಂದಾ ಮಧುಸೂದನ ಅವರ ಗಾಯನ, ರಂಗಸ್ವಾಮಿ ಮೃದಂಗ, ಬಿ.ಪಿ. ಶ್ರೀಕಂಠನ್ ಅವರ ಕೊಳಲು ಮತ್ತು ಸೋಮಣ್ಣ ಅವರ ಪಿಟೀಲು ವಾದನ ನೃತ್ಯಕ್ಕೆ ವಿಶೇಷ ಮೆರುಗು ನೀಡಿತ್ತು. ಗಣೇಶ ಕೌಸ್ತುಭಂನೊಂದಿಗೆ ಪ್ರಾರಂಭವಾದ ನೃತ್ಯ ಕಾರ್ಯಕ್ರಮ ತಿಲ್ಲಾನದೊಂದಿಗೆ ಮುಕ್ತಾಯವಾಯಿತು. ಮಹಿಷಾಸುರ ಮರ್ದಿನಿ ನೃತ್ಯ ವಿಶೇಷ ಉಲ್ಲೇಖಾರ್ಹ.

# "ಅರಣ್ಯ ದೇಗುಲ ದರ್ಶನ" ಶಬರಿಮಲೈ ಅಯ್ಯಪ್ಪ

—ಶ್ರೀಮತಿ ಸತ್ಯನಾರಾಯಣ

ನವೆಂಬರ್ ಮೂರನೆ ವಾರದಿಂದ ಜನವರಿ ಮೂರನೆ ವಾರದವರೆಗೂ, ಕರಿಬಟ್ಟೆ ಉಟ್ಟು, ಕೊರಳಿನಲ್ಲಿ ತುಲಸೀ ಅಥವಾ ರುದ್ರಾಕ್ಷಿ ಮಾಲೆ, ಹಣೆಯಲ್ಲಿ ವಿಭೂತಿ ಚುದನ, ಬರಿಗಾಲಿನಲ್ಲಿ ಓಡಾಡುವ ಜನರನ್ನು ಕಾಣುತ್ತೇವೆ. ಜೊತೆಗೆ "ಸ್ವಾಮಿಯೇ ಶರಣಂ ಅಯ್ಯಪ್ಪ" ಒಕ್ಕೊರಲಿನ ಧ್ವನಿಗಳು ಕೇಳಿ ಬರುತ್ತಿರುತ್ತದೆ. ಇವರುಗಳು ಕೇರಳದಲ್ಲಿರುವ ಶಬರಿಮಲೆಗೆ ಹೋಗುವ ಭಕ್ತರು, ಯಾತ್ರಿಕರು. ಇವರನ್ನು ಸಹ ಸ್ವಾಮಿ ಅಥವಾ ಅಯ್ಯಪ್ಪ ಎಂದೇ ಸಂಬೋಧಿಸಲಾಗುವುದು.

ಈಗೆರಡು ವರ್ಷಗಳ ಹಿಂದೆ ನನಗೆ ಶಬರಿ ಮಲೈ ಯಾತ್ರೆ ಮಾಡುವ ಅವಕಾಶ ಒದಗಿ ಬಂತು. ಗೋವಾದ ವಾಸ್ಕೋ ನಗರದಲ್ಲಿರುವ ಅಯ್ಯಪ್ಪ ಸೇವಾ ಸಮಿತಿಯವರು ಪ್ರತಿವರ್ಷ ಡಿಸೆಂಬರ್‌ನಲ್ಲಿ ಶಬರಿಮಲೆಗೆ ಯಾತ್ರೆಯನ್ನು ಏರ್ಪಡಿಸುತ್ತಾರೆ. 1989 ಡಿಸೆಂಬರ್ 18 ನೇ ತಾರೀಖು ಹೊರಡುವ ಅವರೊಂದಿಗೆ ನಾನು ಹೊರಡಲು ನಿರ್ಧರಿಸಿದೆ. ಒಟ್ಟು 30 ಜನರು. ಅವರಲ್ಲಿ ನಾನು ಮತ್ತು ಶ್ರೀಮತಿ ವೀರಮ್ಮ ಎಂಬುವರು ಮಾತ್ರ ಮಹಿಳೆಯರು. ಎಂಟು ವರ್ಷದ ಇಬ್ಬರು ಚಿಕ್ಕ ಹುಡುಗರು ಇದ್ದರು. ನನ್ನ ಶಬರಿಮಲೈ ಪ್ರವಾಸದ ಅನುಭವವನ್ನು ಓದುಗರೊಂದಿಗೆ ಹಂಚಿಕೊಳ್ಳಲು ಆಶಿಸುತ್ತೇನೆ.



ಪಂಪಾ ನದಿಯಲ್ಲಿ ಸ್ನಾನ ಮಾಡುತ್ತಿರುವ ಭಕ್ತರು

## ಅಯ್ಯಪ್ಪ ಇತಿಹಾಸ

ವರ್ಷವರ್ಷಕ್ಕೂ ಹೆಚ್ಚು ಹೆಚ್ಚು ಯಾತ್ರಿಕರನ್ನು ಆಕರ್ಷಿಸುವ ಶಬರಿ ಮಲೈ ಅಯ್ಯಪ್ಪ ಚರಿತ್ರೆ ಬಗ್ಗೆ ತಿಳಿಯೋಣ. ಪುರಾಣದಲ್ಲಿ ಅಯ್ಯಪ್ಪ ಎಂಬ ಹೆಸರನ್ನು ಎಲ್ಲೂ ಕಾಣಬರುವುದಿಲ್ಲವೆಂದು ತಿಳಿಯಬರುತ್ತದೆ. ಹರಿಹರ ಪುತ್ರ ಎಂದು ಪುರಾಣದಲ್ಲಿ ಬರುವ ದೇವರೇ ಅಯ್ಯಪ್ಪನೆಂದು ಅಭಿಪ್ರಾಯ. ಸಂಸ್ಕೃತದಲ್ಲಿ ಆರ್ಯ—ಅಯ್ಯ, ತಾತ—ಅಪ್ಪ ಪದಗಳು ಆಡು ಭಾಷೆಯಲ್ಲಿ ಅಯ್ಯಪ್ಪನಾಗಿ ಬಂದಿರಬಹುದೆಂದು ಹೇಳಿಕೆ. ಕೇರಳ ಜನರ ಆರಾಧ್ಯ ದೈವವಾದ ಅಯ್ಯಪ್ಪನನ್ನು 'ಶ್ರೀ ಧರ್ಮಶಾಸ್ತ', 'ಕಲಿಯುಗ ವರದನ್'; 'ತಾರಕ ಬ್ರಹ್ಮಂ'; 'ಶ್ರೀ ಭೂತನಾಥನ್'; 'ಮಣಿಕಂಠ' ಮೊದಲಾದ ಹೆಸರಿನಿಂದ ಪೂಜಿಸಲಾಗುತ್ತದೆ. ಅಯ್ಯಪ್ಪದಂತ ಕಥೆ ಹಾಗೂ ಚರಿತ್ರೆ ಒಂದಕ್ಕೊಂದು ಬೆರೆಕೆಯಾಗಿ ಬೇರ್ಪಡಿಸಲಾಗದ ವಿಷಯ ಅಸ್ಪಷ್ಟವೆನಿಸಬಹುದು.

ಹರ ಹಾಗೂ ಮೋಹಿನಿಯಾಗಿದ್ದ ಹರಿಯ ಮಿಲನದ ಫಲವೇ ಅಯ್ಯಪ್ಪ ಜನನವೆಂದು ಪ್ರತೀತಿ.

ಚಿತ್ರಗಳು ಎಸ್.ಎಸ್. ಫೋಟೋ ಫ್ಲಾಷ್‌ನ ದಿ. ರಾಜುರವರ ಕೃಪೆಯಿಂದ (ತುಮಕೂರು)

ಗಣೇಶ, ಕಾರ್ತಿಕೇಯರೊಂದಿಗೆ ಅಯ್ಯಪ್ಪ ಶಿವನ ಮೂರನೆ ಮಗ. ಕೇರಳದ ಪಂಡಲಮ್ ರಾಜ ರಾಜಶೇಖರನಿಗೆ ಮಕ್ಕಳಿರಲಿಲ್ಲ. ಅವನಿಗೆ ನದಿಯ ದಂಡೆಯಲ್ಲಿ ಸಿಕ್ಕಿದ ಮಗುವೇ ಅಯ್ಯಪ್ಪ ಎಂದೂ, ಕತ್ತಿನಲ್ಲಿ ಹಾರವಿದ್ದುದರಿಂದ ಮಣಿಕಂಠ ಎಂದು ಹೆಸರು ಬಂತೆಂದೂ ತಿಳಿಯಬರುತ್ತದೆ. ಕೆಲ ಕಾಲಾನಂತರ ರಾಣಿಗೆ ಮಗುವಾಯಿತು. ಮಣಿಕಂಠನ ವಿದ್ಯಾಭ್ಯಾಸ ಮುಗಿದ ಮೇಲೆ ಯುವರಾಜನನ್ನಾಗಿ ಮಾಡಬೇಕೆಂಬ ರಾಜನ ಯೋಚನೆ ರಾಣಿಗೆ ಇಷ್ಟವಾಗಲಿಲ್ಲ. ದುಷ್ಟ ಮಂತ್ರಿಯ ಸಲಹೆಯ ಮೇರೆಗೆ ರಾಣಿ ಖಾಯಿಲೆಯಿಂದ ನರಳುವಂತೆ ನಟಿಸಿ ವಾಸಿಯಾಗಲು ಹುಲಿಹಾಲು ಬೇಕೆಂದು ತಿಳಿಸುತ್ತಾಳೆ. ಆಗ ಮಣಿಕಂಠ ಕಾಡಿಗೆ ತೆರಳುತ್ತಾನೆ.

ಕಾಡಿನಲ್ಲಿ ತೊಂದರೆ ಕೊಡುತ್ತಿದ್ದ ಮಹಿಷಿ ಎಂಬ ರಾಕ್ಷಸಿಯನ್ನು ಸಂಹಾರ ಮಾಡಿ ಹುಲಿಯ ಮೇಲೆ ಕುಳಿತು ಅರಮನೆಗೆ ಹಿಂತಿರುಗುತ್ತಾನೆ. ಅವನ ಅವತಾರದ ಉದ್ದೇಶ ಪೂರ್ತಿಯಾದ್ದರಿಂದ ತಾನು ನಿರ್ಗಮಿಸುತ್ತೇನೆಂದೂ, ತಾನು ಬಾಣ ಹೊಡೆದಾಗ ಎಲ್ಲಿ ಬೀಳುತ್ತದೋ ಆ ಜಾಗದಲ್ಲಿ ತನಗೆ ದೇವಸ್ಥಾನ ಕಟ್ಟಬೇಕೆಂದು ಹೇಳುತ್ತಾನೆ. ಬಾಣ ಬಿದ್ದ ಜಾಗವೇ ಶಬರಿಗಿರಿ. ಅಲ್ಲಿ ಸ್ಥಾಪಿತವಾಗಿರುವ ಮೂರ್ತಿಯೇ ಅಯ್ಯಪ್ಪ. ಇವನ್ನು ಋಷಿ ಪರಶುರಾಮರು ಮಕರ ಸಂಕ್ರಾಂತಿ ದಿನದಂದು ಸ್ಥಾಪಿಸಿದರೆಂದು ಹೇಳಿಕೆ.

ಇದು ಒಂದು ರೀತಿಯ ದಂತಕಥೆಯಾದರೆ ಇತಿಹಾಸದ ಪ್ರಕಾರ ಇನ್ನೊಂದು ರೀತಿಯ ಕತೆ ತಿಳಿಯ ಬರುತ್ತದೆ. 800 ವರ್ಷಗಳ ಹಿಂದೆ ಕೇರಳದ ಪಂಡಲಮ್ ರಾಜ್ಯದಲ್ಲಿ ಕಳ್ಳರ ಮುಖ್ಯಸ್ಥ ಉದಯಾನನ ಎಂಬುವನು ಜನರಿಗೆ ಬಹಳ ಹಿಂಸೆ ಕೊಡುತ್ತಿದ್ದನು. ಧರ್ಮಶಾಸ್ತ ಮಾನವ ಅವತಾರ ತಾಳಿ ಅಯ್ಯಪ್ಪ ಎನಿಸಿ ಮುಸ್ಲಿಂ ಯೋಧನಾದ ವೀರ ವಾವರ್‌ನೊಂದಿಗೆ, ಕಂಟಕನಾಗಿದ್ದ ಉದಯಾನನನ್ನು ಸಂಹರಿಸಿದನು. ರಾಜ್ಯದಲ್ಲಿ ಶಾಂತಿ, ಸುಖವನ್ನು ತಂದು ಶಬರಿಗಿರಿಯ ಗುಡಿಯ ಧರ್ಮಶಾಸ್ತ ಮೂರ್ತಿಯಲ್ಲಿ ಐಕ್ಯವಾದನೆಂದೂ ಐತಿಹ್ಯವಿದೆ.

### ಯಾತ್ರೆಗೆ ಹೊರಡಲು ತಯಾರಿಕೆ

ಯಾತ್ರೆಗೆ ಹೊರಡುವ ಭಕ್ತರು ಕೆಲವು ನಿಯಮಗಳನ್ನು ಆಚರಿಸಬೇಕಾಗುತ್ತದೆ. 41 ದಿನಗಳ ವ್ರತವನ್ನು ಆಚರಿಸಬೇಕು. ಐದು ವರ್ಷದಿಂದ ಐವತ್ತು ವರ್ಷದ ನಡುವಿನ ಮಹಿಳೆಯರು ಯಾತ್ರೆ ಮಾಡಲು ನಿಷೇಧಿಸಲಾಗಿದೆ. ಆದ್ದರಿಂದ ಮಹಿಳಾ ಯಾತ್ರಿಕರು ಹೆಚ್ಚು ಸಂಖ್ಯೆಯಲ್ಲಿ ಕಾಣಬರುವುದಿಲ್ಲ. ಗುರುಸ್ವಾಮಿಯವರ ನೇತೃತ್ವದಲ್ಲಿ ತುಳಸೀ ಅಥವಾ ರುದ್ರಾಕ್ಷಿ ಮಾಲೆಯನ್ನು ಧರಿಸಬೇಕು. ಕಪ್ಪು, ನೀಲಿ ಅಥವಾ ಕೇಸರಿ ಬಣ್ಣದ ಬಟ್ಟೆ ಮಾತ್ರ ಉಡಬೇಕು. ಅಂಧಕಾರ (ಅಜ್ಞಾನ)ವನ್ನು ಹೋಗಲಾಡಿಸಲಿ ಎಂದು ಸೂಚಿಸಲೂ ಹಾಗೂ ದಟ್ಟ ಅರಣ್ಯದಲ್ಲಿ ಹೋಗಬೇಕಾದ್ದರಿಂದ ದುಷ್ಟ ಪ್ರಾಣಿಗಳಿಂದ ರಕ್ಷಿಸಿಕೊಳ್ಳಲೂ ಕಪ್ಪು ಬಣ್ಣದ ಬಟ್ಟೆಯನ್ನು ಧರಿಸಬೇಕೆಂಬ ಅಭಿಪ್ರಾಯ. ಹೆಚ್ಚಾಗಿ ಕಪ್ಪು ಬಣ್ಣದ ಬಟ್ಟೆಯನ್ನೇ ಧರಿಸುತ್ತಾರೆ. ಬ್ರಹ್ಮಚರ್ಯ, ಸಾತ್ವಿಕ ಆಹಾರ, ಎರಡು ವೇಳೆ ಸ್ನಾನ ಹಾಗೂ ಪೂಜೆ, ಭಜನೆ ಮುಖ್ಯವಾದುದು. ಗಡ್ಡ ಹಾಗೂ ತಲೆಕೂದಲನ್ನು ಕತ್ತರಿಸುವುದು ನಿಷಿದ್ಧ. ಚಪ್ಪಲಿಯನ್ನು ಉಪಯೋಗಿಸುವುದಿಲ್ಲ. ಸಾಮಾನ್ಯವಾಗಿ ಇದು ಅನುಸರಿಸಬೇಕಾದ ಪದ್ಧತಿ. ಯಾತ್ರೆಗೆ ಹೊರಡುವ ಮುಂಚೆ ದೀಕ್ಷೆ ವಹಿಸಿ ಹೊರಡುವ ಭಕ್ತರೂ ಉಂಟು.

### ಶಬರಿಗಿರಿಯ ಯಾತ್ರೆ

ಡಿಸೆಂಬರ್ 18ನೇ ತಾರೀಖು ರಾತ್ರಿ ನಮ್ಮ ಗುಂಪು ವಾಸ್ಕೋವಿನಿಂದ ಹೊರಡುವುದೆಂದು ನಿಶ್ಚಯವಾಗಿತ್ತು. ಬೆಳಿಗ್ಗೆ ಅಯ್ಯಪ್ಪ ದೇವಸ್ಥಾನಕ್ಕೆ ಹೋಗಿ ಕರಿ ಸೀರೆ ಉಟ್ಟು ದೇವರ ಸಮ್ಮುಖದಲ್ಲಿ ಮಾಲಾಧಾರಣೆ ಮಾಡಿದೆ. ಆಗಲೇ "ಕೆಟ್ಟುನಿರ" ಆಚರಣೆ ನಡೆಯುತ್ತಿತ್ತು. ಇವನ್ನು ಪ್ರತಿ ಯಾತ್ರಿಕನೂ ಕೈಕೊಳ್ಳಬೇಕು. ಇರುಮುಡಿ ಕಟ್ಟುವ ಆಚರಣೆ. ಇರುಮುಡಿ ಎಂದರೆ ಒಂದು ಚೀಲದಲ್ಲಿ ಎರಡು ಭಾಗ ಮಾಡಿ ಮಧ್ಯದಲ್ಲಿ ಕಟ್ಟಲಾಗುತ್ತದೆ. ಇದನ್ನು ತಲೆಯ ಮೇಲಿಟ್ಟುಕೊಂಡು ಯಾತ್ರೆಯನ್ನು ಪ್ರಾರಂಭಿಸುವುದು. ಈ ಆಚರಣೆಯು ಅಯ್ಯಪ್ಪ ಅಥವಾ ಗಣೇಶನ ಗುಡಿಯಲ್ಲಿ ಗುರುಸ್ವಾಮಿಯ ನೇತೃತ್ವದಲ್ಲಿ ನಡೆಯುತ್ತದೆ. ಬಟ್ಟೆಯಲ್ಲಿ ಎರಡು ಭಾಗ ಬರುವ ಹಾಗೆ ಚೀಲ ತಯಾರಾಗಿರುತ್ತದೆ. ಜೊತೆಗೆ ಚಿಕ್ಕ ಚಿಕ್ಕ ಚೀಲಗಳೂ ಇರುತ್ತವೆ. ತೆಂಗಿನಕಾಯಿ ಜುಟ್ಟು ತೆಗೆದು ಒಂದು ಸಣ್ಣ ರಂಧ್ರ ಮಾಡಿ ನೀರೆಲ್ಲಾ ತೆಗೆದು ತಯಾರಿಟ್ಟಿದ್ದರು. ಕೈಯಲ್ಲಿ ಕಾಯಿ ಹಿಡಿದುಕೊಂಡ ಮೇಲೆ ಅದರಲ್ಲಿ ತುಪ್ಪವನ್ನು ಹಾಕುತ್ತಾರೆ. ಅದನ್ನು ಬಿರಡೆಯಿಂದ ಮುಚ್ಚಿ ಅದರ ಮೇಲೆ ನೆನಸಿದ ಉದ್ದಿನ ಹಪ್ಪಳ ಹಾಕಿ ಅದರ ಮೇಲೆ ವಿಭೂತಿ ಹಾಕಿ ದಕ್ಷಿಣೆಯೊಂದಿಗ ಚಿಕ್ಕ ಚೀಲಕ್ಕೆ ಹಾಕಿ ಕಟ್ಟಿದರು. ಇದರಿಂದ ತುಪ್ಪ ಸೋರಲು ಸಾಧ್ಯವಿಲ್ಲ. ತುಪ್ಪದ ಅಭಿಷೇಕವೇ ಸ್ವಾಮಿಗೆ ಮುಖ್ಯವಾದುದು. ಪೂಜಾ ಸಾಮಗ್ರಿಗಳಲ್ಲಿ ಇದೇ ಮುಖ್ಯ ಯಾತ್ರೆಗೆ ಬರದಿದ್ದವರೂ ತೆಂಗಿನಕಾಯಿಗೆ ತುಪ್ಪ ತುಂಬಿ ಯಾತ್ರಿಕರೊಂದಿಗೆ ಕಳುಹಿಸುತ್ತಾರೆ. ಪನ್ನೀರ ಸೀಸೆ, ಊದಿನ ಕಡ್ಡಿ, ಕರ್ಪೂರ, ಅರಿಶಿನ ಮೊದಲಾದ ಪೂಜಾ ಸಾಮಾನುಗಳನ್ನು ಇನ್ನೊಂದು ಭಾಗದಲ್ಲಿ ಅಕ್ಕಿ ಚೀಲ ಅವಲಕ್ಕಿ ಇಟ್ಟರು. ನೆಂಟರಿಷ್ಟರು ಅಕ್ಕಿಯನ್ನು ಹಾಕಬಹುದು. ಮಧ್ಯದಲ್ಲಿ ಚೀಲವನ್ನು ಕಟ್ಟಿದ ಮೇಲೆ, ಹೊಸ ದುಪಟಿ ಅಥವಾ ಕಂಬಳಿಯ ಮೇಲಿಟ್ಟರು. ಎರಡು ಭಾಗವಾಗುವುದರಿಂದ "ಇರುಮುಡಿ" ಎಂದು ಕರೆಯುತ್ತಾರೆ.



"ಪೆಟ್ಟದುಲ್ಲಾಲ್" ಆಚರಿಸುತ್ತಿರುವವರು

ಇರುಮುಡಿ ಕಟ್ಟುವ ಕಾರ್ಯಕ್ರಮ ಮುಗಿಯಲು 12 ಘಂಟೆ ಆಯಿತು. ಇರುಮುಡಿ ಕಟ್ಟಿದ ಮೇಲೆ ಮನೆಗೆ ಹೋಗುವ ಹಾಗಿಲ್ಲ. ಅಲ್ಲಿಯೇ ರಾತ್ರಿ ಕಳೆಯಬೇಕಾಯಿತು. ಮಧ್ಯಾಹ್ನ ಅನ್ನದಾನದ ಸಮಾರಂಭವೂ ಇತ್ತು.

ಸಂಜೆ ಏಳು ಘಂಟೆಗೆ ಪೂಜೆ ಆದ ನಂತರ ನಾವು ಹೊರಡಲು ಸಿದ್ಧರಾದೆವು. ಗುರುಸ್ವಾಮಿಯವರು ನಮ್ಮ ತಲೆಯ ಮೇಲೆ ಬಟ್ಟೆಯೊಂದಿಗೆ ಇರಿಸಿದ ಇರುಮುಡಿಯನ್ನಿಟ್ಟರು. ಸ್ವಂತ ಬಟ್ಟೆಗಳಿಗೋಸ್ಕರ ಒಂದು ಹೆಗಲು ಚೀಲವೂ ಇತ್ತು. ಗರ್ಭಗುಡಿಯ ಸುತ್ತ ಪ್ರದಕ್ಷಿಣೆ ಬಂದು, ಒಂದು ತೆಂಗಿನಕಾಯಿ ಒಡೆದು, ದೇವರಿಗೆ ಬೆನ್ನು ತೋರಿಸದೆ ಹಿಂದ ಹಿಂದಕ್ಕೆ ನಡೆದು ಬಸ್ಸಿನ ಹತ್ತಿರ ಬಂದೆವು. ಬಸ್ಸಿನ ಮುಂಭಾಗಕ್ಕೆ ಅಯ್ಯಪ್ಪ ಸ್ವಾಮಿ ಫೋಟೋ ಹಾಕಿ ವಾಹನ ಪೂಜೆ ಮಾಡಿದ್ದರು. ಬಸ್ಸಿನಲ್ಲಿ ಹತ್ತಿ ನಮ್ಮ ಇರುಮುಡಿಯನ್ನು ತೆಗೆದಿಟ್ಟೆವು. ಪ್ರಾಪಂಚಿಕ ವ್ಯಾಮೋಹ ಬಿಟ್ಟು ಪರಮಾತ್ಮನ ಸನ್ನಿಧಾನದಲ್ಲಿ ಮನಸ್ಸು ಲೀನವಾಗಬೇಕೆಂಬ ಉದ್ದೇಶದಿಂದ ಹೋಗಿ ಬರುತ್ತೇವೆಂದು ವಿದಾಯ ಹೇಳುವುದಿಲ್ಲವೆಂದು ಗುರುಸ್ವಾಮಿಯವರು ತಿಳಿಸಿದ್ದರು.

ನಮ್ಮ ಪ್ರಯಾಣ ಸಾಗಿತು. ಕಾರವಾರ, ಕಾಸರಗೋಡು ಮೂಲಕ ಹೋಗಿ, 19ರ ಬೆಳಿಗ್ಗೆ ಕಣ್ಣಾನೂರಿನಲ್ಲಿದ್ದೆವು. ಮಳೆಗಾಲ ಕಳೆದು, ಎಲ್ಲೆಲ್ಲಿಯೂ ಹಸಿರಾಗಿ ಕಾಣುತ್ತಿತ್ತು. ಹಿತವಾದ ಹವಾ. 'ಪರಶ್ಶಿನಕಡವು ಮುತ್ತಪ್ಪನ್' ಎಂಬ ದೇವಸ್ಥಾನಕ್ಕೆ ಭೇಟಿ ಕೊಟ್ಟು ರಾತ್ರಿ ಗುರುವಾಯೂರು ತಲುಪಿದೆವು. ಗುರುವಾಯೂರು ಕೃಷ್ಣನ ದೇವಸ್ಥಾನ ಪ್ರಸಿದ್ಧವಾದುದು. 20ರ ಬೆಳಿಗ್ಗೆ ಕೃಷ್ಣನ ದರ್ಶನ ಮಾಡಿದೆವು. ಜನರ ಗಲಾಟೆ ವಿಪರೀತ ಇತ್ತು. ಎಲ್ಲಿ ನೋಡಿದರೂ ಅಯ್ಯಪ್ಪ ಭಕ್ತರು.

ಗುರುವಾಯೂರಿನಿಂದ "ತಿರುಪರಿಯಾರ್"ನ ರಾಮ ದೇವಸ್ಥಾನಕ್ಕೆ ಹೋದೆವು. ಬಹಳ ಪುರಾತನ ದೇವಸ್ಥಾನ. ದೊಡ್ಡ ಪ್ರಾಕಾರ. ಕೋದಂಡ ರಾಮನಿಗೆ ನಮಸ್ಕರಿಸಿ ನಮ್ಮ ಪ್ರಯಾಣ ಮುಂದುವರಿಸಿದೆವು. ಚೋಟಾನಿಕರ ಎರ್ನಾಕುಲಂನಿಂದ ಹತ್ತು ಮೈಲಿ ದೂರದಲ್ಲಿದೆ. ಇಲ್ಲಿ ಭಗವತಿ ದೇವಸ್ಥಾನ ಬಹಳ ಹೆಸರುವಾಸಿಯಾದುದು. ಸುತ್ತಲೂ ಹಸಿರು. ಎತ್ತರ ಜಾಗದಲ್ಲಿರುವ ಈ ದೇವಸ್ಥಾನ ತುಂಬಾ ಚೆನ್ನಾಗಿದೆ. ಭಗವತಿ ವಿಗ್ರಹವಲ್ಲದೆ ಇಲ್ಲಿ ಅಯ್ಯಪ್ಪ, ಶಿವ, ಗಣಪತಿ, ನಾಗರಾಜ, ಯಕ್ಷಿ ಮೊದಲಾದ ದೇವರುಗಳೂ ಇವೆ. ಇಲ್ಲಿಯ ವಿಶೇಷವೆಂದರೆ ದೇವಸ್ಥಾನದ ಒಳಗಡೆ ಇರುವ ಒಂದು ಕಂಭಕ್ಕೆ ಮೊಳೆಗಳನ್ನು ಹೊಡೆದಿರುವುದು. ಭೂತ, ಪ್ರೇತ ಮೊದಲಾದ ದುಷ್ಟಶಕ್ತಿಯನ್ನು

ಇಲ್ಲಿ ಹೋಗಲಾಡಿಸುವ ಶಕ್ತಿ ಭಗವತಿಗೆ ಇದೆಯೆಂದೂ ಅದಕ್ಕಾಗಿ ಮೊಳೆ ಹೊಡೆಯುತ್ತಾರೆಂದೂ ತಿಳಿದು ಬಂತು.

ಮುಂದೆ "ವೈಕಂ" ಎಂಬ ಸ್ಥಳವನ್ನು ತಲುಪಿದೆವು. ಇಲ್ಲಿ ಶಿವ ದೇವಾಲಯ. ರಾಕ್ಷಸ 'ಖರ' ಒಂದೇ ಸಲಕ್ಕೆ 3 ಕಡೆ ಶಿವನನ್ನು ಪ್ರತಿಷ್ಠೆ ಮಾಡಿದನೆಂದು ಪ್ರತೀತಿ. 'ಕೊಟ್ಟಾಯಂ' ಮತ್ತು 'ಇಟ್ಟಮನ್ನೂರು' ಇಲ್ಲಿಯೂ ಶಿವನ ದೇವಸ್ಥಾನ. ಇಲ್ಲಿಗೂ ಭೇಟಿ ಕೊಟ್ಟು "ಇರುಮೇಲಿ" ಕಡೆ ಪ್ರಯಾಣ ಸಾಗಿತು. ಇರುಮೇಲಿ ತಲುಪಿದಾಗ ಸಂಜೆಯಾಗಿತ್ತು. ಇಲ್ಲಿಂದ ಶಬರಿಮಲೈಗೆ 81 ಕಿ.ಮೀ. ದೂರವಾಗುತ್ತದೆ. ಬಹಳ ಹಿಂದೆ ಇಲ್ಲಿಂದ ಕಾಲ್ನಡಿಗೆಯಲ್ಲೇ ಹೊರಟು ಮೂರು, ನಾಲ್ಕು ಜಾಗದಲ್ಲಿ ವಸತಿ ಮಾಡಿ ಅಯ್ಯಪ್ಪ ದರ್ಶನ ಪಡೆಯುತ್ತಿದ್ದರು. ಈಗ ವಾಹನ ಸೌಕರ್ಯವಿರುವುದರಿಂದ ಪಂಪಾ ನದಿಯವರೆಗೂ ವಾಹನದಲ್ಲಿ ಹೋಗಬಹುದು. ಮಂಡಿಪೊಯಾರ್ ಮಾರ್ಗವಾಗಿ 12 ಕಿ.ಮೀ. ಆಗುತ್ತದೆ. ಆದರೆ ಈ ಮಾರ್ಗ ತುಂಬಾ ಕಷ್ಟಕರವಾದುದು. ಚಾಲ್ಕಯಂ ಮೂಲಕವೂ ಹೋಗಬಹುದು. ಆದರೆ ಸಾಮಾನ್ಯವಾಗಿ ಇರುಮೇಲಿಯಿಂದಲೇ ಹೆಚ್ಚು ಜನ ಹೋಗುವುದು.

ಹರಿಹರನ ಪುತ್ರನಿಂದ ಮಾತ್ರ ತಾನು ಸಂಹಾರವಾಗಬಹುದೆಂಬ ವರವನ್ನು ಬ್ರಹ್ಮನಿಂದ ಪಡೆದ 'ಮಹಿಷಿ'ಯನ್ನು ಸಂಹರಿಸಿದ ಸ್ಥಳ ಇರುಮೇಲಿ. ಇರುಮ ಎಂದರೆ ಮಲಯಾಳಂನಲ್ಲಿ ಮಹಿಷಿ. ಈ ಸ್ಥಳದ ವಿಶೇಷವೆಂದರೆ 'ಪೆಟ್ಟದುಳಾಲ್'. ಯಾತ್ರಿಕರು ಮುಖಕ್ಕೆ ಬಣ್ಣ ಹಚ್ಚಿ ತಲೆಗೆ ಬೆಲೂನ್ ಕಟ್ಟಿಕೊಂಡು ವಾದ್ಯಗಳ ಹಿಮ್ಮೇಳದೊಂದಿಗೆ ಕುಣಿಯುತ್ತಾ ದೇವಸ್ಥಾನಕ್ಕೆ ಭೇಟಿ ಕೊಡುವುದು. ನಮ್ಮ ಗುಂಪಿನಲ್ಲಿ ಮೊದಲ ಬಾರಿಗೆ ಶಬರಿಗಿರಿಗೆ ಹೋಗುವವರು ನಾವಿಬ್ಬರು ಇದ್ದೆವು. ಬಾಣ ಹಾಗೂ ಲಾಡಿಯನ್ನು ತೆಗೆದುಕೊಂಡೆವು. ಎರಡನೆ ಸಲ ಹೋಗುವವರು ಈಟಿ, ಮೂರನೆಯ ಸಲದವರು ಕತ್ತಿ ತೆಗೆದುಕೊಳ್ಳಬೇಕು. (ರಟ್ಟಿನಲ್ಲಿ ಮಾಡಿರುತ್ತಾರೆ.) ತರಕಾರಿಯ ತುಂಡುಗಳನ್ನು ಬಟ್ಟೆಯಲ್ಲಿ ಹಾಕಿ ಅದನ್ನು ಕೋಲಿಗೆ ಕಟ್ಟಿ ಹೆಗಲ ಮೇಲೆ ಇಟ್ಟುಕೊಂಡರು. ಬಣ್ಣ ಹಚ್ಚಿಕೊಂಡು ಬೆಲೂನ್‌ಗಳನ್ನು ಎತ್ತಿಕೊಂಡು ನಮ್ಮ ಗುಂಪಿನವರು ಹೊರಟರು. ನಾವು ಹೆಂಗಸರು ಸ್ವಲ್ಪ ಬಣ್ಣ ಹಚ್ಚಿಕೊಂಡೆವು. ಇದು ವ್ಯಾಧನ ವೇಷವೆಂದು ಹಾಕುತ್ತಾರೆ. ಪ್ರತಿಯೊಬ್ಬನೂ ಯಾವ ಭೇಧವೂ ಇಲ್ಲದೆ ಆಚರಿಸುವುದು ವಿಶೇಷ. ಅಯ್ಯಪ್ಪ ಭಕ್ತನಾದ ವಾವರನ ಮಸೀದಿಗೆ ಭೇಟಿ ಕೊಟ್ಟು ಅಲ್ಲಿಂದ ಅಯ್ಯಪ್ಪ ದೇವಸ್ಥಾನಕ್ಕೆ ಬಂದೆವು. ಒಂದು ದೊಡ್ಡ ಹಳ್ಳ. ಅಲ್ಲಿ ತೆಂಗಿನಕಾಯಿ ಒಡೆದೆವು. ಹತ್ತಿರವಿರುವ ತೊರೆಯಲ್ಲಿ ಸ್ನಾನ ಮಾಡಿ ಬೇಟೆಗಾರನ ರೂಪದಲ್ಲಿರುವ ಅಯ್ಯಪ್ಪ ಸ್ವಾಮಿಯ ದರ್ಶನ ಮಾಡಿದೆವು. ಚಿಕ್ಕ ಊರಾದ ಇರುಮೇಲಿ ಸಾವಿರಾರು ಅಯ್ಯಪ್ಪ ಭಕ್ತರಿಂದ ಕಿಕ್ಕಿರಿದಿತ್ತು. ಅಲ್ಲಲ್ಲೇ ಉಪಹಾರ ಗೃಹಗಳು ಇದ್ದುವು. ಬೇಟೆಗಾರನ ವೇಷದಲ್ಲಿದ್ದ ಭಕ್ತರು ಅಲ್ಲಿರುವ ಸ್ಟುಡಿಯೋದಲ್ಲಿ ಚಿತ್ರಗಳನ್ನು ತೆಗೆಸಿಕೊಳ್ಳುತ್ತಿದ್ದರು. "ಶರಣಂ ಅಯ್ಯಪ್ಪ" ಘೋಷಣೆಯೊಂದಿಗೆ ನಾವು ಬಸ್ಸನ್ನೇರಿ ಮುಂದ ಪ್ರಯಾಣ ಬೆಳೆಸಿದೆವು.

ಇರುಮೇಲಿ ಮತ್ತು ಸನ್ನಿಧಾನದ ನಡುವೆ ಏಳು ಜಾಗಗಳು ಇವೆ. ಪೆರೂರುಕೋಡು, ಕಲಾಕೆಟ್ಟಿ,



ಇರುಮುಡಿಯೊಂದಿಗೆ ಹೊರಟಿರುವ ಅಯ್ಯಪ್ಪ ಭಕ್ತ

ಉದುಂಬಿರಮಲ ಅಥವಾ ಇಚ್ಚಿಪ್ಪರಕೋಟ, ಕರಿಮಲೈ, ಶಬರಿಪೀಠ, ಶರಂಕುತ್ತಿ ಮತ್ತು ಪದಿನೆಟ್ಟಾಂಪಡಿ. ಪಂಪಾ ತಲುಪುದ ಮುಂಚೆ ಮೂರು ಅಯ್ಯಪ್ಪ ದೇವಸ್ಥಾನಗಳು ಸಿಗುತ್ತವೆ. ಅಯ್ಯಪ್ಪ ಬಾಲಕನಾಗಿ – ಕುಲಿಯ ತುಪ್ಪುಲದಲ್ಲಿ, ಬ್ರಹ್ಮಚಾರಿಯಾಗಿ ಅರಿಯನಗಾವುನಲ್ಲಿ ಪೂರ್ಣ ಪುಷ್ಕಳಾರೊಡನೆ ಗೃಹಸ್ಥನಾಗಿ – ಅಚ್ಚನ್ ಕೋಯಿಲ್‌ನಲ್ಲಿ ಕಾಣಬಹುದೆಂದು ತಿಳಿಯಬಂತು. ನಾವು ಸೀದಾ ಪಂಪಾ ತಲುಪುವವರಿದ್ದುದರಿಂದ ಮಧ್ಯದಲ್ಲಿ ಯಾವ ದೇವಸ್ಥಾನಕ್ಕೂ ಭೇಟಿ ಕೊಡಲಿಲ್ಲ. ಆಯಾಸದಿಂದ ಹಾಗೂ ಕತ್ತಲಾದ್ದರಿಂದ ಘೋರ ಅರಣ್ಯದ ಸೌಂದರ್ಯವನ್ನು ಸವಿಯಲಾಗಲಿಲ್ಲ. ಸುಮಾರು 9 ಗಂಟೆಗೆ ಪಂಪಾ ತೀರವನ್ನು ತಲುಪಿದೆವು.

ಪಾಂಡ್ಯರಾಜನಿಗೆ ಅಯ್ಯಪ್ಪ ಮಗುವಾಗಿ ದೊರಕಿದ್ದು ಪಂಪಾ ನದಿ ತೀರದಲ್ಲಿ ಎಂದು ಐತಿಹ್ಯವಿದೆ. ಪಂಪಾ ನದಿಗೆ ಸೇತುವೆ ಕಟ್ಟಿದ್ದಾರೆ. ಎಲ್ಲಿಯೂ ಸ್ಥಳವಿಲ್ಲದಷ್ಟು ಜನಸಮೂಹ. ಸಾಲು ಸಾಲು ಅಂಗಡಿಗಳು, ಉಪಹಾರಗೃಹಗಳು ಇದ್ದವು. ನಾವು ನಮ್ಮ ಇರುಮುಡಿಯನ್ನು ಒಂದು ಉಪಹಾರಗೃಹದಲ್ಲಿ ಇಳಿಸಿದೆವು. ಪಂಪಾ ನದಿಯಲ್ಲಿ ಎಲ್ಲರೂ ಸ್ನಾನ ಮಾಡಿದೆವು. ಪಂಪಾ ಹಬ್ಬಿ ಹಾಗೂ ಪಂಪಾ ವಿಳಕ್ಕು ಎಂದು ಭಕ್ತರು ಇಲ್ಲಿ ಆಚರಿಸುತ್ತಾರೆ. ಇರುಮುಡಿಯಲ್ಲಿ ಒಂದು ಭಾಗದಲ್ಲಿ ಆಹಾರ ಪದಾರ್ಥ ಇಲ್ಲಿಗೆ ಮುಗಿಯಬೇಕೆಂಬ ಸಂಪ್ರದಾಯ. ಪಾಪಶೇಷಗಳು ಕಳೆದು ಮುಕ್ತಿ ಪಥದೆಡೆಗೆ ಸಾಗಬೇಕೆಂಬ ಉದ್ದೇಶ.

ಇರುಮುಡಿಗೆ ಮಂಗಳಾರತಿಯನ್ನು ಗುರುಸ್ವಾಮಿ ಮಾಡಿದರು. ಅವರಿಗೆ ದಕ್ಷಿಣೆಯನ್ನು ಅರ್ಪಿಸಿ ಇರುಮುಡಿಯನ್ನು ತಲೆಯ ಮೇಲಿಟ್ಟುಕೊಂಡು ಬೆಟ್ಟ ಹತ್ತಲು ಹೊರಟೆವು. ಇಲ್ಲಿಂದ ಏಳು ಕಿ.ಮೀ. ದೂರ ಸ್ವಾಮಿ ಸನ್ನಿಧಿಗೆ. ಗಣೇಶ, ಹನುಮಾನ್ ಮತ್ತು ದೇವಿಯ ದರ್ಶನ ತೆಗೆದುಕೊಂಡು ಬೆಟ್ಟ ಏರಲು ಪ್ರಾರಂಭಿಸಿದೆವು. ಹಗಲು, ರಾತ್ರಿ ಎನ್ನದೆ ಇರುವೆ ಸಾಲಿನಂತೆ ಜನ ಸಾಲು ಸಾಲಾಗಿ ಘೋಷಣೆಯೊಂದಿಗೆ ಹತ್ತುತ್ತಿದ್ದರು. ನಿರ್ಜನವಾಗಿದ್ದ ಸಮಯದಲ್ಲಿ ಆನೆಗಳು ಮತ್ತು ಇತರ ದುಷ್ಟ ಪ್ರಾಣಿಗಳು ಬರುತ್ತವೆ ಎಂದು ತಿಳಿಯಿತು. ನಾವು ಹತ್ತುತ್ತಿರುವ ಬೆಟ್ಟ ನೀಲಿ ಮಲೈ. ಕಡಿದಾದ ಬೆಟ್ಟ. ಮಧ್ಯೆ ಮಧ್ಯೆ ಜಾರದಿರಲು ಹಲಗೆ ಹಾಕಿದ್ದಾರೆ. ಹತ್ತಲಿಕ್ಕೆ ಅಶಕ್ತರಾದವರು ಡೋಲಿಯಲ್ಲಿ ಹೋಗಬಹುದು. ಇಂತಹವರ ಸಂಖ್ಯೆ ಬಹಳ ಕಮ್ಮಿ. ಬರಿಕಾಲಿನಲ್ಲಿದ್ದು ತಲೆಯ ಮೇಲೆ ಇರುಮುಡಿ ಇಟ್ಟುಕೊಂಡು ಬೆಟ್ಟ ಹತ್ತುತ್ತಿದ್ದರೂ ದೇವರ ದರ್ಶನ ಮಾಡಬೇಕೆನ್ನುವ ಉತ್ಸಾಹ ಎಲ್ಲರಲ್ಲಿಯೂ ತೋರುತ್ತಿತ್ತು. ಮಧ್ಯೆ ಮಧ್ಯೆ ವಿಶ್ರಾಂತಿ ಪಡೆಯುತ್ತಿದ್ದೆವು. ಅಲ್ಲಲ್ಲೇ ಒಣ ಶುಂಠಿಯಿಂದ ಮಾಡಿದ ಕಷಾಯ ಸಿಗುತ್ತಿತ್ತು. ಇದರಿಂದ ಆಯಾಸ ಪರಿಹಾರವಾಗುತ್ತಿತ್ತು. ಅಪ್ಪಚ್ಚಿಮೇಡು ಎಂಬ ಜಾಗ ತಲುಪಿದೆವು. ಇಲ್ಲಿ ಹಿಟ್ಟಿನಿಂದ ಮಾಡಿದ ಉಂಡೆಗಳನ್ನು ಕೊಂಡು ಕೊಂಡು ಅರಣ್ಯದ ಹಕ್ಕಿ ಪ್ರಾಣಿಗಳಿಗೆ ಎಸೆದೆವು. ಮುಂದಿನದೇ ಶಬರಿ ಪೀಠ. ಶಬರಿಗೆ ರಾಮನಿಂದ ಮೋಕ್ಷಪ್ರಾಪ್ತಿಯಾದ ಸ್ಥಳವೆಂದು ಹೇಳಲಾಗುತ್ತದೆ. ಇಲ್ಲಿಂದ ಅರ್ಧ ಕಿ.ಮೀ. ದೂರದಲ್ಲಿ ಶರಂಕುತ್ತಿ ಸಿಗುತ್ತದೆ. ಇಲ್ಲಿರುವ ಪೊದೆಯಲ್ಲಿ ನಾವು ತಂದ ಲಾಡಿ, ಶರ, ಕತ್ತಿ ಎಲ್ಲಾವನ್ನು ಹಾಕಿ ನಾಲ್ಕು ದಿಕ್ಕಿಗೂ ಚಿಲ್ಲರೆ ಕಾಸುಗಳನ್ನು ಹಾಕಿದೆವು. ಈ ವೇಳೆಗೆ ಬೆಳಗಾಗಿತ್ತು. ಇರುಮುಡಿ ತೆಗೆದುಕೊಂಡವರು ಮಾತ್ರ ಹದಿನೆಂಟು ಮೆಟ್ಟಲನ್ನು ಹತ್ತಬಹುದು. ಇಲ್ಲದವರು ಬೇರೆ ದಾರಿಯಿಂದ ಸನ್ನಿಧಾನವನ್ನು ಸೇರುತ್ತಾರೆ. ಹದಿನೆಂಟು ಮೆಟ್ಟಲ ಬುಡಕ್ಕೆ ನಾವು ಬಂದಿದ್ದೆವು.

ಹದಿನೆಂಟು ಮೆಟ್ಟಲುಗಳು

ನೆಲದಿಂದ 25 ಅಡಿ ಎತ್ತರದಲ್ಲಿ ಕಟ್ಟಿರುವ ಗುಡಿಯನ್ನು ತಲುಪಲು ಹದಿನೆಂಟು ಮೆಟ್ಟಲುಗಳನ್ನು ಏರಬೇಕು. ಈ ಮೆಟ್ಟಲು ಕಲ್ಲಿನದಾಗಿದ್ದು, ಈಗ ಅದಕ್ಕೆ ಲೋಹದ ಹೊದಿಕೆ ಹಾಕಿದ್ದಾರೆ. ಈ ಮೆಟ್ಟಲುಗಳು ಅತ್ಯಂತ ಪವಿತ್ರವಾದುದೆಂದೂ, ಹದಿನೆಂಟು ಪುರಾಣಗಳ ಸಂಕೇತವೆಂದೂ, ಮತ್ತು ವೀರ ಅಯ್ಯಪ್ಪ ಹದಿನೆಂಟು ಆಯುಧಗಳನ್ನು ಬಳಸಿದ್ದರ ಪ್ರತೀಕವೆಂದೂ ಹೇಳುತ್ತಾರೆ. ಈ ಸಂಕೇತಗಳೂ ಅಲ್ಲದೆ ಹದಿನೆಂಟು ಮೆಟ್ಟಲುಗಳನ್ನು ಪಂಚೇಂದ್ರಿಯ, ಅಷ್ಟರಾಗ, ತ್ರಿಗುಣ ವಿದ್ಯಾ ಹಾಗೂ ಅವಿದ್ಯಾ ಎಂದು ಪರಿಗಣಿಸುತ್ತಾರೆ. ಈ ಮೆಟ್ಟಲುಗಳನ್ನು ಎರಡು ಸಲ ಮಾತ್ರ ಯಾತ್ರಿಕರು ಉಪಯೋಗಿಸುತ್ತಾರೆ. ದೇವರ ದರ್ಶನ ಪಡೆಯಲು ಹಾಗೂ ಕೊನೆಯಲ್ಲಿ ಇಳಿಯಲು; ಉಳಿದ ಸಮಯದಲ್ಲಿ ಬೇರೆ ಮಾರ್ಗವನ್ನು ಬಳಸಬೇಕು. ಮೆಟ್ಟಲು ಹತ್ತುವುದಕ್ಕೆ ಮುಂಚೆ ತೆಂಗಿನಕಾಯಿ ಒಡೆದು ಹತ್ತಲು ಪ್ರಾರಂಭ. ಮೊದಲನೆ ಸಲ ಬಂದಾಗ ಮೊದಲ ಮೆಟ್ಟಲ ಮೇಲೆ, ಎರಡನೆ ಸಲ ಎರಡನೆ ಮೆಟ್ಟಲ ಮೇಲೆ ಹೀಗೆ ಎಷ್ಟನೆ ಸಲ ಬರುತ್ತಾರೋ ಅಷ್ಟನೆ ಮೆಟ್ಟಲ ಮೇಲೆ ಒಡೆಯುವ

# ಕೆಲವು ಮಕ್ಕಳು, ಇತರ ಮಕ್ಕಳಿಗಿಂತ ಹೆಚ್ಚು ಚೂಟಿಯಾಗಿರುತ್ತವೆ - ಅದು ಹೇಗೆ?

ಚೂಟಿಯಾಗಿರಲು ಬೇಕಾದ ಶಕ್ತಿಯನ್ನು ಪಡೆದುಕೊಳ್ಳಲು, ನಿಮ್ಮ ಮಗುವಿಗೆ 'ಸರಿಯಾದ' ಕ್ಯಾಲೊರಿ ಒದಗಿಸಿಕೊಡುವುದು ಅವಶ್ಯಕವಾಗಿದೆ. ಸರಿಯಾದ ಪ್ರಮಾಣದ **ಪ್ರೊಟೀನ್‌ಗಳು, ಕಾರ್ಬೊಹೈಡ್ರೇಟ್‌ಗಳು ಮತ್ತು ಕೊಬ್ಬುಗಳಿಂದ**, ಮಗು, ಈ ಕ್ಯಾಲೊರಿಗಳನ್ನು ಪಡೆದುಕೊಳ್ಳಬಹುದಾಗಿದೆ.

'ಸರಿಯಾದ' ಕ್ಯಾಲೊರಿಗಳನ್ನು ಪಡೆಯಲು, **ಪೌಷ್ಟಿಕವಾದ ಸಮತುಲಿತ ಆಹಾರ** ಸೇವಿಸುವುದು ಒಂದು ಅತ್ಯುತ್ತಮ ವಿಧಾನವಾಗಿದೆ.

ನೀವು ನಿಮ್ಮ ಡಾಕ್ಟರ್‌ರನ್ನು ಕೇಳಿದಲ್ಲಿ **4 ತಿಂಗಳಾದಾಗಿನಿಂದ** ನಿಮ್ಮ ಮಗುವಿಗೆ ಬರೀ ಹಾಲು ಕುಡಿಸಿದರೆ ಸಾಲದು-ಎಂಬುದನ್ನು ಅವರು ಹೇಳೇ ಹೇಳುತ್ತಾರೆ. ನಿಮ್ಮ ಮಗುವಿಗೆ, ಈಗ ಪೌಷ್ಟಿಕವಾದ, ಸಮತುಲಿತ ಘನ ಆಹಾರದ ಅವಶ್ಯಕತೆ ಇರುತ್ತದೆ. ಅದೂ ಪ್ರತೀ ದಿನ ಪ್ರತೀ ವಾರ.

ಆದರೆ ಬಹುತೇಕ ತಾಯಿಂದಿರ ಪಾಲಿಗೆ, ಸಾಂಪ್ರದಾಯಿಕ ಆಹಾರದಲ್ಲಿ ಸಮತುಲನ ರೂಢಿಸಿಕೊಂಡು ಬರುವುದು ಸುಲಭವೇನಲ್ಲ

ಅದಕ್ಕೆ ಪರಿಹಾರ?

**ಸೆರಿಲ್ಯಾಕ್**. ನಿಮ್ಮ ಮಗುವಿಗೆ ಅಭ್ಯಾಸವಾಗಿರುವ **ಹಾಲಿನ ಸಕಲ ಸದ್ಗುಣಗಳನ್ನು** ಹೊಂದಿದ ಪೌಷ್ಟಿಕವಾದ ಸಮತುಲಿತ ಘನ ಆಹಾರ. ಬೆಳೆಯುವ ಮಕ್ಕಳಿಗೆ ಅತ್ಯುತ್ತಮವೆಂದು ಪರಿಗಣಿಸಲಾಗಿರುವ ಹಾಲಿನ ಪ್ರೊಟೀನ್‌ಗಳು ಸಹ ಇದರಲ್ಲಿವೆ. ಸೆರಿಲ್ಯಾಕ್, ಕೊಬ್ಬು, ಕಾರ್ಬೊಹೈಡ್ರೇಟ್ಸ್, ಕಬ್ಬಿಣಾಂಶ ಮತ್ತು ಕ್ಯಾಲ್ಸಿಯಂ ಅನ್ನು ಸರಿಯಾದ ಪ್ರಮಾಣದಲ್ಲಿ ಹೊಂದಿದೆ. ಹಾಗೂ ವಿಟಮಿನ್ A, D, E, B-ಕಾಂಪ್ಲೆಕ್ಸ್ ಮತ್ತು C-ಗಳಿಂದ ಸಮೃದ್ಧವಾಗಿದೆ.

ಅಷ್ಟೇ ಅಲ್ಲ; ಸೆರಿಲ್ಯಾಕ್ ಅನ್ನು ಈಗ ನೆಸ್ಲೆಯ ಕ್ರಾಂತಿಕಾರಿಯಾದ **ಹೊಸ Z-ಲೈನ್ ಎನ್‌ಜೈಮ್ಯಾಟಿಕ್ ಎಂಬ ಹೊಸ ವಿಧಾನದಿಂದ** ಸಂಸ್ಕರಿಸಿ ತಯಾರಿಸಲಾಗುತ್ತಿದೆ. ಈ ವಿಧಾನದಲ್ಲಿ, ಧಾನ್ಯಗಳನ್ನು ಮೊದಲೇ ಜೀರ್ಣಿಸಲಾಗಿರುತ್ತದೆ. ಇದರಿಂದಾಗಿ, ಮಗು, ಸೆರಿಲ್ಯಾಕ್ ಅನ್ನು ಜೀರ್ಣಿಸಿಕೊಳ್ಳುವುದು ಇನ್ನು ಸುಲಭವಾಗಿದೆ. ಸೆರಿಲ್ಯಾಕ್ ತುಂಬ ನಯವಾಗಿದೆ. ಹೆಚ್ಚು ಸ್ವಾದಿಷ್ಟವಾಗಿದೆ.

ಆದ್ದರಿಂದ, 4 ತಿಂಗಳಾದಾಗಿನಿಂದ ನಿಮ್ಮ ಮಗುವಿಗೆ ಸೆರಿಲ್ಯಾಕ್ ಕೊಡಿ. ಇದು 'ಸರಿಯಾದ' ಪ್ರೊಟೀನ್‌ಗಳನ್ನು ಒಳಗೊಂಡಿದೆ. ಹಾಲಿನ ಸಕಲ ಸದ್ಗುಣಗಳನ್ನು ಹೊಂದಿದೆ. ನಿಮ್ಮ ಮಗು ಸದಾ ಚೂಟಿಯಾಗಿರಲು ಬೇಕಾದ ಪೌಷ್ಟಿಕವಾದ ಸಮತುಲಿತ ಘನ ಆಹಾರ ಇದೇ ಆಗಿದೆ.




ಉಚಿತ. ಸೆರಿಲ್ಯಾಕ್ ಬೇಬಿ ಕೇರ್ ಬುಕ್. ನಿಮ್ಮ ಮಗುವಿನ ವಯಸ್ಸು ಮಗುವಿನ ಜನನದ ನಿರೀಕ್ಷಿತ ದಿನಾಂಕ ಮತ್ತು ಯಾವ ಭಾಷೆಯಲ್ಲಿರುವ ಪುಸ್ತಕ ಬೇಕು ಇತ್ಯಾದಿಗಳನ್ನು ಈ ವಿಳಾಸಕ್ಕೆ ಬರೆಯಿರಿ. ಸೆರಿಲ್ಯಾಕ್, ಪೋಸ್ಟ್ ಬ್ಯಾಗ್ ನಂ. 21, ನ್ಯೂಡೆಲ್ಲಿ-110029.

## ನಿಮ್ಮ ಮಗುವಿಗೆ ನೀಡಿ ಸೆರಿಲ್ಯಾಕ್ ಸೌಲಭ್ಯ.

ಮುಖ್ಯ ಸೂಚನೆ: ನಿಮ್ಮ ಮಗುವಿಗೆ ತಾಯಿ ಹಾಲು ಅತ್ಯುತ್ತಮ. ನಿಮ್ಮ ಮಗುವಿಗೆ 4 ತಿಂಗಳಾದಾಗಿನಿಂದ, ಅದಕ್ಕೆ ತಾಯಿ ಹಾಲಿನ ಜೊತೆಗೆ, ಧಾನ್ಯಾಹಾರವನ್ನು ಸಹ ಕೊಡಲಾರಂಭಿಸಿ.

ಸಂಪ್ರದಾಯ. ಈಗ ಜನ ಹೆಚ್ಚಾದ್ದರಿಂದ ಮೆಟ್ಟಿಲ ಮೇಲೆ ಕಾಯಿ ಒಡೆಯಲು ಅವಕಾಶವಿಲ್ಲ. ಪಡಿಪೂಜಾ ಅಥವಾ ಮೆಟ್ಟಿಲು ಪೂಜೆಯ ಸೇವೆ ಹೆಚ್ಚಿನ ಬೆಲೆಯದಾಗಿರುತ್ತದೆ. 5000 ರೂ. ರಾತ್ರಿ ಹೊತ್ತು ತಂತ್ರಿಗಳಿಂದ ಪೂಜೆ ಮಾಡಲ್ಪಡುತ್ತದೆ. ಈ ಪೂಜೆ ನೋಡಲು ಬಹಳ ರಮಣೀಯವೆಂದೂ ಹೇಳುತ್ತಾರೆ.

ನಾವು ಶರಣಂ ಅಯ್ಯಪ್ಪ ಘೋಷಣೆಯೊಂದಿಗೆ ಮೆಟ್ಟಿಲುಗಳನ್ನು ಏರತೊಡಗಿದೆವು. ಜನಪ್ರವಾಹವೇ ಇದ್ದರೂ ಯಾವ ಗಲಾಟೆಗೂ ಅವಕಾಶವಾಗದಂತೆ ಜನರು ಹತ್ತುತ್ತಿದ್ದುದು ಒಂದು ವೈಶಿಷ್ಟ್ಯವೇ. ಪೋಲೀಸರುಗಳೂ ಸಹಾಯ ಮಾಡುತ್ತಿದ್ದರು. ಮೆಟ್ಟಿಲೇರಿ ಗುಡಿಯ ಎದುರಿನಲ್ಲಿ ನಿಂತಾಗ ಮನಸ್ಸಿಗೆ ಅಗಾಧ ಆನಂದ. ಶ್ರಮ ಸಾರ್ಥಕವಾಯಿತೆಂಬ ತೃಪ್ತಿ, ತೊಂದರೆ ಇಲ್ಲದೆ ಬಂದು ಸೇರಿದೆವೆಂಬ ಸಮಾಧಾನದ ಭಾವನೆ.

**ಅಯ್ಯಪ್ಪ ಸ್ವಾಮಿಯ ದರ್ಶನ**

ಮೆಟ್ಟಿಲು ಏರಿದ ತಕ್ಷಣ ಧ್ವಜಸ್ತಂಭ ಇದೆ. ಸ್ವಾಮಿಯ ದರ್ಶನ ಪಡೆಯಲು ಜನ ಸಾಲು ಸಾಲಾಗಿ ನಿಂತಿದ್ದರು. ನಾವು ಅವರೊಂದಿಗೆ ನಿಂತು ದರ್ಶನ ಮಾಡಲು ಸಾಕಷ್ಟು ಸಮಯವೇ ಹಿಡಿಯಿತು. ತುಪ್ಪದ ಅಭಿಷೇಕ ಪೂಜೆ ಮಾಡಿ ಅಲಂಕಾರ ಮಾಡಿದ್ದರು. ವಿಪರೀತ ಗಲಾಟೆ ಇದ್ದುದರಿಂದ ಬಹಳ ವೇಳೆ ಗುಡಿ ಮುಂದೆ ನಿಲ್ಲಲು ಅವಕಾಶವಿರಲಿಲ್ಲ. ಗುಡಿ ಚಿಕ್ಕದು. ಮೇಲೆ ಹಂಚಿನ ಹೊದಿಕೆ. ದಕ್ಷಿಣ ಕನ್ನಡ ಜಿಲ್ಲೆಯ ದೇವಸ್ಥಾನದ ಮಾದರಿ. ಅಯ್ಯಪ್ಪ ವಿಗ್ರಹವನ್ನು ಪಂಚಲೋಹದಿಂದ ಮಾಡಿರುವುದು. ಸುಮಾರು ಎರಡೂವರೆ ಅಡಿ ಎತ್ತರವಿದೆ. ಯೋಗ ಮುದ್ರೆಯಲ್ಲಿ ಕುಳಿತಿರುವ ಮೂರ್ತಿ. ಮಂಡಿ ಸುತ್ತ ಪಟ್ಟಬಂಧ, ಬಲಗೈ ಜಿನಮುದ್ರ, ಮಂಡಿಮೇಲೆ ನೀಡಿರುವ ಎಡಗೈ. ಮೂರ್ತಿ ತುಂಬಾ ಸುಂದರವಾಗಿದೆ.

ಗುಡಿಯಲ್ಲೇ ಸುಮಾರು 2 ಸಾವಿರ ಜನ ಸೇರಬಹುದಾದಷ್ಟು ಜಾಗ. ಸಾಲಾಗಿ ಬಂದು ಒಂದು ನಿಮಿಷ ದರ್ಶನ ಮಾಡಿ ಮುಂದೆ ಇಟ್ಟಿರುವ ಹುಂಡಿಯಲ್ಲಿ ದಕ್ಷಿಣೆ ಹಾಕಿ ಮುಂದೆ ಹೋದೆವು. ತಿರುಪತಿಯ ಜ್ಞಾಪಕ ಬಂತು. ಶಬರಿಮಲೆಗೆ ಪ್ರತಿ ವರ್ಷವೂ 1 ಕೋಟಿಗಿಂತ ಹೆಚ್ಚು ಜನರು ಬರುತ್ತಾರೆಂದೂ ಮತ್ತು 2 ಕೋಟಿಗಿಂತಲೂ ಹೆಚ್ಚು ಆದಾಯ ಇದೆಯೆಂದು ಅಂದಾಜು. ಉತ್ತರದಿಕ್ಕಿನಲ್ಲಿರುವ ಮೆಟ್ಟಿಲುಗಳನ್ನು ಇಳಿದು ಗುಡಿಯ ಕೆಳಭಾಗಕ್ಕೆ ಬಂದೆವು. ಒಂದು ಸಲಕ್ಕೆ ಹತ್ತು ಸಾವಿರ ಜನ ತಂಗಬಹುದಾದ ವಿಶ್ರಾಂತಿ ಮನೆಗೆ ಬಂದೆವು. ಇದಲ್ಲದೆ ಯಾತ್ರಿಕರು ಇಳಿದುಕೊಳ್ಳಲು ವಸತಿಗೃಹಗಳು ಸಾಕಷ್ಟಿವೆ. ನಾವು ಇಳಿದಿದ್ದ ಜಾಗದಲ್ಲಿ ಅನೇಕ ಹೋಟಲುಗಳು, ಅಂಗಡಿಗಳು, ಸ್ನಾನಗೃಹ ಎಲ್ಲಾ ಇದ್ದವು. ಜನರು ಗುಂಪು, ಗುಂಪಿನಲ್ಲಿ ಸಾಕಷ್ಟು ಇದ್ದರು. ನಮ್ಮ ಇರುಮುಡಿಯಿಂದ ತುಪ್ಪ ತುಂಬಿದ ತೆಂಗಿನಕಾಯಿ, ಇತರ ಪೂಜಾ ಸಾಮಗ್ರಿಗಳನ್ನು ಶೇಖರಿಸಿ ಗುರುಸ್ವಾಮಿಯವರು ತೆಗೆದುಕೊಂಡು ಹೋಗಿ ಪೂಜೆಗೆ ಕೊಟ್ಟು ಬಂದರು. ಸ್ವಾಮಿಗೆ ತುಪ್ಪದ ಅಭಿಷೇಕವೇ ಮುಖ್ಯವಾದುದು. ತೆಂಗಿನಕಾಯಿಯಲ್ಲಿದ್ದ ತುಪ್ಪವನ್ನು ಅಭಿಷೇಕ ಮಾಡಿ ಖಾಲಿ ತೆಂಗಿನ ಕಾಯಿಯನ್ನು ಅಗ್ನಿಕುಂಡಕ್ಕೆ ಹಾಕುತ್ತಾರೆ. ಈ ಅಗ್ನಿಯು ಈ ಅವಧಿಯಲ್ಲಿ ಮಾತ್ರ ಇರುತ್ತದೆ. ಕಾಯಿಯನ್ನು ಶರೀರಕ್ಕೂ, ತುಪ್ಪವನ್ನು ಆತ್ಮಕ್ಕೂ ಹೋಲಿಸಿದ್ದಾರೆ. ಯಾವಾಗ ತುಪ್ಪವನ್ನು ಸ್ವಾಮಿಗೆ ಹಾಕುತ್ತಾರೋ ಆಗ ಜೀವಾತ್ಮ ಪರಮಾತ್ಮನಲ್ಲಿ ಐಕ್ಯವಾಗುತ್ತದೆ ಎಂಬ ತತ್ವ. ಅಗ್ನಿಕುಂಡದಲ್ಲಿ ಕಾಯಿ ಹಾಕಿದ ನಂತರ ಶರೀರ ಅಗ್ನಿಯಲ್ಲಿ ದಗ್ಧವಾಯಿತೆನ್ನುವ ಭಾವ. ಮುಕ್ತಿಪಥದೆಡೆಗೆ ಹೋಗುವುದೇ ಗುರಿ.

ಸ್ವಲ್ಪ ವಿಶ್ರಮಿಸಿದ ಮೇಲೆ ಪುನಃ ಗುಡಿಯ ಹತ್ತಿರ ಬಂದೆವು. ಮಧ್ಯಾಹ್ನ ಗುಡಿಯ ಬಾಗಿಲು ಹಾಕಿತ್ತು. ಜನರ ಗಲಾಟೆ ಕಮ್ಮಿಯಾಗಿತ್ತು. ಸುತ್ತಮುತ್ತ ಇರುವ ಗುಡಿಗಳಿಗೆ ಜನ ಭೇಟಿ ನೀಡುತ್ತಿದ್ದರು. ದೇವಸ್ಥಾನದ ಒಳಾಂಗಣದಲ್ಲಿ ಎಡಭಾಗದಲ್ಲಿ ಮೂಲ ಗಣಪತಿ ದೇವಸ್ಥಾನವಿದೆ. ಚಿಕ್ಕ ಗುಡಿ. ಕಲ್ಲಿನ ಗಣೇಶಮೂರ್ತಿ. ಸ್ವಲ್ಪ ದೂರದಲ್ಲಿ ಒಂದು ಸಣ್ಣ ಗುಡ್ಡದ ಮೇಲೆ "ಮಾಳಿಗೆಪ್ಪುರತ್ತಮ್ಮ" ದೇವಾಲಯವಿದೆ. ಇದರ ಬಗ್ಗೆ ಒಂದು ಕತೆ ಕೇಳುತ್ತೇವೆ. ಶಾಪಗ್ರಸ್ತಳಾಗಿದ್ದ ಮಹಿಷಿಯನ್ನು ಅಯ್ಯಪ್ಪ ಸಂಹರಿಸಿದಾಗ ಶಾಪಮುಕ್ತಳಾಗಿ ಸ್ವಾಮಿಯನ್ನು ವರಿಸಬೇಕೆಂದು ಆಶಿಸುತ್ತಾಳೆ. ಯಾವ ವರ್ಷ ಮೊದಲನೆ ಬಾರಿಗೆ ಯಾತ್ರಿಕರು ಇರುವುದಿಲ್ಲವೋ ಅಂದು ವಿವಾಹ ಮಾಡಿಕೊಳ್ಳುವುದಾಗಿ ಬ್ರಹ್ಮಚಾರಿ ಅಯ್ಯಪ್ಪ ಹೇಳಿದ ಪ್ರಕಾರ ಅಲ್ಲಿಯೇ ಕಾಯುತ್ತಿದ್ದಾಳೆಂದು ಪ್ರತೀತಿ. ಇಲ್ಲಿ ತೆಂಗಿನಕಾಯಿಯನ್ನು ದೇವಸ್ಥಾನದ ಸುತ್ತ ಮೂರು ಬಾರಿ ಉರುಳಿಸಿ ಅಲ್ಲೇ ಇರುವ ಗುಡ್ಡಕ್ಕೆ ಸೇರಿಸುತ್ತಾರೆ. ಅರಿಶಿನದ ಪೂಜೆ ಮುಖ್ಯ. ಪೂಜೆಗೆಂದು ಉಪಯೋಗಿಸಿದ ಅರಿಶಿನವನ್ನು ತೆಗೆದು ಕೊಳ್ಳುವುದರಿಂದ ಶಾರೀರಿಕ ಬೇನೆಯನ್ನು ಹೋಗಲಾಡಿಸಬಹುದೆಂಬ ನಂಬಿಕೆ. ಅಮ್ಮನವರ ಹಬ್ಬವನ್ನು ಮಕರ ಸಂಕ್ರಾಂತಿಯ ಮಾರನೆಯ ದಿನ ಸಾಯಂಕಾಲ ಆಚರಿಸುತ್ತಾರೆ.

ಮುಂದೆ ನಾಗರಾಜ, ನಾಗ ಯಕ್ಷಿಯರ ದರ್ಶನ ಆಯಿತು. ಕಡುಕಸ್ವಾಮಿ ಮತ್ತು ಕರುಪ್ಪ ಸ್ವಾಮಿಯನ್ನು ನೋಡಿದೆವು. ಪಟಾಕಿ ಹಾರಿಸುವುದು ಇಲ್ಲಿಯ ಸೇವೆ. ಅಯ್ಯಪ್ಪ ಸ್ವಾಮಿಯ ಆತ್ಮೀಯನೂ ಸೇನಾಧಿಪತಿಯೂ ಆದ ವೀರ ವಾವರನ ಮಂದಿರವಿದೆ. ಇಲ್ಲಿ ವಿಗ್ರಹವಿಲ್ಲ. ಹಸಿರು ರೇಷ್ಮೆ ಬಟ್ಟೆಯ ಮೇಲೆ ಮುಸ್ಲಿಂ ಮತದ ಚಿಹ್ನೆ ಇದೆ. ಇದನ್ನು ಗೋಡೆಯ ಮೇಲೆ ಹಾಕಿದ್ದಾರೆ. ನೈವೇದ್ಯಕ್ಕೆ ಇಡುವ ಸಾಮಗ್ರಿಗಳಲ್ಲಿ ಕಲ್ಲುಸಕ್ಕರೆ, ಮೆಣಸು, ಬಾಳೆಹಣ್ಣು ಸೇರಿರುತ್ತವೆ. ಪವಿತ್ರವಾದ ಭಸ್ಮವೇ ಪ್ರಸಾದ. ಇದನ್ನು ಒದಗಿಸುವವರು ವಾವರ ವಂಶಕ್ಕೆ ಸೇರಿದವರು. ಭಸ್ಮಕುಳವೆಂಬ ಪುಷ್ಕರಣಿಯಲ್ಲಿ ಯಾತ್ರಿಕರು ಸ್ನಾನ ಮಾಡಬಹುದು. ಕೊನೆಯಲ್ಲಿ ಅಪ್ಪ, ಅರವಣ ಪಾಯಸದ ಪ್ರಸಾದಗಳನ್ನು ಖರೀದಿಸಲಾಯಿತು. ಇದಕ್ಕೂ ದೊಡ್ಡ ಸಾಲೇ ಇತ್ತು. ವಿಭೂತಿ, ಅಭಿಷೇಕ ಮಾಡಿದ ತುಪ್ಪ ಪ್ರಸಾದವನ್ನು ಗುರುಸ್ವಾಮಿಯವರು ಕೊಟ್ಟರು. ದರ್ಶನವೆಲ್ಲಾ ಆದ ಮೇಲೆ ಹದಿನೆಂಟು ಮೆಟ್ಟಿಲು ಮೂಲಕ ದೇವರಿಗೆ ಬೆನ್ನು ತೋರಿಸದೆ ಹಿಂದಕ್ಕೆ ಇಳಿಯುವ ಪದ್ಧತಿ. ತುಂಬಾ ಗಲಾಟೆ ಇದ್ದುದರಿಂದ ನಾವು ಬೇರೆ ದಾರಿಯಿಂದ ಬಂದೆವು. ಮಧ್ಯಾಹ್ನ ಎರಡು ಘಂಟೆಗೆ ಬೆಟ್ಟ ಇಳಿಯಲು ಆರಂಭಿಸಿದೆವು. ಈಗ ಹೆಗಲಿನ ಚೀಲ ಮಾತ್ರ. ಇಳಿಯುವಾಗ ಕಷ್ಟವಾಗಲಿಲ್ಲ. ಪಂಪಾ ತೀರಕ್ಕೆ ಬಂದು ರಾತ್ರಿ ಅಲ್ಲಿಂದ ಬಸ್ಸಿನಲ್ಲಿ ಹೊರಟು 22ನೇ ತಾರೀಖು ಬೆಳಿಗ್ಗೆ ಗುರುವಾಯೂರಿಗೆ ಬಂದು ಅಲ್ಲಿಂದ ರಾತ್ರಿ ಕಲ್ಲಿಕೋಟೆಗೆ ಬಂದು 24ನೇ ಬೆಳಿಗ್ಗೆ ಭಟ್ಕಳಕ್ಕೆ ಬಂದು ಮಧ್ಯಾಹ್ನ ವಾಸ್ಕೋವನ್ನು ತಲುಪಿದೆವು. ಇಲ್ಲಿ ಅಯ್ಯಪ್ಪದೇವಸ್ಥಾನಕ್ಕೆ ಬಂದೆವು. ಇಲ್ಲಿ ತೆಂಗಿನಕಾಯಿ ಒಡೆದು ಮಾಲೆಯನ್ನು ತೆಗೆದೆವು. ಇಲ್ಲಿಗೆ ಯಾತ್ರಾ ಪೂರ್ತಿ ಆದಂತೆ. ಕೈಕೊಂಡ ಉದ್ದೇಶ ನೆರವೇರಿತೆಂಬ ತೃಪ್ತಿ ಎಲ್ಲರ ಮನಸ್ಸಿನಲ್ಲಿ. ಶಬರಿಮಲೈ ಯಾತ್ರೆಯ ಅನುಭವ ಅವಿಸ್ಮರಣೀಯ.

**ಮಕರಜ್ಯೋತಿ**

ಜನವರಿ 14 ಮಕರ ಸಂಕ್ರಾಂತಿಯ ದಿನ, ಪಂಡಲಮ್ ರಾಜ್ಯವಂಶದ ಪೂರ್ವಿಕರ ಮನೆಯಿಂದ ಆಭರಣದ ಪೆಟ್ಟಿಗೆಯನ್ನು ಬೆಟ್ಟಕ್ಕೆ ತರುತ್ತಾರೆ. ಆ ಸಮಯದಲ್ಲಿ ಗರುಡ ಪಕ್ಷಿ ಗೋಚರಿಸುವುದೆಂದೂ, ಪೂಜೆ ಪ್ರಾರಂಭವಾದಾಗ, ಪೊನ್ನಂಬಲಮೇಡು ಎಂಬ ಸ್ಥಳದಲ್ಲಿ ಹಿಂದೆ ಕಾಣದ ನಕ್ಷತ್ರವು ಕಂಡು ಬಂದು, ಹಿಂಬದಿಗೆ ಜ್ಯೋತಿಯೊಂದು ಕಾಣಬರುತ್ತದೆ ಎಂದು ಹೇಳುತ್ತಾರೆ. ಇದನ್ನೇ 'ಮಕರವಿಳಕ್ಕು' ಅಥವಾ 'ಮಕರ ಜ್ಯೋತಿ' ಎಂದು ಕರೆಯುತ್ತಾರೆ. ಇದನ್ನು ನೋಡಲು ಅಧಿಕ ಸಂಖ್ಯೆಯಲ್ಲಿ ಭಕ್ತರು ಸೇರುತ್ತಾರೆ. ಜ್ಯೋತಿ ಬಗ್ಗೆ ಹಲವಾರು ವಾದಗಳಿವೆ. ನಂಬಿಕೆ ಮುಖ್ಯ "ಬಿಂಬವೋ ಕಂಬವೋ ನಂಬಿಕೆಯ ಮಾತ್ರದಿಂ ದಿಂಬುಗೊಳುವುದು ಜೀವ ಮರುಳ ಮುನಿಯ". ಎಂಬ ಡಿ.ವಿ.ಜಿ.ಯವರ ವಾಕ್ಯಗಳು ಜ್ಞಾಪಕಕ್ಕೆ ಬರುತ್ತವೆ.

ನವೆಂಬರ್‌ನಿಂದ ಜನವರಿ ತಿಂಗಳಿನವರೆಗೂ ದೇವಾಲಯ ತೆರೆದಿರುವುದಲ್ಲದೆ ಪ್ರತಿತಿಂಗಳೂ ಸಂಕ್ರಮಣದಿಂದ (ತಿಂಗಳ 15ನೇ ಅಥವಾ 16ನೇ ತಾರೀಖು) ನಾಲ್ಕೈದು ದಿನಗಳು ಹಾಗೂ ಓಣಂ ಹಬ್ಬದ ಸಮಯದಲ್ಲೂ ದೇವಾಲಯ ತೆರೆದಿರುತ್ತದೆ. ಈ ಸಮಯದಲ್ಲಿ ಹೆಚ್ಚು ಗಲಾಟೆ ಇಲ್ಲದಿರುವುದರಿಂದ ಅಯ್ಯಪ್ಪ ದೇಗುಲಕ್ಕೆ ಭೇಟಿ ಕೊಡಬಹುದು.

ಜಾತಿ ಭೇದ, ಬಡವ ಬಲ್ಲಿದ ಎಂಬ ಯಾವ ಭೇದವೂ ಇಲ್ಲದೆ ಕೈಕೊಳ್ಳುವ ಯಾತ್ರೆ 'ಶಬರಿಮಲೈ ಯಾತ್ರೆ'. ವ್ರತನಿಷ್ಠೆಯಿಂದ ದೈಹಿಕ ಹಾಗೂ ಮಾನಸಿಕ ಸ್ಥಿರತೆ ಪಡೆಯಬಹುದು. ಕೇವಲ ಸಾಂಕೇತಿಕ ಹಾಗೂ ಯಾಂತ್ರಿಕವಾಗಿ ಯಾತ್ರೆ ಕೈಗೊಂಡಾಗ ಅದರ ಮಹತ್ವ ಮೌಲ್ಯಗಳೇನೂ ಇರುವುದಿಲ್ಲ. •

## ನಿಷೆಯ ವಶ

ಈ ಬೈಗು–ಬಾಂದಳ
ದಲ್ಲಿ ಮುಗಿಲ
ಅಶಕ್ತತೆಯ ವಶ
ನಾನು
ನಿಷೆಯಿಹುದು
ದಶ–ದಿಶೆಗೂ

ಮೂಡಣದ
ಹೊಗೆ
ಮನೆಯಲ್ಲಿ
ಜನಿಸಿದ
ನೇಸರನಂತೆ
ಮೂಡು ಬಾರಾ
ನನ್ನೊಳಗೂ ಸೀನಲ್ಲಾ.

— ಪಿಂಕಿ

# ಕಾರವಾರ ನಗರದ ಮೊದಲ ಮಹಿಳಾ ಆಟೋ ಚಾಲಕಿ



ಕಾರವಾರ ನಗರದ ಮೊದಲ ಮಹಿಳಾ ಆಟೋ ಚಾಲಕಿಯಾಗಿ ಉಮಾ ಶಂಕರ ದೊಡ್ಮನಿ ಅವರು ತನ್ನ ವಾಹನದೊಂದಿಗೆ ಬೀದಿಗಿಳಿದು ತನ್ನ ಕಾರ್ಯ ಚಟುವಟಿಕೆಯಲ್ಲಿ ಜನರ ಗಮನ ಸೆಳೆಯುತ್ತಾರೆ.

ನಗರದ ಸಂಗೀತ ಶಿಕ್ಷಕ ಶಂಕರ ದೊಡ್ಮನಿ ಅವರ ಹೆಂಡತಿಯಾಗಿ ಮೂರು ಮಕ್ಕಳ ತಾಯಿಯಾದ 30 ವರ್ಷ ಪ್ರಾಯದ ಉಮಾ ಪುರುಷ ಪ್ರಧಾನ ವೃತ್ತಿಯಾದ ಆಟೋ ಚಾಲನೆಗೆ ಇಳಿದು ಇಲ್ಲಿನ ಮಡಿವಂತರ ಹುಬ್ಬೇರುವಂತೆ ಮಾಡಿದ್ದಾರೆ.

ಶಂಕರ ದೊಡ್ಮನಿ 11 ವರ್ಷ ವಯಸ್ಸಿರುವಾಗಲೇ ತಮ್ಮ ಎರಡೂ ಕಣ್ಣು ಕಳೆದುಕೊಂಡವರು. ಆಗಲೇ ಅಕ್ಷರದ ಅರಿವಿದ್ದ ಅವರು ನಂತರ ಬ್ರೈಲ್ ಲಿಪಿ ಕಲಿತು ಸಂಗೀತ ಪ್ರಧಾನ ವಿಷಯವಾಗಿಸಿಕೊಂಡು ಸರಕಾರದ ಗಮನ ಸೆಳೆದು ಪ್ರಾಥಮಿಕ ಶಾಲೆಗೆ ನೇರವಾಗಿ ಸಂಗೀತ ಶಿಕ್ಷಕರಾಗಿ ಆಯ್ಕೆಯಾದವರು.

ಕಾರವಾರ ಬೀದಿಯಲ್ಲಿ ಈ ದಂಪತಿಗಳನ್ನು ಕಂಡವರಿದ್ದಾರೆ. ದುಡಿಯುವ ಗಂಡ ಕುಟುಂಬಕ್ಕೆ ಆಧಾರವಾದರೆ ಉಮಾ ಮಾತ್ರ ಗಂಡನಿಗೆ ಕಣ್ಣಾದವರು. ನಗರದ ಬಾಯಿ ಕುವರಬಾಯಿ ಶಾಲೆ ಹಾಗೂ ಕೋಡಿಬಾಗದ ಹಿರಿಯ ಪ್ರಾಥಮಿಕ ಶಾಲೆಯ ಸಂಗೀತ ಶಿಕ್ಷಕ ಶಂಕರ ಅವರನ್ನು ಬೀದಿಯಲ್ಲಿ ಉಮಾ ಕೈ ಹಿಡಿದು ಕರೆದೊಯ್ಯುವ ದೃಶ್ಯ ಸಾಮಾನ್ಯವಾಗಿ ಎಲ್ಲರೂ ಕಂಡಿದ್ದಾರೆ.

ಯಾವುದೇ ಸಮಾರಂಭಕ್ಕೆ ಹಿನ್ನೆಲೆ ಸಂಗೀತ ನೀಡಲು ಬರುವ ಶಂಕರ ಅವರ ಹತ್ತಿರವೇ ಉಮಾ ಇರುವುದು [illegible]ಮಾನ್ಯ. ಇವರಿಬ್ಬರ ಅನ್ಯೋನ್ಯತೆ ಕಂಡ ಕೆಲವ[illegible] [illegible]ಾಣ ಕಾಲದ ಉಮಾಶಂಕರ ಎಂದು [illegible]ರೆ. ಆದರೆ ಶಂಕರ ಅವರಿಗೆ ಹೀಗ ಹೆಂಡತಿ[illegible] ತನ್ನ ಚಾಕರಿ ಮಾಡುವುದು ಬೇಸರ ಎನಿಸಿತೋ ಏನೋ ಅಂತೂ ಇವರಿಗೆ ಒಂದು ಸ್ವಂತ ಉದ್ಯೋಗ ಹಚ್ಚುವ ಆಶೆಯನ್ನು ಮನದಲ್ಲಿಯೇ ಮಡಿಸಿಟ್ಟಿದ್ದರು.

ಕೆಲ ಸಮಯದ ಹಿಂದೆ ಬೆಂಗಳೂರಿನ ಮಹಾನಗರ ಪಾಲಿಕೆಯವರು ಕೆಲವು ಮಹಿಳೆಯರಿಗೆ ಆಟೋ ಚಾಲನೆ ತರಬೇತಿ ನೀಡಿ ಅವರಿಗೆ ಸಾಲದ ಮೇಲೆ ಆಟೋ ವಿತರಿಸಿದ ಸುದ್ದಿ ಶಂಕರ ಅವರ ಕಿವಿಗೆ ಯಾರೋ ಹಾಕಿದರು. ಇವರು ಗುಲ್ಬರ್ಗಾದಿಂದ ತನ್ನ ಅಳಿಯನನ್ನು ಕರೆಯಿಸಿ ಉಮಾಳಿಗೆ ಆಟೋ ಚಾಲನೆ ತರಬೇತಿ ಕೊಡಿಸಿದರು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳಲ್ಲಿ ತೆರಳಿ ಆಟೋ ಚಾಲನೆಯ ಲೈಸೆನ್ಸ್ ಪಡೆಯುವುದರೊಂದಿಗೆ ಅವರ ಮನ ಒಲಿಸಿ ಒಂದು ಆಟೋ ಪರ್ಮಿಟ್ ಪಡೆದರು. ನಂತರ ಕೆಎಸ್ಎಫ್‌ಸಿ ಬ್ರಾಂಚ್‌ಗೆ ತೆರಳಿ 30,000 ರೂ. ಸಾಲ ಪಡೆದು ತನ್ನ ಉಳಿತಾಯದಿಂದ 10,000 ರೂ. ತೆಗೆದು ಸೇರಿಸಿ ಆಟೋ ಖರೀದಿಸಿ ತಂದು ಕಾರವಾರ ನಗರದಲ್ಲಿ ತನ್ನ ಮಡದಿಯನ್ನು ಮೊದಲ ಆಟೋ ಚಾಲಕಿಯನ್ನಾಗಿ ಮಾಡಿ ಸಾಧನೆಗೈದರು.

ಕೇವಲ ಏಳನೆ ತರಗತಿ ಓದಿದ ಉಮಾ ಸಾಹಸಿ ಹೆಣ್ಣು. ಆದರೆ ತಾನು ಆಟೋ ಚಾಲಕಿಯಾಗಿ ಯಶಸ್ಸು ಗಳಿಸಿರುವುದರ ಹಿಂದೆ ತನ್ನ ಗಂಡ ನೀಡಿದ ಧೈರ್ಯ ಹಾಗೂ ಅವರು ಪಟ್ಟ ಪ್ರಯತ್ನವಿದೆ ಎನ್ನುತ್ತಾರೆ.

ಈ ವೃತ್ತಿಯಲ್ಲಿ ಖುಷಿಯಿಂದಿರುವ ಉಮಾ ಬೇಸಿಗೆಯ ವೇಳೆಯಲ್ಲಿ ದಿನಕ್ಕೆ 120ರಿಂದ 130 ರೂ. ಗಳಿಸಿದ್ದಾರೆ. "ಆದರೆ ಮಳೆಗಾಲದಲ್ಲಿ 60–70 ರೂ. ಗಳಿಸುತ್ತೇನೆ. ಖರ್ಚೆಲ್ಲಾ ತೆಗೆದರೆ ದಿನಕ್ಕೆ 50 ರೂ.ಗಳಿಗೆ ಮೋಸವಿಲ್ಲ. ಪ್ರತಿ ತಿಂಗಳು 600 ರೂ. ಸಾಲದ ಕಂತು ತುಂಬಲು ಯಾವುದೇ ತೊಂದರೆ ಬರುವುದಿಲ್ಲ" ಎಂದು ಹೇಳುತ್ತಾರೆ.

"ತಾನು ಆಟೋ ನಿಲ್ದಾಣದಲ್ಲಿ ಸರದಿಯಂತೆ ಸಾಲಿನಲ್ಲಿರುವಾಗ ಹೆಂಗಸರು, ಗಂಡಸರು ಅಥವಾ ಮುದುಕರು ತನ್ನನ್ನೇ ವಿಶ್ವಾಸದಿಂದ ಕರೆಯುತ್ತಾರೆ. ಆದರೆ ಸರದಿಯ ನಿಯಮ ಮುರಿಯಲಾಗುವುದಿಲ್ಲ. ಶಿಸ್ತು ಪಾಲಿಸಬೇಕಾಗುತ್ತದೆ. ಪುರುಷ ಚಾಲಕರಿಂದ ಸಹ ಯಾವುದೇ ತೊಂದರೆ ಇಲ್ಲ. ವೃತ್ತಿಯಲ್ಲಿ ಏನೇ ಅಡೆ ತಡೆ ಬಂದರೂ ಎದುರಿಸುವ ಛಾತಿ ನನ್ನಲ್ಲಿದೆ" ಎನ್ನುತ್ತಾರೆ ಉಮಾ.

ದಿನಾಲೂ ಬೆಳಿಗ್ಗೆ ಗಂಡನನ್ನು ಶಾಲೆಗೆ ರಿಕ್ಷಾದಲ್ಲಿ ಬಿಟ್ಟು ಬಂದು ನಂತರ ಮನೆಗೆಲಸ ಮಾಡಿ 9 ಗಂಟೆಗೆ ಆಟೋದೊಂದಿಗೆ ಬೀದಿಗಿಳಿಯುವ ಉಮಾ ಶಾಲೆ ಬಿಡುವ ಹೊತ್ತು ಹಾಜರಾಗಿ ಗಂಡನನ್ನು ಮನೆಗೆ ಕರೆತರುತ್ತಾರೆ. ನಂತರ ಶಾಲೆ ಬಿಟ್ಟು ಬಂದ ಮಕ್ಕಳಿಗೆ ಊಟ ನೀಡಿ 2 ಗಂಟೆಗೆ ಗಂಡನನ್ನು ಶಾಲೆಗೆ ಬಿಟ್ಟು 5ರ ತನಕ ದುಡಿದು ಶಾಲೆಗೆ ಹೋಗಿ ಗಂಡನನ್ನು ಮನೆಗೆ ಕರೆದುಕೊಂಡು ಬಂದು ಚಹಾ ನೀಡಿ ಮತ್ತೆ ಸಾಗುತ್ತಾರೆ. ಕತ್ತಲಾಗುವವರೆಗೆ ದುಡಿದು ಬೆಳಕಿರುವಾಗಲೇ ಮನೆ ಸೇರುತ್ತಾರೆ.

ಸೀರೆ, ಕುಪ್ಪುಸ ಬಿಟ್ಟು ಪ್ಯಾಂಟು ಮತ್ತು ಅಂಗಿ ಧರಿಸಿ ಆಟೋ ಚಾಲಕಿಯಾದ ಗುಲ್ಬರ್ಗಾ ಜಿಲ್ಲೆಯ ಈ ಹಳ್ಳಿ ಹುಡುಗಿ ಈಗ ಶಹರದ ಹೆಣ್ಣಾಗಿ ದುಡಿಯುವ ಕೈಗೆ ಯಾವುದೇ ವೃತ್ತಿ ಬೇಧವಿಲ್ಲವೆಂದು ಹೇಳುತ್ತಾರೆ.

ಮಹಿಳೆಯರು ದ್ವಿಚಕ್ರ ವಾಹನ ಬಿಡುವಾಗ ಇದರಲ್ಲೇಕೆ ಮಡಿವಂತಿಕೆ? ಎಂದು ಕೇಳುವ ಅವರು ಸಾಮರ್ಥ್ಯವೆಂಬುದು ಯಾರದೇ ಸೊತ್ತಲ್ಲವೆಂದು ವಾದಿಸುತ್ತಾರೆ.

–ಭವಾನಿ ಹಿರೇಗುತ್ತಿ




## ನಿಬಂಧನೆಗಳು

ಮಹಿಳೆಯರ ಸ್ಮರಣಶಕ್ತಿಗೆ ಹೊಸ ಹರಿತವನ್ನೊದಗಿಸಿ, ಸೀಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರುಪರಿಚಯ ನೀಡುವ ವನಿತಾ ಪದಸಂಪದ ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನುರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ ವನಿತಾ ಪದಸಂಪದ ಚೌಕದಲ್ಲಿ ಭರ್ತಿ ಮಾಡಿ 1992ರ ಡಿಸೆಂಬರ್ 25ನೇ ದಿನಾಂಕದೊಳಗೆ "ವನಿತಾ ಪದಸಂಪದ – 52, ಚಂದಮಾಮ ಬಿಲ್ಡಿಂಗ್ಸ್, ಮದರಾಸು – 600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ ವನಿತಾ ಪದಸಂಪದ ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರವನ್ನು 1993ರ ಫೆಬ್ರುವರಿ 'ವನಿತಾ'ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿ ಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

ಹೆಸರು ______________________

ವಿಳಾಸ ______________________




**ಎಡದಿಂದ ಬಲಕ್ಕೆ**

1. ಚೈತ್ರ ಮಾಸದಲ್ಲಿ ಸಿಕ್ಕ ಜೀವದ ಲಕ್ಷಣ (3)
2. ಕರಿ ಬಣ್ಣದ ಈತ ಮುಸ್ಲಿಂ ಬಂಧು (3)
4. ಬೆಟ್ಟದಲ್ಲಿ ಜನಿಸಿದಾಕೆ (3)
6. ಮಂಗಳ ಪ್ರಸಂಗಗಳಲ್ಲಿ ಮುಂಗೈಗೆ ಕಟ್ಟಿದ ದಾರ (5)
8. ಕಾಪಾಡಿಕೊಳ್ಳಲು ಕಟ್ಟಿಕೊಂಡ ತಾಯಿತ (5)
10. ಭದ್ರಯ್ಯನಿಂದ ಅಂಜಿಕೆ (2)
11. ಆಸನ ಸಿಕ್ಕಿದ್ದರೂ ಯಾಕೋ ದುಃಖ (3)
13. ಕಲಾವಿದ ಮಾತ್ರವಲ್ಲ, ಈತ ಕಾವ್ಯರಚನೆಕಾರ ಸಹ (2)
15. ಹಿಂದಿನ ಬಟ್ಟೆಯ ಅಳತೆಗೋಲು (2)
16. ಹೀಗೆ ಹೇಳಿಕೊಂಡು ಬಂದು ಕುಳಿತ ಬಂಧು (2)
17. ನೆನಪಾದ ಕಾರಣ (2)
19. ಸತ್ತಾಗ ಬಂದ ಅಂಟು (3)
21. ಗಣತಿ ಮಾಡಿದವನ ಸ್ಥಿತಿ (2)
24. ಗುಡಿಸಲಿನ ಜೀವನಕ್ಕೆ ಹೀಗನ್ನಬಹುದು (5)
25. ಹಣದೊಡತಿಯ ಕೃಪೆ (5)
26. ನೋಡುತ್ತಲೇ ಡವ ಡವ ಎನಿಸುವ ವಾನರ (3)
27. ನರಕಾಧಿಪತಿಯ ಜೋಡಿ (3)
28. ಬಳಗದವರು ಹಿಡಿದ ಬರೆಯುವ ಸಾಧನ (3)

**ಮೇಲಿನಿಂದ ಕೆಳಕ್ಕೆ**

1. ಕುಬೇರನ ಉದ್ಯಾನವನ (4)
2. ಗದ್ಯದಂತೆ ಇರುವ ಪದ್ಯ (5)
3. ಕಿವಿಗೆ ಇಂಪಾಗುವಂತಹ ಹಾಡು (5)
5. ಉದಾಹರಣೆಗೆ ಮೀನು (4)
7. ಇತ್ತೀಚೆಗಿನ ಸಾಹಿತ್ಯ ಪ್ರಾಕಾರ (3)
9. ಕುಟುಕುವ ರಾಶಿ (3)
10. ಜನರೇ ಸಾಮೂಹಿಕವಾಗಿ ಮಾಡುವ ದೇವರ ಧ್ಯಾನ (3)
12. ಮತ ಹಾಕಿ ವ್ಯಕ್ತ ಪಡಿಸುವ ಒಪ್ಪಿಗೆ (3)
14. ನವಿರಾಗಿ ಮಾಡಿಕೊಂಡ ಮನವಿ (3)
18. ಪರರ ಹಾಳೆಯಂತಹುದು (3)
19. ಸಂದರ್ಭಕ್ಕೆ ತಕ್ಕದಾದಂತಹ ವೇಳೆ (5)
20. ಕೊಳೆಯಿಂದ ಕೂಡಿದ ಸರೋವರ (5)
21. ಲೆಕ್ಕಾಚಾರ ಮಾಡುವ ಯಂತ್ರ (3)
22. ಸಾಕಮ್ಮ ಬೆಳೆಸಿದ ಪರಪುತ್ರ (4)
23. ಸಮುದ್ರದ ನಡುವಿನ ಈ ರಾಷ್ಟ್ರದ್ದೇ ಭಾಗ (4)

—ಮಲ್ಲಿಕಾ ಪ್ರಹ್ಲಾದ್

ತೆರೇಜಳ ಮನಸ್ಸಿನಲ್ಲಿ ಎಲ್ಲಿಲ್ಲದ ಉತ್ಸಾಹ. ಯಾರಿಗೂ ದೊರೆಯದಂಥ ಒಂದು ಅಪೂರ್ವ ಅವಕಾಶ ಅವಳ ಪಾಲಿಗೆ. ಅಂದು ಊರಲ್ಲಿ ಕಾಯಂ ತಂಗಲು ಪಾದ್ರಿ ಕ್ರಿಸ್ತಾನಂದರು ಬರುವವರಿದ್ದರು. ಅವರನ್ನು ಅವಳೋರ್ವಳೇ ಇದಿರುಗೊಳ್ಳುವ ಸಂತಸ.

ವರ್ಷಕ್ಕೊಂದಾವರ್ತಿ ಈಸ್ಟರ ಹಬ್ಬಕ್ಕೆಂದು ಬರುವ ಧಾರವಾಡದ ಪಾದ್ರಿಗೆ ಐಬಿಯ ಔಟ್ ಹೌಸಿನ ಡಿಸೋಜಾನ ಅಡುಗೆ ಮನೆಯಲ್ಲಿಯೇ ಗುರುಮಠವಾಗಿತ್ತು. ಪಾದ್ರಿ ಕ್ರಿಸ್ತಾನಂದ ಕೂಡ ಈಗ ಅಲ್ಲಿಯೇ ತಂಗಬೇಕು. ಡಿಸೋಜನ ಹೊರತುಪಡಿಸಿ ಪಾದ್ರಿಗಳ ಮೇಲ್ವಿಚಾರಕರು ಊರಲ್ಲಿ ಯಾರೂ ಇರಲಿಲ್ಲ.

ರಾತ್ರಿ ಬಹಳವಾಗಿರಲಿಲ್ಲ ಎಂಟೋ, ಎಂಟೂವರೆ. ಆದರೂ ಈ ದರಿದ್ರದ ಊರಿನಲ್ಲಿ ಬೇಗನೇ ಕತ್ತಲು ಕವಿದು ಬಿಡುತ್ತಿತ್ತು. ಕಾಗದ ಕಾರಖಾನೆಯ ಒಂದು ಭಾಗವನ್ನು ಬಿಟ್ಟರೆ ಉಳಿದೆಲ್ಲೆಡೆಯೂ ಮೇಲಿನಿಂದ ಅಕ್ಕಿಕಾಳು



ಬಿಟ್ಟರೂ ಅಷ್ಟು ನೆಲಮುಟ್ಟುವಷ್ಟು ದಟ್ಟ ಕಾಡು. ಒಬ್ಬರ ಮುಂದೊಬ್ಬರು ಹಾಯ್ದು ಕೊಂಡರೂ ಪರಸ್ಪರ ಮುಖ ಕಾಣದಷ್ಟು ದಟ್ಟ ಕತ್ತಲು. ಇವುಗಳ ನಡುವೆ ಕಾಡು ಕೋಣ, ಹುಲಿ ಮುಂತಾದವುಗಳ ಭಯ ಬೇರೆ. ಕಿರ್‌ಗುಡುವ ಕೀಟಗಳ ಪ್ರಾಣಿಗಳ ಹೂಂಕಾರ, ನಾಯಿಗಳ ಬೊಗಳಾಟ ಅಲ್ಲಲ್ಲಿ ಗಿಡಗಳ ಮೇಲೆ ತಮ್ಮ ಮುಕುಳಿಯಿಂದಲೇ ಬೆಳಗಾಗುತ್ತದೆಂದು ಸಾರುವ ಮಿಣ ಕು ಹುಳಗಳ ಝುಗ ಮಗಾಟ. ಬಿಟ್ಟರೆ ನಿಶ್ಶಬ್ದ ರಾತ್ರಿಯಲ್ಲಿ ಭೂತ-ಪಿಶಾಚಿ ಅಜ್ಜಿ ಕತೆಗಳ ನೆನಪು ಬಂದು ಮೈ "ಝುಂ" ಎಂದು ಬೆಚ್ಚಿ ಆ ಚಳಿಯಲ್ಲೂ ಚೀರುವ ಅನುಭವ. ಹೆದರಿಕೆ ಅನಿಸುತ್ತಿದ್ದರೂ ಹೊಸ ಪಾದ್ರಿಯನ್ನು ಇದಿರು ಗೊಳ್ಳುವ ಹುಮ್ಮಸ್ಸು ತುಂಬಿ ನಡೆದಿದ್ದಳು ತೆರೇಜ.

"ನಿಮ್ಮಪ್ಪ ಎಲ್ಲಿ? ಯಾಕೆ ಒಬ್ಬಳೇ ಬಂದಿದ್ದೀಯಾ?" ಝೋಪಡಿ ಚಹದಂಗಡಿ ಪಿಳ್ಳೆ ಕೇಳಿದ್ದಕ್ಕೆ

"ಇವೊತ್ತು ನಮ್ಮ ಹೊಸ ಫಾದರ್ ಬರ್ತಾರೆ. ಫಾದರ್ ಕ್ರಿಸ್ತಾನಂದ ತುಂಬ ಒಳ್ಳೆಯೋರಂತೆ" ಎಂದುತ್ತರಿಸುವಷ್ಟರಲ್ಲೇ ಬಸ್ಸು ನಿಂತ ಸ್ಥಳಕ್ಕೆ ಅವಳು ಗಡಬಡಿಸಿ, ತೆರೆದುಕೊಂಡ ಬಾಗಿಲತ್ತ ಧಾವಿಸಿದಳು. ಬಿಳಿಯ 'ಕ್ಯಾಸಕ' ಧಾರಿ ಪಾದ್ರಿಯನ್ನು ಆ ತೊಡುಗೆಯಿಂದಲೇ ಗುರುತಿಸಿದ ಅವಳು ಪಾದ್ರಿಯನ್ನು ಎವೆಯಿಕ್ಕದೆ ನೋಡತೊಡಗಿದಳು. ಸುಮಾರು ಇಪ್ಪತ್ತೊಂಬತ್ತರ ಹರೆಯ ಗಡ್ಡ ಮುಂಡ ಮೋಗಸ್ಸು, ಕೊಂಚ ಬಕ್ಕತಲೆಯ ಧರ್ಮಾತ್ಮ ಪಾದ್ರಿ ಕ್ರಿಸ್ತಾನಂದ ಪುಟ್ಟದೊಂದು ಹಂಸ ಹಾರಿ ಜಿಗಿದುಬಂದಂತೆ ಬಸ್ಸಿನಿಂದಿಳಿದಾಗ ಅವಳಿಗೆ ಭಾಸವಾಯಿತು. ಇಳಿದು ಬರುತ್ತಿದ್ದ ಪ್ರಯಾಣಿಕರ ನಡುವೆ ತೂರಿಕೊಂಡು ತೆರೇಜಳ "ಗುಡ್ ನೈಟ್ ಫಾದರ್" ದನಿ ಕ್ರಿಸ್ತಾನಂದರನ್ನು ಸ್ವಾಗತಿಸಿತು. ಧ್ವನಿ ಬಂದತ್ತ ಹಣಕಿದರು ಹದಿವಯದ ಪೋರಿ ಚಳಿಗೆ ನಡುಗುತ್ತ ಚಾದರ ಹೊದ್ದು ನಿಂತಿದ್ದಾಳೆ. "ಗುಡ್ ನೈಟ್ ಮಾಯ್ ಚೈಲ್ಡ್, ಡಿಸೋಜ ಎಲ್ಲಿ? ಬಂದಿಲ್ವಾ?" ಎಂದರು ಫಾದರ್.

"ನಾನು ಡಿಸೋಜರ ಮಗಳು ತೆರೇಜಾ. ನನ್ನನ್ನು ಮುದ್ದಿನಿಂದ ಎಲ್ಲರೂ 'ಡೇರೀ' ಎಂದೇ ಕರೆಯುತ್ತಾರೆ... ಎಲ್ಲಿ ಫಾದರ್ ಬ್ಯಾಗ್ ತನ್ನಿ"

"ಬೇಡ ಡೇರಿ-ಸಣ್ಣ ಬ್ಯಾಗು-ನಾನೇ ಹಿಡಿದು ಕೊಳ್ಳುತ್ತೇನೆ" ಎಂದು ನಡುಗುತ್ತಿದ್ದ ತೆರೇಜಳನ್ನು ತನ್ನ ಪಕ್ಕಕ್ಕೆ ಹಿಡಿದುಕೊಂಡು ಕತ್ತಲಲ್ಲಿ ನುಸುಳಿದರು. ಕಣ್ಣನ್ನು ಕಡಿದರೂ ಕಾಣದಂಥ ಕಗ್ಗತ್ತಲಲ್ಲಿ ಪಾದ್ರಿಯ ಬಿಳಿಯುಡುಪು ವಿಚಿತ್ರವಾಗಿ ಕಂಡ ನಾಯಿಗಳು ದಾರಿಯುದ್ದಕ್ಕೂ ಬೊಗಳತೊಡಗಿದವು. ಇಂದಿಗೂ ಆಗಾಗ ಸಮಾರಂಭಗಳಲ್ಲಿ ಪಾದ್ರಿ ತಮಾಷೆಯಾಗಿ ಹೇಳುತ್ತಾರೆ. ನಾನು ಮೊಟ್ಟಮೊದಲು ಪಾಂಡೇಲಿಗೆ ಬಂದಾಗ ನನ್ನನ್ನು ನಾಯಿಗಳೇ ಸ್ವಾಗತಿಸಿದ್ದವು ಎಂದು.

ಕ್ರಿಸ್ತಾನಂದರಿಗಾಗೇ ಮೀಸಲಾಗಿಟ್ಟ ಕೋಣೆಗೆ ಅವರನ್ನು ಕರೆದೊಯ್ದಳು ತೆರೇಜ. ಪಾದ್ರಿ 'ಕ್ಯಾಸಕ್'ನ್ನು ಕಳೆದು ಬಿಚ್ಚಲು ಮನೆಗೆ ಹೋಗಿ ಬರುವಷ್ಟರಲ್ಲಿ ಡಿಸೋಜ ಅಲ್ಲಿಗೆ ಹಾಜರಾಗಿದ್ದ.

"ಸಾರಿ ಫಾದರ್ ಇಂದು ಐ.ಬಿ.ಗೆ ಎಳೆಂಟು ಜನ ಆಫೀಸರ್ ಬಂದಿದ್ದರು. ಅಡಿಗೆ ಕೆಲಸ ತುಂಬಾ ಇತ್ತು, ಅದಕ್ಕೆ ಬಸ್ ಸ್ಟಾಪ್‌ಗೆ ಬಂದಿಲ್ಲ" ಎಂದ ಡಿಸೋಜಾ ವಂದಿಸುತ್ತಲೇ.

ಮುಂಜಾನೆ ಗಂಟೆ ಆರಾದರೂ ಇನ್ನೂ ರಾತ್ರಿಯ ವಾತಾವರಣವೇ. ಒಬ್ಬರೆದುರು ಒಬ್ಬರು ಬಂದು ಢಿಕ್ಕಿ ಹೊಡೆಯುವಷ್ಟಾದರೂ ಕಾಣದಷ್ಟು ದಟ್ಟ ಮಂಜು. ಡಿಸೋಜಾ ತಂದಿಟ್ಟ ಬ್ರೆಡ್ ಜ್ಯಾಮ್ ಕುದಿಸಿದ ತತ್ತಿ ಕೇರಳೀಯ ಮಾದರಿ ಬ್ಲಾಕ್ ಟೀ ಸವಿದು ಪಾದ್ರಿ ಕ್ರಿಸ್ತಾನಂದ ಚರ್ಚ್ ಕಡೆ ಹೊರಡಲನುವಾದರು.

ಕಾಡಿನ ಮಧ್ಯೆ ಬಿದಿರು ಮಣ್ಣು ಮೆತ್ತಿದ ಒಂದು ಗುಡಿಸಲು. ಸುತ್ತಲೂ ಬೆಳಕಿಗಾಗಿ

ನಾಲ್ಕಾರು ಕಿಂಡಿಗಳು. ಕಟ್ಟಿಗೆಯ ಬಾಗಿಲು ಅದೇ ಚರ್ಚ ಕಟ್ಟಡ. ಒಳಗೆ ಅಡಿ ಇಡುತ್ತಿದ್ದಂತೆ ಹೋಲಿಕ್ರಾಸ್ (ಶಿಲುಬೆ) ಇದಿರುಗೊಳ್ಳುತ್ತದೆ. ಒಂದು ಕ್ಷಣ ತಡೆದು ಪಾದ್ರಿ ತನ್ನ ಎಡಗೈಯಿಂದ ನಡುಹಣೆ, ಎದೆ, ವಕ್ಷಸ್ಥಲದ ಎರಡೂ ಕಡೆ ಮುಟ್ಟಿ ವಂದಿಸಿದರು. ಹೋಲಿಕ್ರಾಸ್‌ನ ಹಿಂಮುಗಡೆಯ ಗೋಡೆಯ ಮೇಲೆ ಏಸು ಕ್ರಿಸ್ತ ಹಾಗೂ ಸೈಂಟ್ ಮೇರಿಯ ತೈಲವರ್ಣದ ಚಿತ್ರ ಕಂಗೊಳಿಸುತ್ತಿತ್ತು. ಪಾದ್ರಿ ನೇರವಾಗಿ ಮುಂದುಗಡೆಯಿದ್ದ ವೇದಿಕೆಯ ಮೇಲೆ ಅಲ್ಲಿ ಸೇರಿದ ಜನರಿಗೆ ಮುಖಮಾಡಿ ನಿಂತು “ಮೊದಲು ಪಾಪ ನಿವೇದನೆ ಮಾಡಿ ನಂತರ ಪೂಜೆ, ಪ್ರಾರ್ಥನೆ ಮುಗಿಸಿ ಮುಂದಿನ ಕಲಾಪಗಳನ್ನು ಚರ್ಚಿಸೋಣ!” ಎಂದು “ಕನ್ಫೆಷನ್” ಕುರ್ಚಿಯಲ್ಲಿ ಕುಳಿತರು. ಬಲ ಪಕ್ಕದಲ್ಲಿ ಗಂಡಸರೂ ಎಡ ಪಕ್ಕದಲ್ಲಿ ಹೆಂಗಸರೂ ಬಂದು ತಮ್ಮ ಒಂದು ವರ್ಷದಲ್ಲಿ ಎಂದಾದರೂ ಮಾಡಿದ ಪಾಪಗಳನ್ನು ಪಾದ್ರಿಯ ಕಿವಿಯಲ್ಲುಸುರಿ ಕ್ಷಮೆ ಪಡೆದರು. ಪೂಜೆ ಆರಂಭಿಸುತ್ತಲೇ ಆನಂದ ತುಂದಿಲರಾದ ಜನ ಭಾವಾವೇಶದಿಂದ....-

“ಭಕ್ತಿ ಭಾವದಿಂದ ದೇವಾ ನಿನ್ನ ಭಜಿಸುವೆ.
ಮುಕ್ತಿ ಪಥದ ಜ್ಞಾನ ತೋರಿ ದಾರಿ ತೋರಿಸೋ.
ಜಪವನರಿಯೆ ತಪವನರಿಯೆ....”

ಹಾಡಿ ಮುಗಿಸುವಷ್ಟರಲ್ಲಿ ಕ್ರಿಸ್ತಾನಂದರು ಎರಡೂ ಕೈ ಎತ್ತಿ ಪ್ರಾರ್ಥಿಸಿದರು. “ಭಗವಂತಾ ನಿನ್ನ ಮಹಾ ಪ್ರೀತಿಯನ್ನು ಏಸುವಿನ ಮೂಲಕ ಜಗತ್ತಿಗೆ ತೋರಿಸಿದ್ದಿ. ನಾವೆಲ್ಲ ಅದೇ ಏಸುವಿನ ಆದರ್ಶ ಹಿಡಿದು ಪರಸ್ಪರ ಪ್ರೀತಿಸುವಂತೆಯೂ, ಕ್ಷಮಿಸುವಂತೆಯೂ ಅನುಗ್ರಹ ನೀಡು” ಎಂದರು. ನೆರೆದ ಭಕ್ತರೆಲ್ಲರೂ ಒಕ್ಕೊರಲಿನಿಂದ,

“ಆಮೆನ್” ಎಂದು ತಮ್ಮ ಸಮ್ಮತಿ ವ್ಯಕ್ತಪಡಿಸಿದರು. ಪೂಜೆ ಮುಂದುವರೆಯುತ್ತಿದ್ದಂತೆ ಒಬ್ಬೊಬ್ಬರಾಗಿ ಸುಮಾರು ಐವತ್ತಕ್ಕೂ ಮಿಕ್ಕಿ ಜನ ಸಮುದಾಯ ಅಲ್ಲಿ ನೆರೆದಿತ್ತು. ಪಾದ್ರಿ ಕ್ರಿಸ್ತಾನಂದ ಎಲ್ಲರನ್ನೂ ಒಮ್ಮೆ ಗಮನಿಸಿ ಆತ್ಮೀಯತೆಯಿಂದ ನಗುನಗುತ್ತಾ ‘ಪ್ರಸಂಗ’ ಹೇಳತೊಡಗಿದರು. ಸಮರ್ಪಣೆಯ ಸಮಯ ಬಂದೊಡನೆ “ತನುಮನರ್ಪಿಪೆ... ಮನವನರ್ಪಿಪೆ... ಧನವನರ್ಪಿಪೆ” ಎಂದು ಹಾಡುತ್ತ ಭಕ್ತರೆಲ್ಲ ತಾವು ತಂದ ಕಾಣಿಕೆಗಳನ್ನು ಎದುರಿನ ಟೇಬಲ್‌ಮೇಲಿಟ್ಟರು. ಅಂದಿನ ಪೂಜಾ ವಿಧಿ ಜನರ ಅಂತಃಕರಣವನ್ನೇ ಕಲಕಿತ್ತು. ಭಕ್ತರಲ್ಲಿ ಭಕ್ತಿ ಶ್ರದ್ಧೆಗಳ ಹೊಸ ಸಂಚಾರವಾದಂತಿತ್ತು. ರಾತ್ರಿ ಬಸ್ಸಿನಿಂದಿಳಿದಾಗ ಕ್ರಿಸ್ತಾನಂದರ ಕಿಸೆಯಲ್ಲಿದ್ದುದು ಕೇವಲ ಎರಡೇ ಎರಡು ರೂಪಾಯಿಗಳು. ಈಗ ಅಲ್ಲಿ ಸುಮಾರು ನೂರನಲ್ವತ್ತು ರೂಪಾಯಿಗಳು ಕೂಡಿದ್ದವು. ಬಂದು ರಜಿಸ್ಟರ್‌ನಲ್ಲಿ ಲೆಕ್ಕ ಬರೆದಿಟ್ಟು, ಇನ್ನು ಮುಂದಿನ ಕಲಾಪಗಳಿಗೆ ಚಿಂತಿಲ್ಲವೆಂಬಂತೆ ದೀರ್ಘ ನಿಟ್ಟುಸಿರು ಬಿಟ್ಟು, ಚರ್ಚಿನಿಂದ ಹೊರ ನಡೆದರು.

ವರ್ಷಕ್ಕೊಮ್ಮೆಯೂ ಚರ್ಚ್ ಕಾಣದವರ ಪಾಲಿಗೆ ಪಾದ್ರಿ ಕ್ರಿಸ್ತಾನಂದ ಹೊಸ ಬೆಳಕಾದರು. ಧರ್ಮ ಚ್ಯುತಿಯಾಗುತ್ತೇವೋ ಎಂದು ಪಾಪ ಪ್ರಜ್ಞೆಯಿಂದ ಬೇಯುತ್ತಿದ್ದ ಜನತೆಗೆ ಪಾಪ ವಿಮೋಚಕರಾದರು. ಕ್ರಿಸ್ತಾನಂದರ ಭಕ್ತಿ ಕಾರ್ಯಕ್ರಮಗಳಿಗೆ ಚಾಚೂ ತಪ್ಪದೆ ಜನ ಹಾಜರಾಗಲಾರಂಭಿಸಿದರು. ಉತ್ಸಾಹಿಯುವ ಪಾದ್ರಿ ಸೈಕಲ್ ಮೇಲೆ ಮನೆ ಮನೆ ಭೇಟಿ ಕೊಟ್ಟು, ಜನರ ಕಷ್ಟ ನಷ್ಟ ಸುಖ ದುಃಖಗಳೊಂದಿಗೆ ಸ್ಪಂದಿಸತೊಡಗಿದರು. ಅವರ ನಡೆ-ನುಡಿ, ನಯ-ವಿನಯ ಎಲ್ಲರನ್ನು ಆಕರ್ಷಿಸಿದವು. ಅಬಾಲ ವೃದ್ಧರೂ ಅವರ ಮಿತ್ರರಾದರು. ಅಸ್ವಸ್ಥರು, ಸಂತ್ರಸ್ತರು, ಅಂಗವಿಕಲರಿಗೆ ಅವರು ಬಂಧುಗಳಾದರು. ಮಾನವೀಯತೆಯೇ ಮಹಾನ್ ಧರ್ಮವೆಂದು ಕ್ರಿಸ್ತಾನಂದರು ಹಿಂದು, ಮುಸ್ಲೀಮ್, ಕ್ರೈಸ್ತರೆಂಬ ಭೇದವನ್ನು ತೊರೆದು ಎಲ್ಲರೊಂದಿಗೂ ಹೊಂದಿಕೊಂಡು ನಡೆದರು, ಸಂಕಷ್ಟದಲ್ಲಿ ಅವರೆಲ್ಲರಿಗೂ ನೆರವಾದರು.

ನೋಡ ನೋಡುತ್ತಿದ್ದಂತೆ ಎಲ್ಲಿಂದ ಹಣ ಬಂತು. ಹೇಗೆ ಕೆಲಸ ಮುಗಿಯಿತೆಂಬುದೆ ಅರಿವಾಗಲಿಲ್ಲ. ಕಾಡ ಮಧ್ಯದಲ್ಲೊಂದು ಬೆಳಕಿನ ಬೀಜದಂತೆ ಶುಭ್ರ ಬಿಳಿಯ ಚರ್ಚ್ ಕಟ್ಟಡ ತಲೆ ಎತ್ತಿತು. ಮೇಲ್ಗಡೆ ಕಲ್ಲಿನಿಂದ ಕೆತ್ತನೆಯ ಅಕ್ಷರ “ಲವ್ ವನ್ ಆನದರ್” ವರುಷಗಳು ಕೇವಲ ಗಂಟೆಗಳೋಪಾದಿಯಲ್ಲಿ ಗತಿಸಿದಂತೆ ಭಾಸ. ಸಮಾಜದ ಸಕಲ ವರ್ಗೀಯರ ಸಹಾಯ ...ಸಹಕಾರ... ಮಾರ್ಗದರ್ಶನ ಹಣದ ಹೊಳೆಯೇ ಹರಿಯಿತು. “ಸೈಂಟ್ ಆ್ಯಂಟನಿಸ್ ಸ್ಕೂಲ್” ನಗರ ಮಧ್ಯದಲ್ಲಿ ಕಂಗೊಳಿಸಿತು. ಕಾಡನ್ನು ನಾಡಾಗಿಸುವ ಪ್ರಥಮ ಕೈಂಕರ್ಯವಿದು. ಶಿಕ್ಷಕಿಯರಾಗಿ ನನ್ಸ್‌ಗಳು, ಅವಿರತ ದುಡಿಯುವ ಕ್ರಿಸ್ತಾನಂದರಿಗೆ ಪ್ರೀತಿ ವಿಶ್ವಾಸ ಸತ್ಕಾರ ತೋರುವವರೆಂದರೆ ಡಿಸೋಜಾರ ಕುಟುಂಬವೊಂದೆ. ತೆರೇಜಳ ಮೆಚ್ಚುಗೆಯ ನುಡಿ ಇವರ ಪ್ರತಿ ಯಶಸ್ಸಿನ ಹಿಂದೆಯೂ ಪ್ರೇರಕ ಶಕ್ತಿಯಾಗಿತ್ತು.

ಈ ಹುರುಪಿನ ಜನಗಳ ಮಧ್ಯೆ ಪಾದ್ರಿ ಕ್ರಿಸ್ತಾನಂದ ಇಡಿಯ ನಗರದಲ್ಲೇ ತಮ್ಮದೊಂದು ಪ್ರತಿಷ್ಠಿತ ಸ್ಥಾನವನ್ನು ಗಿಟ್ಟಿಸಿಕೊಂಡರು. ಅವರ ಬಗೆ ನಾನಾ ಕಥೆಗಳು ಹುಟ್ಟಿಕೊಂಡವು. ಪಾದ್ರಿ ಕ್ರಿಸ್ತಾನಂದರ ಕೈಯಲ್ಲಿ ಓಡಾಡುತ್ತಿರುವ ಹಣ, ಪ್ರತಿಷ್ಠೆ ಇವೆಲ್ಲವುಗಳನ್ನು ಸ್ವಜನಗಳೇ ಕಂಡು ಕರುಬಿದರು. ಪಾದ್ರಿ ಹಾಗೂ ಮಾದ್ರಿಯರ ದೈನಂದಿನ ಸಲುಗೆಯ ಮುಕ್ತ ವ್ಯವಹಾರಗಳನ್ನು ನೋಡಿದ ಜನ ಇವರೀರ್ವರ ನಡುವೆ ನಾನಾ ಸಂಬಂಧಗಳ ಕಲ್ಪನೆ ಕಟ್ಟಿಯಾಡಿದರು.

ಪಾದ್ರಿ ಕ್ರಿಸ್ತಾನಂದರಿಗೆ ಬಿಷಪ್‌ರ ಪತ್ರ, ಓದಿದಾಕ್ಷಣ ಸಿಡಿಲೆರಗಿದಂತಾಯಿತು. ದಾಂಡೇಲಿಯಿಂದ ಅವರಿಗೆ ಧಾರವಾಡ ಚರ್ಚಿಗೆ ವರ್ಗಾಯಿಸಿಬಿಟ್ಟಿದ್ದಾರೆ. ಸುದ್ದಿ ಶರವೇಗದಲ್ಲಿ ಎಲ್ಲೆಡೆ ಪಸರಿಸಿತು. ಸಮಾಜಬಾಂಧವರು, ಅಭಿಮಾನಿಗಳು ಬಂದು ಚರ್ಚ್ ಇದಿರು ಸೇರಿಕೊಂಡರು. ಬಿಷಪ್‌ರಿಗೆ ನೂರಾರು ಜನಗಳ ಸಹಿ ಹಾಕಿದ ಮನವಿಯೊಂದನ್ನು ಕಳುಹಿಸಲಾಯಿತು. ಪಾದ್ರಿ ಕ್ರಿಸ್ತಾನಂದರನ್ನು ವರ್ಗಾಯಿಸಿದರೆ ತಾವು ಮುಷ್ಕರ ಹೂಡುವುದಾಗಿ ಬೆದರಿಕೆ ಹಾಕಿದರು. ಪರಿಸ್ಥಿತಿಯನ್ನು ಅಭ್ಯಸಿಸಲು ಬಂದ ಬಿಷಪ್‌ರ ಕಾರನ್ನು ಜನ ಮುತ್ತಿ ರೊಚ್ಚಿನಲ್ಲಿ ನೆಗೆದು ನೆಲಕ್ಕೂ ಅಪ್ಪಳಿಸಿದರು. “ಪಾದ್ರಿ ಕ್ರಿಸ್ತಾನಂದ ನಮಗೆ ಬೇಕು, ಅವರನ್ನು ವರ್ಗ ಮಾಡಬಾರದು” “ಬಿಷಪ್ ರೆಬೆಲೊ ಮುರ್ದಾಬಾದ್” ಕಿವಿಗಡಚಿಕ್ಕುವಂತೆ ಘೋಷಣೆಯನ್ನು ಕೂಗಿದರು. ಕಾರು ಮುಂದೆ ಹೋಗದಂತೆ ಡಿಸೋಜಾ ಕಾರಿಗೆ ಅಡ್ಡವಾಗಿ ರಸ್ತೆಯಲ್ಲಿ ಮಲಗಿಕೊಂಡ. ಬಿಷಪ್ ರೆಬೆಲೊ ಸುಸ್ತಾಗಿಬಿಟ್ಟರು. ಪಾದ್ರಿ ಕ್ರಿಸ್ತಾನಂದರೇ ಮುಂದೆ ಬಂದು ನೆರೆದಿದ್ದ ಜನಸಮುದಾಯಕ್ಕೆ ಎರಡೂ ಕೈಗಳಿಂದ ವಂದಿಸಿ, “ಮಹಾಜನಗಳೇ ಅಭಿಮಾನಿಗಳೇ, ನೀವು ನನ್ನ ಮೇಲಿಟ್ಟಿರುವ ಪ್ರೀತ್ಯಾದರ ವಿಶ್ವಾಸಗಳಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಈಗ ಸದ್ಯ ಬಿಷಪ್‌ರನ್ನು ಮುಂದೆ ಹೋಗಲು ಅವಕಾಶ ಮಾಡಿಕೊಡಿ. ಅವರಿಗೆ ವಿಚಾರಿಸಲು ಸಮಯ ನೀಡಿ. ಅವರು ನಮ್ಮಗಳೆಲ್ಲರಿಗೂ ಹಿತವಾಗುವಂತೆ ನಿರ್ಣಯ ತೆಗೆದುಕೊಳ್ಳುತ್ತಾರೆ” ಎಂದು ವಿನಂತಿಸಿದರು. ಜನ ಜಂಗುಳಿ ಸರಿದು ಕಾರು ಮುಂದೆ ಹೋಗಲು ಅನುವು ಮಾಡಿಕೊಟ್ಟಿತು.

### ಐನ್‌ಸ್ಟೀನ್ ಮತ್ತು ಕಂಡಕ್ಟರ್

*ವಿಶ್ವವಿಖ್ಯಾತ ವಿಜ್ಞಾನಿ ಐನ್‌ಸ್ಟೀನ್ ಮೌನಪ್ರಿಯ ವ್ಯಕ್ತಿ. ಯಾವುದೇ ರೀತಿಯ ವಿವಾದಗಳನ್ನು ಬೆಳೆಸಿಕೊಂಡು ಹೋಗುವ ಪರಿಪಾಠವಿಲ್ಲದ ಹಿರಿತನದ ಗಣಿತಜ್ಞ. ಒಂದು ದಿನ ಅವರು ಬರ್ಲಿನ್ ನಗರದಲ್ಲಿ ಟ್ರಾಂ ಒಂದರಲ್ಲಿ ಪ್ರಯಾಣ ಮಾಡುತ್ತಿದ್ದಾಗ ಕಂಡಕ್ಟರ್ ಚಿಲ್ಲರೆ ಕಡಿಮೆ ನೀಡಿದ್ದು ಅವರ ಗಮನಕ್ಕೆ ಬಂದಿತು. ಸಂದೇಹ ಬಂದು ಮತ್ತೊಮ್ಮೆ ಎಣಿಸಿ ನೋಡಿದರು. ಕಂಡಕ್ಟರ್ ಕಡಿಮೆ ಕೊಟ್ಟ ಬಗ್ಗೆ ಅನುಮಾನವೇ ಇರಲಿಲ್ಲ. ಆ ಕುರಿತು ಕಂಡಕ್ಟರ್‌ನಲ್ಲಿ ಹೇಳಿದರು. ಕಂಡಕ್ಟರ್ ಕಡಿಮೆ ಹಣ ಕೊಟ್ಟು ಒಪ್ಪುವುದುಂಟೆ! “ನೀವು ಗಣಿತವನ್ನೇ ಕಲಿತಿರಲಿಕ್ಕಿಲ್ಲ. ನಿಮಗೆ ಲೆಕ್ಕ ಮಾಡಲು ಬರುವಂತೆ ತೋರುವುದೂ ಇಲ್ಲ” ಎಂದು ಗದರಿದ. ಮಹಾ ಗಣಿತಜ್ಞ ಐನ್‌ಸ್ಟೀನ್ ಮರು ಮಾತಾಡದೆ ಗಪ್‌ಚುಪ್ ಆದರು.*

ಈ ಘಟನೆಯಿಂದ ಅವಮಾನಿತನಾದ ಬಿಷಪ್ ಇದು ಕ್ರಿಸ್ತಾನಂದರ ನಾಟಕ ಎಂದು ಕೊಂಡರು. ಅಧಿಕಾರ, ಸಂಪತ್ತು ಎಲ್ಲವೂ ಇರುವ ಬಿಷಪ್‌ರ ಮುಂದೆ ಪಾದ್ರಿ ಕ್ರಿಸ್ತಾನಂದ ಹುಲು ಸಮಾನ. ತೆರೇಜ. ರೋಜಿನಾ ಹಾಗೂ ಇನ್ನಿತರ ಪರಧರ್ಮಿಯರ ಕಷ್ಟಕಾಲಕ್ಕೆ ಪಾದ್ರಿ ಕ್ರಿಸ್ತಾನಂದ ನೆರವಾದುದನ್ನು ಸಹಿಸದ ಕೆಲ ನನ್‌ಗಳು ಸಹಜವಾಗಿಯೇ ಬಿಷಪ್‌ರ ಪರವಾದರು. ಬಿಷಪ್‌ರು ಕ್ರಿಸ್ತಾನಂದರು ಕಟ್ಟಿಸಿದ ಕಟ್ಟಡಗಳನ್ನೆಲ್ಲಾ ನನ್‌ಗಳು ನಡೆಸುತ್ತಿರುವ ಸಂಸ್ಥೆಗಳಿಗೆ ಕಾಣಿಕೆಯಾಗಿ ಕೊಡುವುದಾಗಿಯೂ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಂಡರು. ರೆಬೆಲೊ ಕೈಯಲ್ಲೀಗ ಕ್ರಿಸ್ತಾನಂದರ ವಿರುದ್ಧ ಖೊಟ್ಟಿ ದೂರುಗಳ ಫೈಲು ರೆಡಿಯಾಯಿತು. ಬಾಡಿಗೆ ಜನಗಳು ಕ್ರಿಸ್ತಾನಂದರ ವಿರುದ್ಧ ಪ್ರಚಾರಕ್ಕಿಳಿದರು. ತೆರೇಜಾ ಮತ್ತು ಕ್ರಿಸ್ತಾನಂದರ ನಡುವಿನ ಅನೈತಿಕ ಸಂಬಂಧವೇ ಸಾಮ್ಯುಯೇಲ್ ತೆರೇಜಾರ ವೈವಾಹಿಕ ಸಂಬಂಧ ಕೆಡಲು ಕಾರಣವೆಂಬಷ್ಟರ ಮಟ್ಟಿಗೆ ಪ್ರಚಾರದ ಕಾವೇರಿತು.

ಪಾದ್ರಿ ಕ್ರಿಸ್ತಾನಂದ ಬಿಷಪ್ ರೆಬೆಲೋ ಈರ್ವರೇ ಚರ್ಚ್ ಕೊಠಡಿಯಲ್ಲಿ. ತಾಸು ಗಟ್ಟಲೆ ಇಬ್ಬರಲ್ಲೂ ಮೌನ.

''ಮೈಲಾರ್ಡ್ ನನ್ನನ್ನು ವರ್ಗಮಾಡಬೇಡಿ. ನಾನು ಇಲ್ಲೇ ಇರುತ್ತೇನೆ. ಈ ಕಾರ್ಯಕ್ಷೇತ್ರದಲ್ಲೇ ಅಸುನೀಗುವ ಭಾಗ್ಯ ಕಲ್ಪಿಸಿ'' ಕ್ರಿಸ್ತಾನಂದರ ಮಾತು ಈರ್ವರ ನಡುವಿನ ಮೌನ ಭೇದಿಸಿತ್ತು.

''ಅದು ಸಾಧ್ಯವಿಲ್ಲಾ ನೀವು ಇಲ್ಲೇ ಇರುವುದಾದಲ್ಲಿ ಇಂದಿನವರೆಗಿನ ಚರ್ಚ್‌ಕಲೆಕ್ಷನ್ ನಿಮ್ಮ ಸಂಬಳದ ಎಲ್ಲಾ ಲೆಕ್ಕ ನನಗೊಪ್ಪಿಸಿ. ಪ್ರತಿ ತಿಂಗಳು ನಿಮ್ಮ ಮುಖ್ಯಾಧ್ಯಾಪಕ ವೃತ್ತಿಯಿಂದ ಬರುವ ಸಂಬಳ ನನಗೆ ಕಳುಹಿಸಿಕೊಡಬೇಕು. ಚರ್ಚ್ ಕಲೆಕ್ಷನ್ ಹಾಗೂ ನಾನು ಕಳುಹಿಸಿಕೊಡುವ ಹಣದಲ್ಲೇ ನಿಮ್ಮ ಖರ್ಚನ್ನು ನಿಭಾಯಿಸಿ. ಇದು ನನ್ನ ಆದೇಶ'' ಎಂದು ಬಿಷಪ್ ಸಿಡುಕಿದರು.

''ಅದ್ಯಾಕೆ? ನನ್ನ ಸಂಬಳ! ಅದು ನನ್ನ ಸ್ವಪ್ರಯತ್ನ. ಅದನ್ನು ಕೇಳುವವರು ನಿವ್ಯಾರು ಮೈ ಲಾರ್ಡ್ ? ಉಳಿದ ಲೆಕ್ಕಾಚಾರ ನಾನು ಯಾವಾಗಲೂ ಕೊಡಲು ಸಿದ್ಧ. ಚರ್ಚ್ ಕಲೆಕ್ಷನ್ ಜನರ ಕೈಯಲ್ಲಿದೆ. ಅದನ್ನು ಸಮಾಜ ಕಾರ್ಯಕಲಾಪಗಳಿಗೆ ಅವರು ತಾವೆ ಉಪಯೋಗಿಸಿದ್ದಾರೆ''

''ಅಧಿಕ ಪ್ರಸಂಗಿ ಮಾತಾಡುತಿದ್ದಿ ಕ್ರಿಸ್ತಾನಂದ. ನಿಮ್ಮ ಜವಾಬ್ದಾರಿಯನ್ನರಿತು, ಮಾತನಾಡಿ. ಚರ್ಚ್ ಹಾಗೂ ಸಮಾಜದ ಧರ್ಮಗುರುಗಳಾಗಿದ್ದ ನಿಮ್ಮ ಸ್ವಂತದ್ದು ಸ್ವಾರ್ಥ ಏನೂ ಇರುವದಿಲ್ಲ. ನಿಮ್ಮ ಗಳಿಕೆ ಏನಿದೆಯೋ ಅದು ಸಂಸ್ಥೆಗೆ ಸೇರಬೇಕು. ನನ್ನ ಆದೇಶದಂತೆ ನಡೆದುಕೊಳ್ಳಬೇಕು. ಸಂಬಳದ ಅಷ್ಟೆಲ್ಲ ಹಣ ನಿಮಗೇಕೆ''

''ನನಗೆ ನನ್ನದೇ ಆದ ಕೆಲವು ವೈಯಕ್ತಿಕ ಜವಾಬ್ದಾರಿಗಳು, ಕರ್ತವ್ಯಗಳಿವೆ ಮೈ ಲಾರ್ಡ್''

''ಅದೇನು? ನನ್ನಿಂದ ಮುಚ್ಚಿಡುವಂಥ ನಿಮ್ಮ ಕರ್ತವ್ಯಗಳಾವವು?'.

* * * *

ಪಾದ್ರಿ ಕ್ರಿಸ್ತಾನಂದರ ನೆನಪು ಹದಿನೇಳು ಹದಿನೆಂಟು ವರುಷಗಳಾಚೆ ಸರಿಯಿತು. ಒಂದು ರವಿವಾರ ಮುಂಜಾನೆ ಪ್ರಾರ್ಥನೆಗೂ ಮುನ್ನ ಪಾದ್ರಿ ಕ್ರಿಸ್ತಾನಂದ ಕನ್ಫೆಷನ್ ಚೇರ್‌ನಲ್ಲಿ ಕುಳಿತಿದ್ದರು. ಡಿಸೋಜಾನ ಮಗಳು ತೆರೇಜಾ ಒಳಗೆ ಬಂದು ಅವರಿದಿರು ತಲೆ ತಗ್ಗಿಸಿ ನಿಂತುಕೊಂಡಳು.

''ಡೇರೀ ಏನು ಏನಾಗಿದೆ''

ಐದು... ಐತ್ತು... ಹದಿನೈದು ನಿಮಿಷಗಳು ಕಳೆದವು. ಅವಳ ಬಾಯಿಂದ ಮಾತೇ ಹೊರಡಲಿಲ್ಲ.

''ಕಮಾನ್ ಮೈ ಚೈಲ್ಡ್, ವಾಟ್ಸದ ಪ್ರಾಬ್ಲಮ್''

ಅವಳ ಕಣ್ಣುಗಳೆರಡೂ ಹನಿಗೂಡಿವೆ. ಹದಿನೇಳರ ತೆರೇಜಾಳಿಗೆ ಯಾವ ಆಪತ್ತು ಒದಗಿರಲು ಸಾಕು.

''ನನ್ನನು ಮ್ಯಾನುವೆಲ್'' ಎಂದು ಬಿಕ್ಕಿ ಬಿಕ್ಕಿ ಅತ್ತಳು.

''ತಪ್ಪಿಗೆ ಪ್ರಾಯಶ್ಚಿತ್ತವೇ ಶಿಕ್ಷೆ ಮೈ ಚೈಲ್ಡ್ ಭಗವಂತ ಏಸುವಿನ ಪರವಾಗಿ ನಾನು ನಿನ್ನನ್ನು ಕ್ಷಮಿಸುವೆ. ಮಮ್ಮಿಗೆ ಈ ವಿಷಯ ಗೊತ್ತಾ''

ಇಲ್ಲವೆಂಬಂತೆ ತಲೆದೂಗಿದಳು ತೆರೇಜಾ.

''ಹಾಗಾದರೆ ನಿಮ್ಮ ಮಮ್ಮಿ ಡ್ಯಾಡಿಯನ್ನು ಕಳುಹಿಸಿಕೊಡು. ಎಲ್ಲವೂ ಸರಿಹೋಗುತ್ತದೆ ದುಃಖಿಸಬೇಡ'' ಎಂದು ಸಂತೈಸಿ ಕಳುಹಿಸಿಕೊಟ್ಟರು.

ಮುಂದೆ ತೆರೇಜಳೊಂದಿಗೆ ಮ್ಯಾನುವೆಲ್ ಮದುವೆ ಮಾಡಿ ಆಶೀರ್ವದಿಸಿದರು. ಮುಂದೆ ಆರೇ ತಿಂಗಳಲ್ಲಿ ತೆರೇಜಾ ಗಂಡುಮಗುವಿನ ತಾಯಿಯಾದಳು. ಒಂದೆರಡು ವರ್ಷ ಸಂಸಾರ ಅನ್ಯೋನ್ಯವಾಗಿಯೇ ನಡೆಯಿತು. ಮ್ಯಾನುವೆಲ್‌ಗೆ ಈ ಮದುವೆಗೂ ಪೂರ್ವ ಇನ್ನೊರ್ವ ಪತ್ನಿ ಇರುವ ವಿಷಯ ತೆರೇಜಾಳಿಗೆ ತಿಳಿದಾಗ ಅವಳ ತಲೆಯ ಮೇಲೆ ಗಗನವೇ ಕಳಚಿ ಬಿದ್ದಂತಾಗುತ್ತದೆ. ತಾನೇ ಮುಂದುವರಿದು ಆಶೀರ್ವದಿಸಿ ತೇರೆಜಳ ಬಾಳು ಗೋಳಿನಲ್ಲಿ ಟ್ಟಂತಾಯಿತಲ್ಲಾ ಎಂದು ಪಾದ್ರಿ ಕ್ರಿಸ್ತಾನಂದರಿಗೆ ಅವಳ ಜೀವನದ ಬಗೆಗೆ ಮರುಕ ಹುಟ್ಟಿತು. ಏನೇ ಬರಲಿ ಆಕೆಯ ಜೀವನವನ್ನು ಸಂತೋಷದಾಯಕವಾಗಿಸುವ ನಿರ್ಧಾರ ಕೈಕೊಂಡರು. ಮನೆತನದ ಕ್ಷುಲ್ಲಕ ಜಗಳಗಳಿಗೂ ತೇರೆಜಾ ಪಾದ್ರಿಯ ಹತ್ತಿರ ಹೇಳುತ್ತಿದ್ದಳು. ಪಾದ್ರಿ ಮಧ್ಯ ಪ್ರವೇಶಿಸಿ ತೇರೆಜಳ ಪರವಹಿಸಿ ಮ್ಯಾನುವೆಲ್‌ಗೆ ಉಪದೇಶ ನೀಡುವುದಕ್ಕೂ ಮುಂದಾದರು. ಬಾರಿ ಬಾರಿ ತಮ್ಮಿರ್ವರ ಜಗಳ ಮಧ್ಯೆ ಪಾದ್ರಿಯ ಮಧ್ಯಸ್ಥಿಕೆ ಮ್ಯಾನುವೆಲ್‌ಗೆ ಸಹಿಸಲಾಗಲಿಲ್ಲ.

ತೆರೇಜಾ ಪಾದ್ರಿಯ ಮನೆಗೆ ಹೋಗುವುದು ಪಾದ್ರಿ ಅವಳಿಗೆ ಮಾಡುವ ಸಹಾಯ ಹಬ್ಬ ಹರಿದಿನಗಳಲ್ಲಿ ಮಕ್ಕಳಿಗೆ ಕೊಡುವ ಬಟ್ಟೆಬರೆ ನೋಡುವ ಜನತೆಗೆ ಪ್ರದರ್ಶನವಾದರೆ ಮ್ಯಾನುವೆಲ್ ಮನದಲ್ಲಿ ಸಂಶಯ ಹೊಗೆಯಾಡಲಾರಂಭಿಸಿತು. ಮ್ಯಾನುವೆಲ್ ದಿನವೂ ಕುಡಿಯಲಾರಂಭಿಸಿದ. ಕುಡಿದು ತೆರೇಜಳಿಗೆ ಹೊಡೆಯುವುದು, ಮನೆಯಲ್ಲಿ



ದಿನಸು ಇಲ್ಲದೇ ಮಕ್ಕಳ ಜತೆ ಉಪವಾಸ ಬಿದ್ದು ಅವಳಿಗೆ ಜೀವನವೆ ರೋಸಿ ಹೋಗಿ ಬಿಟ್ಟಿತು ಬೇರೆಯವರ ಮನೆಗೆಲಸಮಾಡಿ, ಕೂಲಿಯಾದರೂ ಸರಿ ಗಂಜಿ ಕುಡಿದು ಬಾಳುವುದೇ ಮೇಲೆಂದೆನಿಸಿ ಬಿಟ್ಟಿತವಳಿಗೆ. ತೆರೇಜಾ ನಾಲ್ಕು ಮಕ್ಕಳ ಜತೆ ಒಂದು ಬಾಡಿಗೆ ಝೋಪಡಿಯಲ್ಲಿ ವಾಸಿಸಲಾರಂಭಿಸಿದಳು.

ಯಾಕೆ? ನಾವು ಬಿಷಪ್‌ರ ಕೈಗೊಂಬೆಗಳಾ? ಬಿಷಪ್‌ರ ಸರ್ವಾಧಿಕಾರದಡಿಯಲ್ಲಿ ಮೂಕ ಪಶುಗಳಂತೆ ಬದುಕಬೇಕಾ? ನಮ್ಮ ತತ್ವ, ವೈಯುಕ್ತಿಕತೆ ಮಾನವೀಯ ಮೌಲ್ಯಗಳಿಗೆ ಬೆಲೆ ಇಲ್ಲವೆ? ನಿರ್ದಯಿ ಕಟುಕ ಬಿಷಪ್ ಕೇವಲ ನನ್ನೊಂದಿಗೆ ಪ್ರೀತಿಯಿಂದ ಸಲುಗೆಯಿಂದಿದ್ದಾರೆಂಬ ಮಾತ್ರಕ್ಕೆ ನನ್ನ ಸ್ಥಳದಲ್ಲಿದ್ದ ಹೊಸ ಪಾದ್ರಿ ಜಾರ್ಜರನ್ನು ಇಲ್ಲಿಂದ ವರ್ಗಾಯಿಸಿದ್ದರಲ್ಲಿ ಯಾವ ನ್ಯಾಯ? ಜಾರ್ಜರ ಅಭಿಮಾನಿಗಳು ಅವರನ್ನು ವರ್ಗಾಯಿಸಬಾರದೆಂದು ನಮ್ಮ ಶಾಲೆಯಲ್ಲಿ ಸಭೆ ಸೇರಿದ್ದಷ್ಟೆ ನೆವ. ಆ ಬಗ್ಗೆ ವಿವರಣೆ ನೀಡುವಂತೆ ಶಾಲಾ ಆಡಳಿತ ಮಂಡಳಿಯಿಂದ ನನಗೆ ಮೆಮೊ. ಮಕ್ಕಳಿಂದ ದೇಣಿಗೆ ತೆಗೆದುಕೊಂಡ ಬಗ್ಗೆ ಲೆಕ್ಕವಿಟ್ಟಿಲ್ಲ. ಶಾಲಾಹಣದ ದುರ್ವಿನಿಯೋಗ, ಕ್ರಿಶ್ಚಿಯನ್ ಸಂಸ್ಥೆಯ ಧ್ಯೇಯೋದ್ದೇಶಗಳ ವಿರುದ್ಧ ಶಾಲೆಯಲ್ಲಿ ಗಣಪತಿ, ರಮಜಾನ್ ಹಬ್ಬ ಆಚರಿಸಿದ್ದು ಹೀಗೆ ಅಲ್ಲಸಲ್ಲದ ಆರೋಪ ಹೊರಿಸಿ ನನ್ನನ್ನು ಮುಖ್ಯಾಧ್ಯಾಪಕರ ವೃತ್ತಿಯಿಂದ ತೆಗೆದು ಹಾಕಿದರು. ಈ ಎಲ್ಲ ಕಿತಾಪತಿಗಳ ಹಿಂದೆ ಬಿಷಪ್‌ರ ಕೈವಾಡವಿದೆಯೆಂದು ನನಗೆ ಗೊತ್ತೇ ಇತ್ತು! ಯಾವುದು ಕ್ರಿಶ್ಚಿಯನ್ ಸಂಸ್ಥೆಯ ಧ್ಯೇಯೋದ್ದೇಶ? ಇತರರ ಧರ್ಮಗಳನ್ನು ಅಗೌರವದಿಂದ ನೋಡುವುದೇ? ಕ್ರಿಶ್ಚಿಯನ್ ಶಾಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕ್ರಿಶ್ಚಿಯನೇತರ ಹುಡುಗರೇ ಇದ್ದಾರೆ. ಅವರಿಂದ ದೇಣಿಗೆ, ಸಹಾಯ ಸಹಕಾರ ಪಡೆದು ಅವರ ಮಧ್ಯದಲ್ಲಿ ಬಾಳುವ ನಾವು ಅವರ ಧರ್ಮ, ಸಂಸ್ಕೃತಿ ಸಂಪ್ರದಾಯಗಳನ್ನು ಗೌರವಿಸಿ, ಅವರ ಸಂತಸದಲ್ಲಿ ಭಾಗಿಯಾಗುವುದು ತಪ್ಪೆ? ಇದು ಕ್ರಿಶ್ಚಿಯನ್ ಧರ್ಮ ತತ್ವದ ವಿರುದ್ಧವೇ? ಕ್ರಿಶ್ಚಿಯನ್ ಧರ್ಮ ಮೂಲ ಭೂತ ತತ್ವಗಳೇನು? ಈ ಜಗತ್ತಿನಲ್ಲಿ ಯಾವ ಮಹಾಪುರುಷನೇ ಆಗಲಿ ಆತನನ್ನು ಸಮಾಜ ತಪ್ಪು ಅರ್ಥ ಮಾಡಿಕೊಂಡಿದ್ದೇ. ಬೆರಿನ್ನೇಕೆ? ಏಸು ಕ್ರಿಸ್ತನನ್ನು ಸಮಾಜ ಅಪಾರ್ಥ ಮಾಡಿಕೊಳ್ಳಲಿಲ್ಲವೇ? ಇಂಥ ಯುಗ ಪುರುಷರನ್ನೇ ಜನ ಸಮಾಜ ಅಪಾರ್ಥ ಮಾಡಿಕೊಂಡಿರುವಾಗ ನನ್ನಂತಹ ಹುಲು ಮಾನವನದೇನು?' ಎಂದು ಕ್ರಿಸ್ತನಂದ ತಮ್ಮಷ್ಟಕ್ಕೆ ಸಮಾಧಾನ ಹೊಂದುತ್ತಾರೆ.

ಬಿಷಪ್‌ರಿಂದ ದಮನಕ್ಕೊಳಗಾಗಿ ಕಂಗೆಟ್ಟು ಆತ್ಮಹತ್ಯೆ ಮಾಡಿಕೊಂಡ ಪೂನಾದ ಫಾದರ ಮಲ್ಯಾ ಮಾದ್ರಿಯೋರ್ವಳು ಯಾಚಿಸಿದ ಪ್ರಣಯವನ್ನು ನಿರಾಕರಿಸಿ ಬಿಷಪ್‌ರಿಂದ ಹಾಗೂ ಸಮಾಜದಿಂದ ಸಂಪೂರ್ಣ ಅಪಾರ್ಥಕ್ಕೊಳಪಟ್ಟು ಮಾನಸಿಕ ಸಮತೋಲನವನ್ನು ಕಳಕೊಂಡು ಆತ್ಮಹತ್ಯೆ ಮಾಡಿಕೊಂಡ ಅಲಹಾಬಾದಿನ ಫಾದರ್ ರೋನಾಲ್ಡ, ಫಾದರ್ ಡಿಕೋಸ್ತಾ, ಡಿಕುನಾ ಹಾಗೂ ಪಾದ್ರಿ ಜೀವನದಲ್ಲಿ ತಮ್ಮ ಧ್ಯೇಯೋದ್ದೇಶ ವಿಚಾರಗಳಿಗೆ ಆಸ್ಪದವೀಯದ ಬಿಷಪ್‌ರಿಂದ ರೋಸಿ ಪಾದ್ರಿ ಜೀವನವನ್ನು ತ್ಯಜಿಸಿ ತಮ್ಮ ಮೂಲ ಧ್ಯೇಯೋದ್ದೇಶಗಳನ್ನು ಬಿಡದೆ ಸಮಾಜ ಸೇವೆ ಗೈದ ಫಾದರ ಫೆರ್ರ್, ಪಿಂಟೊ, ರಾಡ್ರಿಗಸ್ ಒಬ್ಬೊಬ್ಬರಾಗಿ ಪಾದ್ರಿ ಕ್ರಿಸ್ತಾನಂದರ ಕಣ್ಣೆದುರು ಚಿತ್ರದಂತೆ ಹಾಯತೊಡಗಿದರು.

ಅನಾಥರಿಗೆ ದೀನದಲಿತರಿಗೆ ನೆರವಾಗಿ ಮಾನವೀಯತೆಯನ್ನು ತೋರಬೇಕೋ? ಮಾನವೀಯ ಮೌಲ್ಯ ಸ್ವಂತಿಕೆ, ವಿಚಾರಗಳನ್ನು ಗಾಳಿಗೆ ತೂರಿ ನಿರ್ದಯಿ ಕಟುಕ ಬಿಷಪ್‌ರ ಅಡಿಯಲ್ಲಿ ಜೀತದಾಳಾಗಿ ದುಡಿಯಬೇಕೋ ತಕ್ಕಡಿಯ ತಟ್ಟೆಗಳೆರಡೂ ಮೇಲೆ ಕೆಳಗೆ ಹೊಯ್ದಾಡುತ್ತವೆ. "To be good is dangerous" ಎಂಬ ಮಾತು ಅವರ ನೊಂದ ಹೃದಯದಿಂದ ಹೊರಬೀಳುತ್ತದೆ. ಗ್ಯಾಲರಿಯ ಕುರ್ಚಿಯಲ್ಲಿ ಕುಳಿತ ಪಾದ್ರಿ ಕ್ರಿಸ್ತಾನಂದರು ತದೇಕ ಚಿತ್ತದಿಂದ ಆಗಸದಲ್ಲೇ ತಮ್ಮ ದೃಷ್ಟಿಯನ್ನು ಆಳವಾಗಿಸುತ್ತಾರೆ.

### ದರೋಡೆರಾಜ

ಬೆಂಬತ್ತಿದ ಸಾವಿತ್ರಿಗೆ
ಪ್ರಾಣವನು ಕರುಣಿಸಿದ್ದ
ಯಮರಾಜ
ಗಾಯತ್ರಿಯ ಭದ್ರಪಡಿಸಿದ
ಮನೆ, ಜೀವಗಳ ದೋಚಿದ್ದ
ದರೋಡರಾಜ!

### ಸುಲಿಗೆ

ಕತ್ತಲಲ್ಲಿ ನಿನ್ನ ಕಿಟಕಿಟ
ಗುಮ್ ಗುಮ್‌ಗಾನ
ಹಗಲಾದರೆ ಮಾರಾಟಗಾರನ ಹಾವಳಿ
ಹಣ, ಶಯನಗಳು
ಒಟ್ಟಿಗೇ ದಿವಾಳಿ

### ಕಣ್ಕಟ್ಟು

ಕೊಲೆ, ಅಪಘಾತ
ಸುಲಿಗೆ, ಅತ್ಯಾಚಾರಗಳ
ಕಣ್ಕಟ್ಟು!
ಬೆಲೆಯೇರಿಕೆಯ ಮುಗ್ಗಟ್ಟು
ನೀರು, ದೀಪಕ್ಕಾಗಿ
ಬಾಯ್ಬಿಟ್ಟು
ತಪಿಸಿಹಳು ನಾರಿ ಕಂಗೆಟ್ಟು

### ಅಶಾಂತಿ

ನಲ್ಲಿ
ಹಸಿದರೆ
ಎಲ್ಲಿ, ಮಲ್ಲಿಯರ
ಕಾದಾಟ, ಬಿಕ್ಕಟ್ಟು
ಹಸಿಯದಿದ್ದರೆ
ಡಂ, ಡಂ
ಬಿರಿಗೊಡಗಳ
ಹೋರಾಟ, ಒಕ್ಕಟ್ಟು

### ಮಹಾಕಾಳಿ

ಕತ್ತಲಲಿ ಹೊರಟಿದ್ದ
ಕತ್ತಿನಲಿ ತಾಳಿ
ಗತ್ತಿನಲಿ ಹೊರಟಿತ್ತು
ರಾತ್ರಿಪಾಳಿ
ಗುಂಡಿನಾ ಮತ್ತಿನಲಿ
ಎರಗಿತ್ತು ದಾಳಿ
ಗಂಡನಿಗೆ ಅನಾಮತ್ತಿನಲಿ
ಬೀಸುಗೈಯಲಿ
ಕೊಟ್ಟಿದ್ದಳು ಮಹಾಕಾಳಿ!

### ದೀವಳಿಗೆ

ನಲ್ಲಿ ಹೂಡಿದೆ ಸಂಪು
ತೈಲ ಬೆಲೆ ಗಗನಕ್ಕೆ
ಒಣ ತಲೆಯ ಕಾಟ,
ಡಬ್ಬಗಳು ಖಾಲಿ
ಸವಿಮಾತೆ ಊಟ
ಕತ್ತಲೆಯ ಮನೆಯಲ್ಲಿ
ದೀವಳಿಗೆ ಆಟ!

### ಮೌನದ ಮಲ್ಲಿ

ತಲೆಹರಟೆ ಸಾಕು
ಸಿಹಿಯೂಟ ಹಾಕು
ಗದರಿದನು ಮಲ್ಲ
ಪಂಚಖಾದ್ಯಗಳ
ಪುಟ ತೋರಿ
ಮೌನದಲಿ
ತಲೆತೂರಿದಳು ಮಲ್ಲಿ

—ರೇಣುಕಾ ದೇಶಪಾಂಡೆ
ಶಿರಹಟ್ಟಿ

# ವಾರ್ತಾ ವನಿತಾ

ತಣ್ಣೀರು ಬಾವಿ ಯುವಕ–ಯುವತಿ ಮಂಡಲ (ರಿ) ಚಿತ್ರಾಪುರ ಕುಳ್ಯಾ ಇವರ ಆಶ್ರಯದಲ್ಲಿ ಇತ್ತೀಚೆಗೆ "ವನಮಹೋತ್ಸವ" ಕಾರ್ಯಕ್ರಮವನ್ನು ನಡೆಸಿತು.





1991–92ನೇ ಸಾಲಿನ ಕರ್ನಾಟಕ ರಾಜ್ಯ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೈಸೂರಿನ ಮರಿಮಲ್ಲಪ್ಪ ಶಾಲೆಯ ವಿದ್ಯಾರ್ಥಿನಿ ಕುಮಾರಿ ಶೋಭಾ 11ನೇ ರ್‍ಯಾಂಕ್ ಪಡೆದು ತೇರ್ಗಡೆಯಾದರು.



ಭದ್ರಾವತಿ ವಾಸವಿ ಮಹಿಳಾ ಮಂಡಳಿ ಅಧ್ಯಕ್ಷೆ ಶ್ರೀಮತಿ ಸುವರ್ಣ ನಾಗೇಂದ್ರ ಶೆಟ್ಟಿಯವರು ಕರ್ನಾಟಕ ಆರ್ಯ ವೈಶ್ಯ ಮಹಿಳಾ ಮಹಾಸಭೆಯ ಸಹಕಾರ್ಯದರ್ಶಿಯಾಗಿ ಆಯ್ಕೆಯಾದ ಸಂದರ್ಭದಲ್ಲಿ ಮಂಡಳಿಯವರು ಸನ್ಮಾನಿಸಿದರು.



ಮಂಗಳೂರಿನಲ್ಲಿ ದಿ। ಕ್ಯಾಪ್ಟನ್ ಕಿರಣ್ ಅಲ್ವಾರೀಸ್ ಪ್ರತಿಷ್ಠಾನವು ಇತ್ತೀಚೆಗೆ ಮಂಗಳೂರಿನಲ್ಲಿ ಹೋಟೆಲ್ [illegible] ಪಾಶ್ಚಾತ್ಯ ಸಂಗೀತ ಗಾಯಕಿ ಶ್ರೀಮತಿ [illegible] ಅವರನ್ನು ಸನ್ಮಾನಿಸಿತು.



ದಿ. 6–10–1992ರಂದು ಬೆಂಗಳೂರು ನಗರ ಜಿಲ್ಲಾ ಒಕ್ಕೂಟವು ಬೆಂಗಳೂರಿನ ಶಂಕರಪುರದ ಸಾಹಿತ್ಯ ಸಂಘದಲ್ಲಿ ಉದ್ಘಾಟನೆಯಾಯಿತು.



ತುಮಕೂರಿನ ಇನ್ನರ್‌ವ್ಹೀಲ್ ಕ್ಲಬ್‌ಗೆ ದಿ. 7–10–92ರಂದು ಅಧ್ಯಕ್ಷೆಯಾಗಿ ಶ್ರೀಮತಿ ಡಾ। ರಾಜೇಶ್ವರಿ ಕಾಂತರಾಜು ಆಯ್ಕೆಯಾದರು.

ಉತ್ತರ ಕನ್ನಡ ಜಿಲ್ಲೆಯ ಕರ್ಕಿ ಗ್ರಾಮದ ಮಾದರಿ ಮಹಿಳೆ ಮಂಡಳವು ಗ್ರಾಮದ ಪರಿಶಿಷ್ಟ ಜನಾಂಗದ ಮಹಿಳೆಯರಿಗೆ ವಿಶೇಷ ಘಟಕ ಮತ್ತು ಇತರ ಮಹಿಳೆಯರಿಗೆ ಟ್ರೈಸಮ್ ಯೋಜನೆಯಡಿ ಹೊಲಿಗೆ ತರಬೇತಿ ನೀಡಿ ಪರಿಣತರಿಗೆ ಪ್ರಶಸ್ತಿ ನೀಡಿತು.





ದಿ. 2–10–1992ರಂದು ಗಾಂಧಿ ಜಯಂತಿ ಪ್ರಯುಕ್ತ ನಗರದ ಶ್ರೀ ವಾಸವಿ ಮಹಿಳಾ ಮಂಡಳಿಯವರು ನಗರದ ಜನರಲ್ ಆಸ್ಪತ್ರೆಯ ಸುಮಾರು 200 ಜನ ಒಳರೋಗಿಗಳಿಗೆ ಮತ್ತು ಜೈಲಿನ ಕೈದಿಗಳಿಗೆ ಸೇಬಿನ ಹಣ್ಣುಗಳನ್ನು ಹಂಚಿದರು.

ಲಯನ್ಸ್ ಕ್ಲಬ್ ಹಾಗೂ ಲಯನ್ ಶ್ರೀಮತಿ ಅಕ್ಕಿಬಿ ರಾಣೆಬೆನ್ನೂರು ಇವರ ಆಶ್ರಯದಲ್ಲಿ ಅಕ್ಟೋಬರ್ 11 ಮತ್ತು 12 ರಂದು ನೇತ್ರ ಚಿಕಿತ್ಸಾ ಶಿಬಿರವನ್ನು ಏರ್ಪಡಿಸಿ 82 ಜನರಿಗೆ ಉಚಿತ ಶಸ್ತ್ರ ಚಿಕಿತ್ಸೆ ನಡೆಸಲಾಯಿತು. ಹಾಗೂ ಒಂದು ವಾರದ ವರೆಗೆ ಉಚಿತ ಊಟ, ಔಷದ ನೀಡಿ ಕನ್ನಡಕಗಳನ್ನು ವಿತರಿಸಲಾಯಿತು.



ಬೆಂಗಳೂರಿನ ಪಾರ್ವತಿ ಮಹಿಳಾ ಸಮಾಜದ ದಶಮಾನೋತ್ಸವವನ್ನು ವೈಭವದಿಂದ ಆಚರಿಸಲಾಯಿತು.



ಧಾರಾವಾಹಿ — 2

# ನಾದಬಿಂದು

-ಧೃತಿ

ಮೊದಲು ತನಗೂ ಜೀವನದಲ್ಲಿ ಎಷ್ಟೊಂದು ಉತ್ಸಾಹವಿತ್ತು. ದಿನದ ಪ್ರತಿಕ್ಷಣಗಳೂ ಚೇತೋಹಾರಿಯಾಗಿ, ಹಕ್ಕಿಯಂತೆ ಸ್ವಚ್ಛಂದವಾಗಿ ಹಾರಬಯಸುವ, ಕೋಗಿಲೆಯಂತೆ ಮದುರವಾಗಿ ಹಾಡಬಯಸುವ, ನವಿಲಿನಂತೆ ಗರಿಗೆದರಿ ಕುಣಿಯಬಯಸುವ ಅಮೃತ ಚೇತನದ ಸಮಯವಾಗಿತ್ತು. ತಂದೆತಾಯಿಯರ ವಾತ್ಸಲ್ಯದಲ್ಲಿ, ಗೆಳತಿಯರ ಕುಲು ಕುಲು ನಗುವಿನಲ್ಲಿ, ಸಮಯವು ಕ್ಷಣಗಳಂತೆ ಜಾರಿ 23 ಸಂವತ್ಸರಗಳನ್ನು ಕಾಣಿಸಿತ್ತು. ನಾನು, ನನ್ನದು ಎಂದುಕೊಳ್ಳುವ ಎಲ್ಲವೂ ತನಗೆ ತೃಪ್ತಿ ತಂದಿತ್ತಾಗ ಲೋಕವೆಲ್ಲಾ ಸುಂದರವಾಗಿ, ಪ್ರಪಂಚದ ವ್ಯವಹಾರಗಳೆಲ್ಲಾ ಸಲೀಸಾಗಿ ನಡೆಯುತ್ತಿರುವಂತೆ ಭಾಸವಾಗಿತ್ತು. ಎಷ್ಟೊಂದು ಚೆನ್ನಾಗಿದ್ದ ದಿನಗಳವು. ಮದುವೆಯಾಗಿ ಗಂಡನ ಮನೆಯಲ್ಲಿ ಸುಖವಾಗಿ ಬಾಳುತ್ತಿದ್ದ ಅಕ್ಕ, ನಗುಮುಖದ ಭಾವ, ಓದಿನಲ್ಲಿ ಜಾಣನಾಗಿದ್ದ ತಮ್ಮ ತಂದೆತಾಯಿಯರಿಗೆ ಯಾವ ತೊಂದರೆಯನ್ನೂ ಉಂಟುಮಾಡದೆ, ಅವರೂ ಮೆಚ್ಚುವಂತಹ ಗಂಡನ್ನು ಆರಿಸಿಕೊಂಡ ತಾನು – –ಹೀಗೆ ತಮ್ಮ ಮಕ್ಕಳ ಸಂತೋಷದ ಬಾಳನ್ನು ತಮ್ಮ ಸಂತೋಷವಾಗಿಸಿಕೊಂಡು ತೃಪ್ತಿಯಾಗಿದ್ದ ತಂದೆತಾಯಿಯರು – ಯಾರಾದರೂ ಮೆಚ್ಚುವಂತಹ ಕುಟುಂಬವೇ. ತಾನು ದಿವಾಕರನೊಂದಿಗೆ ಸ್ನೇಹ ಬೆಳೆಸಿದಾಗ ತಂದೆ ತಾಯಿಯರು ವಿರೋಧಿಸಲಿಲ್ಲವೆಂಬುದು ತನಗೆ ಸಂತೋಷವನ್ನೇ ತಂದುಕೊಟ್ಟಿತ್ತು. ತಾನು ಬಯಸಿದ ಗಂಡನೊಂದಿಗೆ ತನ್ನ ವಿವಾಹ ನಿಷ್ಕರ್ಷೆಯಾಗಿತ್ತು. ನಿಷ್ಕರ್ಷೆ ಎಂದರೆ ಸಮಾರಂಭ ವೇರ್ಪಡಿಸಿ ಮಾಡಿಕೊಂಡದ್ದಲ್ಲ. ನಮ್ಮ ನಮ್ಮೊಳಗೆ ನಿರ್ಧರಿಸಿಕೊಂಡಿದ್ದು. ತಾನು ಮೆಚ್ಚಿಕೊಂಡಿದ್ದ ದಿವಾಕರ ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದರು. ಬೆಂಗಳೂರಿನಿಂದ ಬಂದ ಮೇಲೆ ತನಗೂ ಪಾರ್ಟ್ ಟೈಂ ಕೆಲಸ ಅದೇ ಕಾಲೇಜಿನಲ್ಲಿ ದೊರಕಿತ್ತು. ತಾನು ಕೆಲಸಕ್ಕೆ ಸೇರುವ ಮೊದಲೇ ಭಾವನ ಮೂಲಕ ತಮ್ಮ ಮನೆಯ ಜನರಿಗೆ ಪರಿಚಯವಾಗಿದ್ದ ದಿವಾಕರ, ಕೆಲಸಕ್ಕೆ ಸೇರಿದ ನಂತರ ತನಗೆ ಆತ್ಮೀಯ ಸ್ನೇಹಿತರಾಗಿಬಿಟ್ಟರು. ಸ್ನೇಹ ಪ್ರೇಮಕ್ಕೆ ತಿರುಗಿತು. ತನ್ನ ತಂದೆ–ತಾಯಿಗಳು, ಹಿತೈಷಿಗಳು ಈ ಪ್ರೇಮದ ಚಿಗುರಿಗೆ ನೀರೆರೆದರು. ಹಿರಿಯ ಮಗಳು ವಿದೇಶದಲ್ಲಿದ್ದಾಳೆಂದು ಆರು ತಿಂಗಳ ಕಾಲ ಅವರಲ್ಲಿಗೆ ಹೋಗಿದ್ದ ದಿವಾಕರರ ತಂದೆತಾಯಿಯರು ಸುರಪುರಿಗೆ ವಾಪಸು ಬಂದ ನಂತರ ತಮ್ಮಿಬ್ಬರ ವಿವಾಹವಾಗಿ, ಈ ಪ್ರೇಮದ ಚಿಗುರು ಬೆಳೆದು ಹೂವಾಗಿ.... ಕಾಯಾಗಿ... ಫಲ ಕೊಡುವ ಯೋಚನೆ ಮಾಡುತ್ತಿರುವಾಗ ಕೊನೆಗೆ ಎಲ್ಲವೂ ಗಾಳಿಗೋಪುರವಾಗಿ ಕುಸಿದಿತ್ತು. ಕಾಲೇಜಿಗೆಂದು ಬೈಕ್‌ನಲ್ಲಿ ಹೋಗುತ್ತಿದ್ದ ದಿವಾಕರ ಬಿದ್ದು ತಲೆಯೊಡೆದು ಆಸ್ಪತ್ರೆಯಲ್ಲಿ ಪ್ರಾಣಬಿಟ್ಟರು. ತನಗೆ ಮಧ್ಯಾಹ್ನದ ಪಾಠಗಳು ಇದ್ದುದರಿಂದ ಆ ದಿನ ಅವರೊಂದಿಗೆ ತಾನು ಹೋಗಲಿಲ್ಲ. ಇಲ್ಲದಿದ್ದರೆ ಇಂತಹ ಕಠೋರ ದಿನಗಳನ್ನೆದುರಿಸುವ ದುಃಸ್ಥಿತಿ ತನ್ನದಾಗುತ್ತಿರಲಿಲ್ಲವೇನೋ.

ಒಂದೇ ಒಂದು ಹೊಡೆತ ತನ್ನನ್ನು ಎಷ್ಟು ನಲುಗಿಸಿಬಿಟ್ಟಿತು. ತನಗಾದ ದುಃಖವನ್ನು ತಾನು ಯಾರಲ್ಲೂ ಹೇಳಿಕೊಳ್ಳಲಾರದೆ ಹೋದೆ. ಎಲ್ಲರೂ 'ಅಯ್ಯೋ ಅನ್ಯಾಯ ನಡೆದುಹೋಯಿತು' ಎಂದದ್ದೇನೋ ಉಂಟು. ನಾಲ್ಕಾರು ಮಾತುಗಳಲ್ಲಿ ತಮಗಾದ ದುಃಖವನ್ನು ಪ್ರಕಟಿಸಿದ್ದೂ ಉಂಟು. ಆದರೆ ತನಗಾದ ವ್ಯಥೆಯ ಪ್ರಮಾಣವನ್ನು ಅವರಿಂದ ತೂಗಲಾಗಲಿಲ್ಲವೆಂಬುದು ಸತ್ಯವಾದ ಮಾತು. ಏಕೆಂದರೆ ಹೊರನೋಟಕ್ಕೆ ನನ್ನ ಜೀವನಕ್ಕೆ ಯಾವ ಘಾಸಿಯೂ ಆಗಿರಲಿಲ್ಲವಲ್ಲ. ದಿವಾಕರ ತನಗೆ ಏನು ಅನ್ಯಾಯ ಮಾಡಿದರು? ತನಗೆ ಅಮಂಗಲೆಯಾದ ವಿಧವೆ ಎಂಬ ಪಟ್ಟವೆ? ಅಥವಾ ಸಾಂಪ್ರದಾಯಿಕ ಜೀವನ ವಿಧಾನಕ್ಕೆ ಧಕ್ಕೆಯೆ? ಉಹ್ಞೂಂ ಎಂತಹುದೂ ಅಲ್ಲ. ಉಳಿದವರ ಪಾಲಿಗಂತೂ ಅವರ ಸಾವು ಯಾರೂ ನಿರೀಕ್ಷಿಸದಿದ್ದ ಒಂದು ಆಕಸ್ಮಿಕ ಅಷ್ಟೆ. ತಾನು ಅದೃಷ್ಟವಂತಳೆಂದೇ ಹಲವರ ಅಭಿಮತ. ತಂದೆ ತಾಯಿಯರಂತೂ 'ಸದ್ಯ! ಮದುವೆಯಾದ ಮೇಲೆ ಹೀಗಾಗಲಿಲ್ಲವಲ್ಲ' ಎಂದು ಸಮಾಧಾನದ ನಿಟ್ಟುಸಿರನ್ನು ಬಿಟ್ಟಿದ್ದರು. ತನ್ನ ಸ್ವಾರ್ಥಪರವಾದ ಮನಸ್ಸೂ ಒಮ್ಮೊಮ್ಮೆ ಹಾಗೆಯೇ ನುಡಿಯುತ್ತಿತ್ತು. ಅದನ್ನು ಹಲವು ಆತ್ಮೀಯರ ಸಮ್ಮುಖದಲ್ಲೂ ನಾಲಿಗೆಯಿಂದ ಹೊರಗೆಡಹಿ ತನ್ನನ್ನು ತಣಿಸಿಕೊಳ್ಳುತ್ತಿತ್ತು. ಆದರೂ ಅಂದಿನಿಂದ ವಿಷಾದದ ನೆರಳೊಂದು ತನ್ನ ವ್ಯಕ್ತಿತ್ವದಲ್ಲಿ ಸೇರಿಹೋಗಿ ತನ್ನನ್ನು ಅಂತರ್ಮುಖಿಯನ್ನಾಗಿಸುತ್ತಾ, ಜೀವನ ಸುಂದರವಾದುದಷ್ಟೇ ಅಲ್ಲ; ಭಯಪಡಿಸುವಂತಹುದೂ ಹೌದು, ಅದನ್ನೆದುರಿಸಲು 'ಛಾತಿ' ಬೇಕು ಎಂಬುದನ್ನು ಕಾಣಿಸುತ್ತಾ ಹೋಯಿತು.

ಇಲ್ಲಿಯವರೆಗೆ..

ದೆಹಲಿಗೆ ಹೊರಟ ವತ್ಸಲ ತನ್ನ ಬೋಗಿಯಲ್ಲಿ ವಾಸಂತಿಯನ್ನು ಕಂಡು ಅಚ್ಚರಿಗೊಳ್ಳುತ್ತಾಳೆ. ಈ ಇಳಿವಯಸ್ಸಿನಲ್ಲಿ ಅವಳು ಮದುವೆಯಾದ ವಿಷಯ ಕೇಳಿ ವಿಚಿತ್ರವೂ ವಿಪರೀತವೂ ಅನಿಸುತ್ತದೆ. ಇತರರು ಬೋಗಿಯಲ್ಲಿದ್ದರೂ ಯಾರೂ ಇಲ್ಲವೆಂಬಂತೆ ಆಕೆ ತನ್ನ ಗಂಡನೊಂದಿಗೆ ವರ್ತಿಸಿದ್ದು ಸ್ವಲ್ಪ ಅತಿಯೆನಿಸಿತು. ಜೊತೆಗೆ ವಾಸಂತಿ ತನ್ನ ಒಂಟಿ ಜೀವನವನ್ನು ನೆನಪಿಸಿಕೊಳ್ಳುವಂತಾಯಿತು.

—ಇನ್ನು ಮೇಲೆ...

ಬಹುಕಾಲದ ತನಕ ನಾನು ಮನಃಪೂರ್ತಿ ನಗಲಾರದೆ ಹೋದೆ. ಆಗಲೂ ಅಷ್ಟೆ. ನಗು ಹೊಮ್ಮಿದಾಗ ಅದು ಕೃತಕವಾಗಿ ಮುಕ್ತಾಯಗೊಳ್ಳುತ್ತದೆ. ಗೆಳತಿಯರೊಡನೆ ಹೆಚ್ಚು ಬೆರೆಯಲಾರೆ. ಒಮ್ಮೊಮ್ಮೆ ಗುಂಪಿನಲ್ಲಿರಬೇಕಾದರೂ ಒಂಟಿತನ ಕಾಡುತ್ತದೆ.

ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದ ಅವಧಿ ಮುಗಿದು ಹೋಗಿತ್ತು. ದಿವಾಕರನ ನೆನಪೂ ಮಾಸುತ್ತಾ ಬಂತು. ಕಾಲ ಉರುಳಿದಂತೆ ತನಗೊಂದು ಬೇರೆ ಹೊಸಬಾಳನ್ನು ರೂಪಿಸಿಕೊಡುವ ಹವಣಿಕೆಯಲ್ಲಿದ್ದರು ತಂದೆ. ಹಲವಾರು ಕಡೆ ವರಾನ್ವೇಷಣೆಗೆ ತೊಡಗಿದ್ದರು. ತನಗೂ ಮತ್ತೆ ನಗಬೇಕೆಂಬ ಆಸೆ ಮೂಡುತ್ತಿತ್ತು.

ಹಗುರವಾಗಿ ಮುಚ್ಚಿಕೊಂಡಿದ್ದ ಕಣ್ಣನ್ನು ತೆರೆದಳು ವತ್ಸಲ. ವಾಸಂತಿ ಇವಳತ್ತಲೇ ನೋಡುತ್ತಿದ್ದಾರೆ.

"ರಾತ್ರಿ ಸರಿಯಾಗಿ ನಿದ್ದೆ ಬರಲಿಲ್ಲವೇ?'' – ಕೇಳಿದರು ಅವರು.

"ಸ್ವಲ್ಪ ಬಂದಿತ್ತು. ಕಣ್ಣು ಮುಚ್ಚಿದರೆ ಈಗಲೂ ಬರುತ್ತೆ'' – ವತ್ಸಲ ನಗುತ್ತಾ ಹೇಳಿದಳು.

ವಾಸಂತಿ ವತ್ಸಲೆಗೂ ಒಂದು ಕಟ್ಲೆಟ್ ಪ್ಲೇಟನ್ನು ಕೊಂಡು ತಿನ್ನುವಂತೆ ಬಲವಂತ ಮಾಡಿದರು. ತಿಂದಾದ ನಂತರ ತಮ್ಮ ಶೃಂಗಾರಕ್ಕೆ ತೊಡಗಿದರು. ಅವರು ಡೈ ಮಾಡಿದ್ದರೂ ಕೆದರಿದಂತೆ ಕಾಣುವ ಬಾಬ್ ಅವರ ಮುಖಕ್ಕೆ ಸ್ವಲ್ಪವೂ ಒಪ್ಪುವಂತಿರಲಿಲ್ಲ. ಸಣ್ಣಗೆ ಗೆರೆ ಎಳೆದಂತೆ ಕಾಣುತ್ತಿದ್ದ ಹುಬ್ಬು, ಬೋಳಾದ ಹುಬ್ಬಿನ ಭಾಗವನ್ನು ಸ್ಪಷ್ಟವಾಗಿ ತೋರಿಸಿ ಅವಲಕ್ಷಣವಾಗಿ ಕಾಣುತ್ತಿತ್ತು. ಕೂದಲನ್ನು ಬಾಚಣಿಗೆಯಿಂದ ನೇವರಿಸಿಕೊಳ್ಳುತ್ತಾ, ಮುಖಕ್ಕೆ ಮೇಕಪ್ ಅನ್ನು ಪೂಸಿಕೊಳ್ಳುತ್ತಾ, ತನ್ನ ಹೊಸ ಗಂಡನ ಕಡೆಗೊಮ್ಮೊಮ್ಮೆ ನೋಟ ಬೀರುತ್ತಾ, ಯಾವುದೋ ರಸಿಕತನವನ್ನು ತನ್ನ ವಯಸ್ಸಾದ ಗಂಡನಲ್ಲಿ ಅರಸುತ್ತಿರುವಂತೆ ಕಾಣುತ್ತಿದ್ದಳು. ವತ್ಸಲೆಗೆ ತಾನೂ ಸಿಂಗರಿಸಿಕೊಳ್ಳಬೇಕು ಎಂದೇನೂ ಅನಿಸಲಿಲ್ಲ. ಸುಮ್ಮನೆ ಅವರಿಬ್ಬರನ್ನೇ ನೋಡುತ್ತಾ ಕುಳಿತುಬಿಟ್ಟಳು. ಅವಳು 'ಹ್ಯಾಪ್‌ಮೋರೆ' ಮಾಡಿಕೊಂಡು ಕುಳಿತಿದ್ದಾಳೆ ಎಂದು ಅವರಿಗೆ ಅನಿಸಿರಬೇಕು. ಅದಕ್ಕೇ ಕೇಳಿದರು. "ನೀವಿನ್ನೂ ಯಾಕೆ ಮದುವೆಯ ಯೋಚನೆ ಮಾಡಿಲ್ಲ? ಲೈಫ್ ಎಂಜಾಯ್ ಮಾಡಬೇಕು. ಇಲ್ಲದಿದ್ರೆ ಹ್ಯಾಪಿನೆಸ್ಸೇ ಇರೋದಿಲ್ಲ''

"ನೀವೇಕೆ ಸಣ್ಣ ವಯಸ್ಸಿನಲ್ಲೇ ಲೈಫ್ ಎಂಜಾಯ್ ಮಾಡಲಿಲ್ಲ?'' ಎಂದು ವತ್ಸಲ ಕೇಳಲಿಲ್ಲ. ಸುಮ್ಮನೆ ಮುಗುಳ್ನಗುತ್ತಾ ಕುಳಿತಳು. ಈ ವಾಸಂತಿ ಯುವತಿಯಾಗಿದ್ದಾಗಿನಿಂದಲೂ ಇದೇ ರೀತಿಯ ಎಂಜಾಯ್‌ಮೆಂಟ್ ಮಾಡುತ್ತಿದ್ದರೋ ಏನೋ ಯಾರಿಗ್ಗೊತ್ತು? ಎಂದು ತನ್ನಲ್ಲೇ ಅಂದುಕೊಂಡಳು.

ಹ್ಯಾಪಿನೆಸ್ ಎಂದರೆ ಏನು? ಲೈಫ್ ಎಂಜಾಯ್ ಮಾಡುವುದು ಎಂದರೆ ಏನು ನಮಗಿರುವ ಇತಿಮಿತಿ



ಗಳಲ್ಲಿ, ಕಟ್ಟು ಪಾಡುಗಳ ನಡುವೆ ಎಲ್ಲರೂ ವಾಸಂತಿಯಂತಿರಲು ಸಾಧ್ಯವೆ? ತನಗಿಂತ ನಾಲ್ಕೇ ವರುಷ ದೊಡ್ಡವಳಾದ ಅಕ್ಕ ಹೇಗೆ ಮುದುಡಿಹೋಗಿದ್ದಾಳೆ. ದಿವಾಕರರ ಸಾವೇ ದೊಡ್ಡ ಆಘಾತ ಎಂದುಕೊಂಡಿದ್ದಾಗ, ಭಾವನ ಸಾವಿನಂತಹ ಅತ್ಯಂತ ದೊಡ್ಡ ದುರಂತವನ್ನು ಕಾಣಿಸುವಂತಹ ದೌರ್ಭಾಗ್ಯವನ್ನು ವಿಧಿ ಕರುಣಿಸಿತ್ತು. ಅಕ್ಕನಂತೂ ದಿಙ್ಮೂಢಳಾಗಿ ಬಿಟ್ಟಿದ್ದಳು. ಅವಳ ಬಸಿರಿನಲ್ಲಿ ಕೂಸೊಂದು ಬೆಳೆಯುತ್ತಿತ್ತು ಎಂಬ ಕಾರಣದಿಂದ ಅವಳು ಬದುಕುವ ಮನ ಮಾಡಿದ್ದು ಅಷ್ಟೇ. ಸುರಳವಾದ ಉಡುಪು ತೊಟ್ಟು ವಿರಾಗಿಯಂತೆ ಬದುಕುತ್ತಿರುವ ಅಕ್ಕನನ್ನು ಕಂಡಾಗ ತಾನು ಮದುವೆ ಮಾಡಿಕೊಳ್ಳುವುದಿಲ್ಲ ಎಂದು ಆ ಕ್ಷಣದಲ್ಲೇ ದೃಢ ಸಂಕಲ್ಪ ಮಾಡಿಬಿಟ್ಟೆ. ಅದೇ ಸಂಕಲ್ಪ ಶಕ್ತಿಯನ್ನು ಇದುವರೆಗೂ ಕಾಪಾಡಿಕೊಂಡು ಬಂದಿದ್ದೇನೆ. ವಾಸಂತಿ ಅಳವಡಿಸಿಕೊಂಡ ಜೀವನವಿಧಾನದಿಂದ ತನ್ನ ನಿಲುವೇಕೆ ಬದಲಾಗಬೇಕು? ಈಗ ಸರಳ ಬದುಕುತ್ತಿದ್ದವಳು ತಾನೂ ಹಾಗೆಯೇ ಇದ್ದರಾಯಿತು. ತನಗಿರುವ ವಿದ್ಯಾಭ್ಯಾಸದ ಬಲ ತನ್ನ ನಿಲುವನ್ನು ಹಾಗೆಯೇ ಉಳಿಸಿಕೊಳ್ಳಲು ಸಹಾಯ ಮಾಡೇ ಮಾಡುತ್ತದೆ.

ಓದು–ಬರಹ ಮಾಡುವುದು ವಿದ್ಯಾವಂತ[illegible]ಗುವುದಕ್ಕೆ, ಜೀವನೋಪಾಯಕ್ಕೆ ಎಂದುಕೊಂಡಿದ್ದ [illegible]

ಅನುಭವ ವೇದ್ಯವಾಗಿ ಜೀವನಕ್ಕೇ ದಾರಿದೀಪವಾಗುತ್ತಿರುವುದು ಅರಿವಿಗೆ ಬರುತ್ತಾ ಇದೆ. ಚಿಕ್ಕ ವಯಸ್ಸಿನಲ್ಲಿ ವಚನಸಾಹಿತ್ಯವನ್ನು ಓದುವಾಗ "ಕಳಬೇಡ–ಕೊಲಬೇಡ – ಹುಸಿಯ ನುಡಿಯಲು ಬೇಡ" ಎಂಬ ಮಾತು ಸುಲಭವಾಗಿ ಅರ್ಥವಾಗಿದ್ದರೂ ಯಾವುದೋ ಗಹನವಾದ ವಿಷಯವೇ ಎಂಬಂತೆ ಕುತೂಹಲದಿಂದ ಓದಿದ್ದೆ 'ಸಂಸಾರ ಬಂಜೆತನ

**ಲೋಕಜ್ಞಾನ ಉತ್ತರಗಳು**

1. ಮೇಡಂ ಕ್ಯೂರಿ
2. ಬಿಲ್ಲಿ ಜೀನ್ ಕಿಂಗ್
3. ರೀಟಾ ಫರೇರಾ
4. ಥಿಯಾಸಾಫಿಕಲ್ ಸೊಸೈಟಿ
5. ಕ್ರಿ.ಶ. 1558ರಲ್ಲಿ
6. ಮಾರ್ಚ್
7. ಬಟ್ಲರ್ ಅಪಾಲ್
8 ಮಿಗ್ನೋನ್
9. ವೈಜಯಂತಿ ಮಾಲಾ
10. [illegible]
11. ಕರ್ನಾಟಕ ಮಕ್ಕಳ ಕೂಟ
12. ಗೋಮತಿ ಕಿ ಕಿನಾರೆ

ಕಾಡುತಿದೆಯಯ್ಯಾ" ಎಂಬ ಮಾತುಗಳು ಅರ್ಥವಾಗದಿದ್ದರೂ ಯಾವುದೋ ಗಹನವಾದ ವಿಷಯವೇ ಎಂಬಂತೆ ಕುತೂಹಲದಿಂದ ಓದಿದ್ದೆ 'ಸಂಸಾರ ಕಾಡುತಿದೆ ಎಂದರೆ ಯಾವುದೋ ಅಹಿತಕರವಾದ ಅನಿಷ್ಟ ಎಂಬ ಭಾವನೆ ಬಂದು ಹೋಗಿ ತಾನೂ ಅಕ್ಕ ಮಹಾದೇವಿಯಂತೆ ಬಂಧಮುಕ್ತಳಾಗಬೇಕು ಅನಿಸುತ್ತಿತ್ತು. ವಯಸ್ಸು ಬೆಳೆಯುತ್ತಾ ಬಂದಂತೆ ಅದೆಲ್ಲಾ ಅನುಭಾವಿಗಳು ಆಡುವಂತಹ ಮಾತು. ಸಂಸಾರವೆಂದರೆ ತನಗೇನೂ ಅಂತಹ ದ್ವೇಷವಿಲ್ಲ ಎನಿಸಿತ್ತು. ಈಗ ಮತ್ತೆ ಬಾಯಿಪಾಠ ಮಾಡಿದ್ದ 'ಸಂಸಾರ ಬಂಜೆತನ ಕಾಡುತಿದೆಯಯ್ಯಾ' ಎಂಬ ಅದೇ ಸಾಲುಗಳು ಅದರ ಅರ್ಥ ವೈಶಾಲ್ಯತೆಯನ್ನು ಕಾಣಿಸುತ್ತಿದೆ.

ಅಕ್ಕನ ಪ್ರಸೂತಿಯಾದ ನಂತರ ತಂದೆ ಮತ್ತೆ ವರಾನ್ವೇಷಣೆಗೆ ಸಿದ್ಧತೆ ನಡೆಸಿದ್ದರು. ತಾನು ಬಲವಾಗಿ ಪ್ರತಿಭಟಿಸಿಬಿಟ್ಟೆ. "ನೀವು ಏನೇ ಹೇಳಿದರೂ, ಎಷ್ಟೇ ಹೇಳಿದರೂ ನಾನಂತೂ ಮದುವೆ ಮಾಡಿಕೊಳ್ಳುವುದಿಲ್ಲ" ಎಂದು. ಸುರಳ ನನ್ನನ್ನು ಒತ್ತಟ್ಟಿಗೆ ಕರೆದು ಕಣ್ಣೀರು ಒರೆಸಿಕೊಳ್ಳುತ್ತಾ ಹೇಳಿದ್ದಳು.

"ಹುಚ್ಚಿ; ನನ್ನ ಅದೃಷ್ಟ ಹೀಗಾಯಿತೆಂದ ಮಾತ್ರಕ್ಕೆ ನೀನು ಹೀಗೆ ಹಠಹಿಡಿಯಬೇಡಮ್ಮ ನಿನ್ನ ಹಣೆಯಲ್ಲಿ ಅದೃಷ್ಟವೇ ಬರೆದಿದೆ. ನೀನು ಸುಖವಾಗಿದ್ದರೆ ಅಪ್ಪ–ಅಮ್ಮನೂ ಸುಖವಾಗಿರುತ್ತಾರೆ."

ಅನಂತರ ತಂದೆಗೆ ಹೇಳಿದ್ದರು.

"ಭಾವನ ಸಾವು, ದಿವಾಕರನ ಸಾವಿನಿಂದ ಅವ

ಈಗ ಅಪ್ರಸ್ತುತವಾಗದೆ. ಇನ್ನೊಂದು ವರ್ಷ ಕಳೆಯುತಿ ಬಿಟ್ರೆ. ತಾನಾಗೇ ಅರ್ಥ ಮಾಡಿಕೊಳ್ಳುತ್ತಾಳೆ''

ತಂದೆ ಮರುವರ್ಷವೂ ತನ್ನ ಮನವೊಲಿಸುವ ಪ್ರಯತ್ನ ಮಾಡಿದರು.ತಾಯಿ ಸಿಟ್ಟು ಮಾಡಿಕೊಂಡರು. ಸರಳ ಮತ್ತೆ ಬುದ್ದಿವಾದ ಹೇಳಿದಳು. ತಮ್ಮ ಮುರಳಿ ಈಗ ಎಂಜಿನಿಯರ್ ಆಗಿ ದೊಡ್ಡ ಕೆಲಸ ಸಂಪಾದಿಸಿದ್ದಾನೆ. ಅವನೂ ಸಹ ಈಗೀಗ ತನ್ನನ್ನು ಮದುವೆ ಮಾಡಿಕೋ ಎಂದು ಒತ್ತಾಯಿಸಲು ಪ್ರಾರಂಭಿಸಿದ್ದ. ''ಮದುವೆಯಾಗುವ ವಯಸ್ಸಿನ ಅಕ್ಕ ಮನೆಯಲ್ಲಿರುವಾಗ ನಾನು ಮದುವೆಯಾದರೆ ಚೆನ್ನಲ್ಲ; ಎಲ್ಲರೂ ಆಡಿಕೊಳ್ತಾರೆ. ನಿನ್ನದು ಆಗುವ ತನಕ ನನ್ನದು ಆಗುವಂತಿಲ್ಲ. ಎಷ್ಟು ದಿನ ಕಾಯುತ್ತಿರಲಿ'' ಎನ್ನಲಾರಂಭಿಸಿದ್ದ. ತನಗೆ ಮಾತ್ರ ಯಾರ ಬುದ್ದಿವಾದವೂ ತರ್ಕವೂ ಗಮನಕ್ಕೆ ಬರಲಿಲ್ಲ. 'ಯಾರಿಗೆ ಯಾರುಂಟು ಎರವಿನ ಸಂಸಾರ... ನೀರ ಮೇಲಿನ ಗುಳ್ಳೆ ನಿಜವಲ್ಲ ಹರಿಯೇ' ಎಂಬ ಪಲ್ಲವಿಯೇ ನನ್ನ ಸೊಲ್ಲು. ತಂದೆ ಕೂಡಾ ಹಟಮಾರಿ, ಚಂಡಿ ಎಂದು ಬೈಯ್ದರು. ತಾಯಿ 'ನಿನ್ನ ಮದುವೆಯಾಗದೆ ನಾನು ನಿಶ್ಚಿಂತೆಯಿಂದ ಹೇಗೆ ಸಾಯಲೇ?' ಎಂದು ಗೋಗರೆದರು. ''ಈಗ ಇದ್ದುದ್ದು ಇದೀಗ ಇಲ್ಲ ಎನಿಸುವ ಮಾಯೆಯ ಕಪಟ ನನ್ನನ್ನು ಜಾಗೃತಳಾಗಿಯೇ ಇರುವಂತೆ ಪ್ರೇರೇಪಿಸುತ್ತಿದೆ' ಎಂದು ನಾನೇನಾದರೂ ಹೇಳಿದರೆ ಅವರೆಲ್ಲಾ ನಗುತ್ತಾರೆ. ನಿನಗೇನು ತಿಳಿಯುತ್ತದೆ? ವೇದಾಂತಿಯಂತೆ ಮಾತನಾಡಿದ ಮಾತ್ರಕ್ಕೆ ದ್ವೇಷ–ಅಸೂಯೆ, ಪ್ರೇಮ–ಕಾಮಗಳನ್ನೆಲ್ಲಾ ಗೆದ್ದ ಜ್ಞಾನಿ ಎಂದುಕೊಂಡೆಯಾ? ಎನ್ನುತ್ತಾರೆ ಎಂದು ನನಗೆ ಗೊತ್ತು. ಹಾಗೆಂದು ಅವರೆಲ್ಲಾ ಹೇಳುವುದಿರಲಿ, ನನಗೆ ನಾನೇ ಹೇಳಿಕೊಳ್ಳಬಲ್ಲೆ. ಹೇಗಾದರಾಗಲಿ. 'ಮೌನಂ ಸರ್ವತ್ರ ಸಾಧನಂ' ಆದುದರಿಂದ ಮೌನವಾಗಿಯೇ ಅವರ ಕೇಳಿಕೆಗೆ ನಿರಾಕರಣೆ ಸೂಚಿಸಿಬಿಟ್ಟೆ.

ವಾಸಂತಿ ಗಂಡನೊಡನೆ ಮಾತಾಡುತ್ತಾ ಗಟ್ಟಿಯಾಗಿ ನಕ್ಕ ಸದ್ದು ವತ್ಸಲೆಯ ಗಮನವನ್ನು ಸೆಳೆಯಿತು. ಮೌನವ್ರತ ಹಿಡಿದಿರುವವಳಂತೆ ತೋರುವ ವತ್ಸಲಳಲ್ಲಿ ಅವರ ಆಸಕ್ತಿ ಕಡಿಮೆಯಾಗಿತ್ತು. ಅವರಿಬ್ಬರೇ ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಅವಳಿಗೆ ಕುಳಿತು ಕುಳಿತು ಬೇಸರವೆನಿಸಿ ಏನಾದರೂ ಬಾಯಲ್ಲಿ ಹುರುಕಿದರೆ ಚೆನ್ನಾಗಿರುತ್ತದೆ ಎನಿಸಿ, ಕುಳಿತಲ್ಲಿಂದ ಎದ್ದು ಚೀಲದಲ್ಲಿರಿಸಿದ್ದ ತಿಂಡಿಯ ಪ್ಯಾಕೆಟ್ ಹೊರತೆಗೆದಳು. ತಾಯಿ ಮಾಡಿಕೊಟ್ಟಿದ್ದ ಚಕ್ಕುಲಿಯನ್ನು ಅವರಿಬ್ಬರಿಗೂ ನೀಡುತ್ತಾ ಅಂದಳು.

''ಹಿಂದೆ ನೀವು ಮಾಡಿಕೊಟ್ಟ ತಿಂಡಿ ತಿಂದಿದ್ದೇನಲ್ಲ. ನಮ್ಮ ಮನೆಯ ತಿಂಡಿಯ ರುಚಿಯನ್ನೂ ನೋಡಿ''

ವತ್ಸಲ ಬಿಗಿಮೋರೆಯನ್ನು ಸಡಲಿಸಿ ಕುಳಿತಿದ್ದುದರಿಂದ ವಾಸಂತಿ ಮಾತಿಗೆ ಶುರುಮಾಡಿದಳು.

''ಚಕ್ಕುಲಿ ಚೆನ್ನಾಗಿದೆ. ನಿಮ್ಮ ತಾಯಿ ಮಾಡಿದ್ದಾ?''

''ಹೌದು''

''ನಿಮ್ಮ ತಂದೆ ಏನು ಮಾಡುತ್ತಿದ್ದಾರೆ?''

''ಲಾಯರ್ ಆಗಿದ್ದರು. ಕಳೆದ ವರ್ಷ ತೀರಿಕೊಂಡರು''

''ಸ್ಟೇಷನ್ನಿಗೆ ಬಂದಿದ್ದರಲ್ಲಾ. ಅವರಾರು?''

''ನನ್ನ ತಮ್ಮ ಅವನೂ ನನ್ನೊಡನೆ ಬರುವವನಿದ್ದ. ಅವನಿಗೆ ತುರ್ತಾಗಿ ಮುಂಬೈಗೆ ಹೋಗಬೇಕಾಗಿ ಬಂತು. ಅದಕ್ಕೆ ನಾನೊಬ್ಬಳೇ ಬರಬೇಕಾಯಿತು.''



## ಪ್ರತಿಭಾ ಸಂಪನ್ನ
## ಸಂಗೀತಾ ಕಾಖಂಡಕಿ

10ನೇ ಜೂನ್, 1978ರಲ್ಲಿ ರಾಯಚೂರಿನಲ್ಲಿ ಜನಿಸಿದ ಸಂಗೀತಾಳಿಗೆ ಏಳು ವಯಸ್ಸಿನಿಂದಲೂ ಸಂಗೀತದತ್ತವೇ ಅಪಾರ ಒಲವು. ತಂದೆ ಶ್ರೀ ರಾಮಾಚಾರ್ಯ ಕಾಖಂಡಕಿಯವರ ಮನೆತನ ಸಂಗೀತಕ್ಕೆ ಹೆಸರುವಾಸಿಯಾದುದು, ತಂದೆಯೇ ಸಂಗೀತಾಭ್ಯಾಸದ ಮೊದಲ ಗುರು. ಶ್ರೋತೃಗಳ ಮನಮುಟ್ಟುವಂತೆ ಕರ್ಣಾನಂದಕರ ಸಂಗೀತದ ಸಭೆಯನ್ನು ನೀಡಿದ ಯಶಸ್ಸು ಸಂಗೀತಳದು.

ತನ್ನ ಮೂರನೇ ವಯಸ್ಸಿನಲ್ಲಿ ಶ್ರೀ ದಿಲ್‌ಶಾದ್ ಖಾನ್‌ರಿಂದ ಸಂಗೀತದ ದೀಕ್ಷೆಯನ್ನು ಪಡೆದ ಸಂಗೀತಳನ್ನು ಅವರ ಸತಿ ವಿಶ್ವವಿಖ್ಯಾತ ಸಂಗೀತಗಾರ್ತಿ ಶ್ರೀಮತಿ ಪರ್ವೀನ್ ಸುಲ್ತಾನರು ಶಿಷ್ಯೆಯನ್ನಾಗಿ ಸ್ವೀಕರಿಸಿದ್ದಾರೆ.

ಮೃದು, ಮಧುರ ಧ್ವನಿಯ ಆರೋಹ, ಅವರೋಹ, ರಾಗಸ್ವರಗಳನ್ನು ನಿಖರವಾಗಿ ಗುರುತಿಸಿ ಸುಲಭವಾಗಿ ಆಲಾಪಿಸುವ ಸಂಗೀತಳ ಪರಿ ಅದ್ಭುತವೇ ಸರಿ. ಪುರಂದರ ದಾಸರ ಕೀರ್ತನೆಗಳಲ್ಲಿ ಅತೀವ ಆಸಕ್ತಿಯಿರುವ ಸಂಗೀತಾ ಜಾನಪದ ಗೀತೆ, ಭಾವಗೀತೆ, ವಚನ ಹಾಗೂ ದಾಸರ ಭಜನೆಗಳನ್ನು ಸುಶ್ರಾವ್ಯವಾಗಿ ಹಾಡುವಳಲ್ಲದೇ ತಬಲಾ ವಾದನದಲ್ಲೂ ಪರಿಣತಿ ಸಾಧಿಸಿರುವಳು.

ಹತ್ತನೇ ತರಗತಿಯ ವಿದ್ಯಾರ್ಥಿನಿಯಾಗಿರುವ ಸಂಗೀತಾ ಈಗಾಗಲೇ ಕರ್ನಾಟಕದ ಅಷ್ಟೇ ಏಕೆ ಭಾರತದ ಹಲವೆಡೆ– ಹೈದರಾಬಾದ್, ಬಾಂಬೆ, ಮದ್ರಾಸ್ ಇತ್ಯಾದಿ ಮಹಾ ನಗರಗಳಲ್ಲಿ ಹಲವಾರು ಯಶಸ್ವೀ ಸಂಗೀತ ಕಚೇರಿಗಳನ್ನು ನಡೆಸಿಕೊಟ್ಟು ತನ್ನ ಕಲೆಯನ್ನು ಪ್ರಚುರ ಪಡಿಸಿರುವಳು.

ದೇಶ ವಿಖ್ಯಾತ ಕಲಾವಿಶಾರದರಾದ ಶ್ರೀಯುತ ಅನೂಪ ಝಲೋಟ್, ನಿಜಾಮುದ್ದೀನ್ ಖಾನ್, ವಸಂತ ಕನಕಾಪುರ, ಪ್ರಭಾಕರ ಕಾಲೇಕರ್, ಓಂಕಾರ ಗುಲ್ವಾಡಿ, ಹಲೀಂ ಜಾಫರ್ ಅಲೀಖಾನ್, ಮದನ್ ಮಿಶ್ರಾ, ದೊರೈಸ್ವಾಮಿ ಅಯ್ಯಂಗಾರ್, ಶ್ರೀಮತಿ ಗಂಗೂಬಾಯಿ ಹಾನಗಲ್, ಜಿ. ಶ್ಯಾಮಲಾ ಭಾವೆ, ನಿರ್ಮಲಾ ಮುಖರ್ಜಿ, ಅನುರಾಧಾ ಧಾರೇಶ್ವರರು ಸಂಗೀತಳು ಹರಿಸಿದ ಸಂಗೀತ ಸುಧೆಗೆ ಮನಸೋತು ಮನಸೋಕ್ತ ಹರಸಿದ್ದಾರೆ.

ಮಗಳ ಆಸಕ್ತಿಗೆ ಸರ್ವವಿಧದಲ್ಲೂ ಸಹಕರಿಸುತ್ತ, ಪ್ರೋತ್ಸಾಹ ನೀಡುತ್ತಿರುವ ತಂದೆ ಶ್ರೀ ರಾಮಾಚಾರ್ಯ ಕಾಖಂಡಕಿ ಹಾಗೂ ತಾಯಿ ಸೀತಾಬಾಯಿಯವರು ಅಭಿನಂದನೀಯರು. ಮುಂದಿನ ದಿನಗಳಲ್ಲಿ ಸಂಗೀತದ ಇನ್ನೊಂದು ಹೆಸರೇ ಸಂಗೀತಾ ಕಾಖಂಡಕಿ ಎನ್ನುವಂತಾಗಲಿ. **–ಅನುಪಮಾ ಜಗದೀಶ ದುದ್ದಿ**

''ದೆಹಲಿಯಲ್ಲಿ ಯಾರಾದರೂ ಸ್ಟೇಷನ್ನಿಗೆ ಬಂದಿರುತ್ತಾರಾ?''

''ಹ್ಞು, ನನ್ನ ಭಾವನ ಅಣ್ಣ ಅಲ್ಲಿಯೇ ಇದ್ದಾರೆ. ಅವರಿಗೆ ಸ್ಟೇಷನ್ನಿಗೆ ಬರುವಂತೆ ಕಾಗದ ಬರೆದಿದ್ದೇನೆ''

''ಭಾವ ಎಂದರೆ ಅಕ್ಕನ ಗಂಡ ಅಲ್ಲವಾ. ನಿಮ್ಮ ಅಕ್ಕ ಭಾವ ಎಲ್ಲಿದ್ದಾರೆ?''

''ನಮ್ಮಕ್ಕ ನಮ್ಮೊಡನೆಯೇ ಇದ್ದಾಳೆ. ನಮ್ಮ ಭಾವ ಕ್ಯಾನ್ಸರ್‌ನಿಂದ ತೀರಿಹೋದರು. ಅಂದಿನಿಂದ ನಮ್ಮ ಮನೆಯಲ್ಲೇ ಇದ್ದಾಳೆ. ಆಗಲೇ ಮೂರೋ ನಾಲ್ಕೋ ವರ್ಷಗಳಾಯಿತು. ಚಿಕ್ಕ ಮಗನಿದ್ದಾನೆ. ಅದನ್ನು ನೋಡಿಕೊಂಡು ಇದ್ದಾಳೆ.

ವಾಸಂತಿಯ ಮುಗುಳ್ನಗುವೂ ಮಾಸಿತ್ತು. ಆದರೂ ಕೇಳಿದಳು.

''ನಿಮ್ಮಕ್ಕ ಎಲ್ಲಾದರೂ ಕೆಲಸ ಮಾಡುತ್ತಿದ್ದಾರಾ?''

''ಹ್ಞು. ನಮ್ಮ ಭಾವನ ಆಫೀಸಿನಲ್ಲಿಯೇ ಅವಳಿಗೂ ಕೆಲಸ ಸಿಕ್ಕಿದೆ''

''ಅವರಿಗೂ ಇನ್ನೂ ಸಣ್ಣ ವಯಸ್ಸೇ ಅಲ್ಲವಾ? ನೀವೇಕೆ ಅವರಿಗೆ ಮತ್ತೊಮ್ಮೆ ಮದುವೆ ಮಾಡಬಾರದು?''

ವತ್ಸಲಾ ಪ್ರತಿಯಾಗಿ ಏನೂ ಹೇಳಲಿಲ್ಲ. ಈ ವಾಸಂತಿ ಹೇಳುವಷ್ಟು ಸುಲಭವಾಗಿ ಮತ್ತೊಮ್ಮೆ ಅವಳ ಮದುವೆ ಬಗ್ಗೆ ಯೋಚಿಸುವುದು. ತನಗೇ ಅದರಲ್ಲಿ ನಿರಾಸಕ್ತಿ. ಮತ್ತೆ ಸರಳಾ ಅಷ್ಟು ಸುಲಭವಾಗಿ ಒಪ್ಪುತ್ತಾಳಾ? ಅವಳನ್ನು ಒಮ್ಮೆ ಕಂಡವರಿಗೆ ಹಾಗೆ ಪ್ರಶ್ನಿಸುವ ಧೈರ್ಯವೂ ಸಹ ಬಾರದು. ಆದರೂ ವಾಸಂತಿ ಹೇಳುವುದೂ ಸರಿ ಅನಿಸುತ್ತದೆಯಲ್ಲವಾ? ಅರೆ! ತಾನೇಕೆ ಇದರ ಬಗ್ಗೆ ಯೋಚಿಸಲಿಲ್ಲ. ಶುದ್ಧ ಬೆಪ್ಪು. ವಾಸಂತಿ ಹೇಳಿದ ಮೇಲೇ ತಲೆಗೆ ಹೊಳೆಯುತ್ತಿರುವಂತೆ ಈಗ ಯೋಚಿಸುತ್ತಿದ್ದೇನೆ. ಅಪ್ಪ ಬದುಕಿದ್ದಾಗಲೇ ತಾನು ಹೇಳಬಹುದಾಗಿತ್ತಲ್ಲವೆ? ಈಗಲೂ ಅಮ್ಮನಿಗೆ ಸರಳಾಗೆ ಮದುವೆ ಮಾಡುವಂತೆ ಹೇಳಲೇ? ''ಹೋಗೆ – ಹೋಗೆ. ಮದುವೆ ಮಾಡಿಕೊಳ್ಳಬೇಕಾದವಳು – ಇವಳಿಗೇ ಅದು ಬೇಡವಂತೆ. ಇನ್ನು ಮಗುವನ್ನು ಹೊತ್ತು ಹೆತ್ತಿರುವ ಅವಳಿಗೆ ಮದುವೆ ಮಾಡಿಸುತ್ತಾಳಂತೆ'' ಎಂದು ಗದರಿಸದೇ ಬಿಡರು. ತಮ್ಮನನ್ನು ಕೇಳಲೇ? ಅದರಿಂದ ಏನೂ ಪ್ರಯೋಜನವಿಲ್ಲ. ಸರಳೆಯ ಮದುವೆ ಮಾಡಿಸಿ ದೊಡ್ಡವ ಎನಿಸಿಕೊಳ್ಳುವಂತಹ ವ್ಯಕ್ತಿಯಲ್ಲ ಅವನು. ಅವನಿಗೆ ಬೇಕಾಗಿರುವುದು ತನ್ನ ದಾರಿ ಸುಗಮಗೊಳಿಸಿಕೊಳ್ಳುವ ವಿಧಾನ. ಇದುವರೆವಿಗೂ ನನ್ನ ಮದುವೆಗಾಗಿ ಕಾಯುತ್ತಿದ್ದುದು ಸಂಪ್ರದಾಯದ ಔದಾರ್ಯಕ್ಕೆ ಕಟ್ಟುಬಿದ್ದು. ತನ್ನ ನಿಶ್ಚಯ ದೃಢವಾಗಿ ನಿಂತಿದ್ದರಿಂದ, ಅವನಿಗೆ ಈಗಾಗಲೇ ಮದುವೆ ಗೊತ್ತಾಗಿದೆ. ಸಾಕಷ್ಟು ವಿದ್ಯಾವಂತೆ, ರೂಪವಂತೆ, ಶ್ರೀಮಂತೆಯಾದ ಹುಡುಗಿಯನ್ನು ಅವನು ಮದುವೆಯಾಗಲು ಒಪ್ಪಿದ್ದಾನೆ. ಮುಂದಿನ ಚೈತ್ರ ಮಾಸದಲ್ಲಿ ಅವರ ವಿವಾಹವಾಗಲಿದೆ.

ಹೇಗಾದರೂ ವಾಸಂತಿ ಹೇಳಿದ ಸಲಹೆಯನ್ನು ತಳ್ಳಿ ಹಾಕುವಂತಿಲ್ಲ. ಮನೆಗೆ ಹೋದ ನಂತರ ಅಕ್ಕನ ಅಭಿಪ್ರಾಯವನ್ನು ಕೇಳಬೇಕು. ಅವಳು ವಿರೋಧಿಸದಿದ್ದರೆ ತಮ್ಮನ ವಿವಾಹ ನೆರವೇರಿದ ನಂತರ ಅವಳದನ್ನು ಮಾಡಬೇಕು.

ವಾಸಂತಿಯ ಗಂಡ ಚಕ್ಕುಲಿ ತಿಂದು ಮುಗಿಸಿದ್ದುದರಿಂದ ವಾಸಂತಿ ತಮ್ಮ ಪಾಲಿನ ಒಂದು ಚೂರನ್ನೂ ಆತನಿಗೇ ನೀಡಿದರು. ಅವರನ್ನು ನೋಡುತ್ತಿದ್ದ ವತ್ಸಲೆಗೆ ಅವರಿಬ್ಬರೂ ಸಂತೋಷವಾಗಿದ್ದಾರೆಯೇ ಅಥವಾ ಇಲ್ಲವೇ ಎಂಬ ಸಂದೇಹ ಕಾಡತೊಡಗಿತು. ಅದರ ಬಗ್ಗೆ ಕೇಳುವುದು ಕೊಂಚ 'ಅಧಿಕಪ್ರಸಂಗಿತನ'ವೇ ಆದರೂ ಕೇಳಿದಳು.

"ನೀವು ಈ ವಯಸ್ಸಿನಲ್ಲಿ ಮದುವೆ ಮಾಡಿಕೊಂಡಿದ್ದೀರಲ್ಲ. ನಿಜವಾಗಿಯೂ ನಿಮಗೆ ಸಂತೋಷವಿದೆಯೇ?"

"ವಿವಾಹ ಮಾಡಿಕೊಂಡವರು ಹೇಗೆ ಸುಖವಾಗಿದ್ದೇವೆ ಅಂದುಕೊಳ್ಳುತ್ತಾರೋ ಹಾಗೆಯೇ ನಾವೂ ಸುಖವಾಗಿದ್ದೇವೆ ಅಂದುಕೊಂಡಿದ್ದೇವೆ"

ಪಕ್ಕದಲ್ಲಿ ಕುಳಿತಿದ್ದ ವಾಸಂತಿಯ ಗಂಡನಿಗೆ ತಾವು ಮಾತನಾಡುವುದೆಲ್ಲಾ ಚೆನ್ನಾಗಿ ಅರ್ಥವಾಗುತ್ತಿರಲಿಲ್ಲ ಎಂದು ವತ್ಸಲೆಗೆ ತಿಳಿದುಹೋಗಿತ್ತು. ಆದರೂ ತಗ್ಗಿದ ದನಿಯಲ್ಲೇ ಕೇಳಿದಳು.

"ಆ ದಿನ ನೀವು ವಿವಾಹವಾಗುತ್ತೇನೆಂದು ಬೇರೊಬ್ಬರನ್ನು ತೋರಿಸಿದ ನೆನಪಿದೆ"

ಆ ಪ್ರಶ್ನೆ ವಾಸಂತಿಗೆ ಅಪ್ರಿಯವೆನಿಸಿರಬೇಕು. ಒಂದು ಕ್ಷಣ ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡರು. ಮತ್ತೆ ಹೇಳಿದರು.

"ಓ, ಅದಾ, ಅವನಿಗೆ ನನ್ನ ದುಡ್ಡಿನ ಮೇಲೆ ಕಣ್ಣಿದೆ ಅಂತ ಅನಿಸಿತು. ಸುಮ್ಮನೇ ದುಡ್ಡಿನಿಂದ ಮಜಾ ಮಾಡುವುದಕ್ಕೆ ನನ್ನನ್ನು ಮದುವೆಯಾಗಲು ತಯಾರಾಗಿದ್ದಾನೆ ಅನಿಸಿತು. ಅದಕ್ಕೇ ಅವನನ್ನು ಬಿಟ್ಟು ಬಿಟ್ಟೆ"

'ನಿಮ್ಮಂತಹ ವಯಸ್ಸಾದ ಹೆಂಗಸನ್ನು ದುಡ್ಡಿನಾಸೆಗಲ್ಲದೆ ಇತರ ಕಾರಣಕ್ಕೆ ಮದುವೆ ಮಾಡಿಕೊಳ್ಳುವ ಮೂರ್ಖ ಗಂಡಸು ಇರುತ್ತಾನೇನು?' ಎಂದು ಕೇಳಬೇಕು ಅನಿಸಿತು ಅವಳಿಗೆ. ಅಥವಾ 'ಈಗ ಮದುವೆಯಾಗಿರುವ ಈ ಗಂಡಸಾದರೂ ನಿಮ್ಮ ಹಣವನ್ನು ಆಸೆ ಪಡುತ್ತಿಲ್ಲ ಎಂದು ಹೇಗೆ ಹೇಳುತ್ತೀರಿ' ಎಂದು ಕೇಳಬೇಕು ಅನಿಸಿತು. ಆಕೆ ತನ್ನ ಸಂಬಂಧಿಯಲ್ಲ ಅಥವಾ ಆಪ್ತ ಗೆಳತಿಯಲ್ಲ. ಕೇವಲ ಮೂರು ತಿಂಗಳಿನ ಪರಿಚಯದಿಂದ ತನ್ನ ಹಿತೈಷಿ ಎಂದೂ ಹೇಳಿಕೊಳ್ಳಲು ಬರುವಂತಿಲ್ಲ. ತಾವು ತೆಗೆದುಕೊಂಡ ನಿರ್ಧಾರದ ಒಳಿತು–ಕೆಡುಕುಗಳನ್ನು ಆಕೆ ತಾವೇ ಅನುಭವಿಸುತ್ತಾರೆ. ತನಗೇಕೆ ಬೇಕಿದೆ ಅದರ ಗೊಡವೆ ಎಂದು ಮನಸ್ಸು ತರ್ಕ ಮಾಡಿದ್ದರಿಂದ ವತ್ಸಲ ಮತ್ತೆ ಮೌನಿಯಾದಳು. ಆದರೆ ವಾಸಂತಿ ಮತ್ತೆ ಕೇಳಿದರು.

"ಆಗ ನೀವು ಮತ್ತೆ ಬರುತ್ತೇನೆಂದು ಹೇಳಿ ಹೋಗಿದ್ದಿರಿ. ಬರಲೇ ಇಲ್ಲ. ಕೆಲಸ ಬಿಟ್ಟರೆಂದು ನಿಮ್ಮ ಸ್ನೇಹಿತೆ ಹೇಳಿದಳು"

"ಬೇರೆ ಕೆಲಸ ಸಿಕ್ಕುವಂತಿತ್ತು. ನಮ್ಮ ತಾಯಿ ಹೋಗುವುದು ಬೇಡ ಎಂದರು" ಎಂದಳು ವತ್ಸಲ.

ತನ್ನ ತಾಯಿ ತಾನು ಇಳಿದುಕೊಂಡಿದ್ದ ಸ್ಥಳ ಚೆನ್ನಾಗಿಲ್ಲವೆಂದು ಹೆದರಿ ಬೇರೆ ಕೆಲಸ ಸಿಕ್ಕಿದೆ ಎಂದು ಸುಳ್ಳು ಬರೆಸಿ ತನ್ನನ್ನು ಕರೆಸಿಕೊಂಡರು ಎಂದು ವತ್ಸಲ ಹೇಳಲಿಲ್ಲ.

"ಈಗೇನು ಮಾಡುತ್ತಿದ್ದೀರಿ?" –ವಾಸಂತಿ ಕೇಳಿದರು.

"ಸುರಪುರಿಯಲ್ಲೇ ಒಂದು ಪ್ರೈವೇಟ್ ಸ್ಕೂಲ್‌ನಲ್ಲಿ ಟೀಚರಾಗಿದ್ದೀನಿ. ಒಂದು ತಿಂಗಳು ರಜವಿದೆ. ಅದನ್ನು ಊರುಸುತ್ತಿ ಕಳೆಯೋಣ ಎಂದು ಹೊರಟಿದ್ದೀನಿ"

ವತ್ಸಲ ಹೇಗೋ ಧೈರ್ಯ ಮಾಡಿ ಹೊರಟುಬಿಟ್ಟಿದ್ದಳು. ಈಗ ಅವಳನ್ನು ಯಾವುದಕ್ಕಾದರೂ ಅಡ್ಡಿ ಪಡಿಸುವವರು ಯಾರೂ ಇಲ್ಲ. ಎಲ್ಲ ಅವಳ ಇಚ್ಛೆಗೇ ಬಿಟ್ಟಿದೆ. ಎಲ್ಲಾ ಅವಳು ಹೇಳಿದಂತೆ ನಡೆಯುತ್ತದೆ. 'ಚಿಕ್ಕವಳು ಎಂದು ತಲೆಯ ಮೇಲೆ ಏರಿಸಿಕೊಂಡು ಮೆರೆಸಿದಿರಿ. ಈಗ ಅನುಭವಿಸಿ' ಎಂದು ತಾಯಿ ತಂದೆಯ ಬಳಿ ಹಂಗಿಸಿ ಹೇಳುತ್ತಿದ್ದುದು ನೆನಪಿಗೆ ಬರುತ್ತದೆ. "ಹೀಗೇ ಎಲ್ಲರನ್ನೂ ಧಿಕ್ಕರಿಸಿ ಮಾತಾಡುತ್ತಾ ಇರು; ಒಂದಲ್ಲ ಒಂದು ದಿನ ನಿನಗೇ ಅಮ್ಮ ಹೇಳಿದ ಮಾತು ಕೇಳಬೇಕಿತ್ತು' ಎಂದು ತಿಳಿಯುತ್ತದೆ" ಎಂದ ಮಾತು ನೆನಪಿಗೆ ಬರುತ್ತದೆ. ಇವರೆಲ್ಲಾ ಹೀಗಾಡುವುದಕ್ಕೆ ತಾನೇನು ತಪ್ಪು ಮಾಡಿದೆ? ಮೊದಲಿನಿಂದಲೂ ಅಷ್ಟೆ. ನನ್ನ ಇಚ್ಛೆಗೆ ವಿರುದ್ಧವಾಗಿ ಮಾತನಾಡುತ್ತಿದ್ದರು. ತಾನು ಪ್ರತಿಭಟಿಸುತ್ತಿದ್ದೆ. ಸುರಳಾನಂತೆ ವಿಜ್ಞಾನ ಓದು ಅಂದರು. ಬೇಡ – ಆರ್ಟ್ಸ್ ತೆಗೆದುಕೊಂಡು ಓದುತ್ತೇನೆ ಅಂದೆ. ಬಿ.ಎ. ಮುಗಿದ ನಂತರ ಕನ್ನಡ ಸಾಹಿತ್ಯದಲ್ಲಿ ಎಂ.ಎ ಮಾಡುತ್ತೇನೆ ಅಂದೆ. ಇಂಗ್ಲೀಷ್ ಮಾಧ್ಯಮದಲ್ಲಿ, ಓದಿದ ತನಗೆ ಕನ್ನಡ ಸಾಹಿತ್ಯದಲ್ಲಿ ಎಂ ಎ ಮಾಡಿಕೊಳ್ಳುವುದು ಸ್ವಲ್ಪ ಪ್ರಯಾಸದ ಕೆಲಸವೇ ಆಯಿತು ಅಷ್ಟೆ. ಎಂಎಸ್‌ಸಿ ಪಾಸು ಮಾಡಿ ಸಂಗೀತವನ್ನು ಚೆನ್ನಾಗಿ ಕಲಿತ ಸುರಳಾಗಿಂತ ತಾನು ಸ್ವಲ್ಪ ಕಡಿಮೆ ಯೋಗ್ಯತೆಯವಳಾದೆ ಎಂದು ತಾಯಿ ಕೋಪಿಸಿಕೊಂಡರು. ಓದು ಮುಗಿದ ನಂತರವೂ 'ಕೆಲಸಕ್ಕೆಂದು ಊರ ಹೊರಗೆಲ್ಲಾ ಒಬ್ಬಳೇ ಓಡಾಡಬೇಡ' ಅಂದರು. ಓಡಾಡಿದೆ. ಅದರಲ್ಲಿ ತಪ್ಪೇನು?' ಎಷ್ಟು ಜನ ಹಾಗೆ ಮಾಡುವುದಿಲ್ಲ? ಅದೂ ಈಗಿನ ಕಾಲದಲ್ಲಿ. ಈಗಲೂ ಸಹ 'ಜೊತೆಗೆ ಮುರಳಿ ಇಲ್ಲದೆ ಹೋಗಬೇಡ' ಎಂದರು. ತಾಯಿಯ ಮಾತನ್ನು ನಿರಾಕರಿಸಿ ಬಂದುಬಿಟ್ಟೆ.

"ಆಗಲೇ ನಿಜಾಮುದ್ದೀನ್ ಬಂದಾಯಿತು. ಇನ್ನೇನು ಕಾಲುಗಂಟೆಯಲ್ಲಿ ನವದೆಹಲಿ ಸ್ಟೇಷನ್ನನ್ನು ಮುಟ್ಟಿ ಬಿಡುತ್ತೇವೆ" – ವಾಸಂತಿ ಜೋರಾಗಿ ಹೇಳುತ್ತಾ ತಮ್ಮ ಚೆದುರಿದ್ದ ಸಾಮಾನುಗಳನ್ನು ಸೂಟ್‌ಕೇಸಿನಲ್ಲಿರಿಸಿ, ಸಾಮಾನುಗಳನ್ನು ಕೆಳಗಿಳಿಸಲು ಸಿದ್ಧಪಡಿಸತೊಡಗಿದರು.

ವತ್ಸಲ ತಾನು ಸೂಟ್‌ಕೇಸನ್ನು ಭದ್ರವಾಗಿ ಮುಚ್ಚಿದೆಯೋ ಇಲ್ಲವೋ ಎಂದು ಪರೀಕ್ಷಿಸಿ ಸೀಟಿನ ಮೇಲೆ ಎತ್ತಿರಿಸಿದಳು. ಕೊಂಚ ಆತಂಕದಿಂದ ಅವಳ ಎದೆ ಡವಗುಟ್ಟಲು ಪ್ರಾರಂಭಿಸಿತ್ತು. ಭಾವನ ಅಣ್ಣ ನಾರಾಯಣರಾಯರು ಸ್ಟೇಷನ್ನಿಗೆ ಒಂದು ವೇಳೆ ಬಾರದೆ ಹೋದರೆ ಎಂಬ ಭಯ ಆಕ್ರಮಿಸಿತು. ತಮ್ಮನೇನೋ ಟೆಲಿಗ್ರಾಂ ಕಳುಹಿಸುತ್ತೇನೆ ಎಂದು ಹೇಳಿದ. ಅದು ತಲುಪಿರುತ್ತದೋ ಇಲ್ಲವೋ? ಎಂಬ ಶಂಕೆ ಮೂಡಿತು. 'ಹೇಗೂ ಮುರಳಿ ಜೊತೆಗೆ ಇದ್ದೇ ಇರುತ್ತಾನಲ್ಲಾ' ಅಂತ ಅವರೇನಾದರೂ ಬಾರದೆ ಉಳಿದರೆ ಏನು ಮಾಡುವುದು? ಹೊಸ ಊರು, ಅಭ್ಯಾಸ ಬಲವಿಲ್ಲದ ಮಾತು. ಹೇಗೆ ನಿಭಾಯಿಸುವುದು ಅನಿಸಿತು. ವಾಸಂತಿಯ ಸಹಾಯ ಬೇಕಾಗಲೂಬಹುದು ಅಂದುಕೊಂಡು ಕೇಳಿದಳು.

"ಕ್ಷಮಿಸಿ ಆಂಟಿ, ನೀವು ನನ್ನ ಜೊತೆ ಒಂದೈದು ನಿಮಿಷ ಇರ್ತೀರಾ? ಸ್ಟೇಷನ್ನಿಗೆ ಯಾರಾದ್ರೂ ಬಂದಿರ್ತಾರೋ ಇಲ್ಲವೋ ನೋಡಬೇಕು"

"ಏನೂ ಹೆದರಬೇಡಿ. ನಿಮ್ಹತ್ರ ಅವರ ಮನೆಯ ವಿಳಾಸವಿದೆ ತಾನೆ? ಸ್ಟೇಷನ್ನಿಗೆ ಬಾರದಿದ್ದರೆ ನಿಮ್ಮನ್ನು ಮನೆಯವರೆಗೂ ತಲುಪಿಸಿ ಹೋಗ್ತೇವೆ. ಹೇಗೂ ನಾವು ಇಲ್ಲೇ 10–15 ದಿನಗಳ ಕಾಲ ಇರ್ತೇವೆ. ಯಾವುದೂ ಗಡಿಬಿಡಿ ಇಲ್ಲ" ವಾಸಂತಿ ಅಂದರು.

ಆಕೆ ಅದೇ ಮಾತನ್ನು ಗಂಡನಿಗೂ ಹೇಳಿದರು. ಆತನ ಹಾವಭಾವದಲ್ಲಿ ಒಪ್ಪಿಗೆ ಇದೆ ಎಂದು ಅರ್ಥವಾಯಿತು ವತ್ಸಲೆಗೆ. ಪರವಾಗಿಲ್ಲ; ಒಳ್ಳೆಯ ಸ್ವಭಾವದ ಹೆಂಗಸು. ತಾನು ವಿವರವಾಗಿ ಕೇಳುವುದಕ್ಕೆ ಮೊದಲೇ ತನ್ನನ್ನು ಮನೆಗೆ ಕರೆದೊಯ್ಯುವ ಆಶ್ವಾಸನೆಯನ್ನು ತೋರಿಸಿದರು ಎಂದುಕೊಳ್ಳುತ್ತಾ ಕೃತಜ್ಞತೆಯಿಂದ 'ಥ್ಯಾಂಕ್ಸ್' ಎಂದಳು. ಎಲ್ಲರ ಕಣ್ಣುಗಳೂ ನಿಲ್ದಾಣವನ್ನು ಎದುರು ನೋಡುತ್ತಿದ್ದವು.

–(ಸಶೇಷ)

### ಕಾರಣ?!!

ಒಂದು ದಿನ ಇವರ ಗೆಳೆಯ ತಮ್ಮ ಪುಟ್ಟ ಮಗಳೊಡನೆ ನಮ್ಮ ಮನೆಗೆ ಬಂದಿದ್ರು. ಅದೂ ಇದೂ ಹರಟೆ ಹೊಡೀತಾ... 'ನಾನು ಕಲರ್ ಟಿ.ವಿ. ದೀಪಾವಳಿಗೆ ತಗೋಬೇಕೂಂತ ಇದ್ದೀನಿ. ನೀನು ಸ್ವಲ್ಪ ಆಗ ಜತೆಗೆ ಬಾರಯ್ಯ ಸೆಲೆಕ್ಟ್ ಮಾಡೋದಿಕ್ಕೆ' ಅಂದರು.

'ಯಾವ ಟಿ.ವಿ. ತಗೊಬೇಕೂಂತಿದೀಯಾ? ಇವರು ಕೇಳಿದರು.

'ನೀನೇ ಸಲಹೆ ಕೊಡಪ್ಪಾ, ನನ್ಗೇನೂ ಗೊತ್ತಾಗೋಲ್ಲಾಂತ' ಅವರಂದಾಗ, 'ಬಿ.ಪಿ.ಎಲ್. ತಗೋ ಚೆನ್ನಾಗಿದೆ ಚಿತ್ರ ಸ್ಫುಟವಾಗಿ ಕಾಣುತ್ತೆ' ಅಂತ ಇವರು ಸಲಹೆ ನೀಡಿದರು. ಅಷ್ಟರಲ್ಲೇ ಅವರ ಮಗಳು 'ಬೇಡಪ್ಪಾ, ಬಿ.ಪಿ.ಎಲ್. ತಗೋಬೇಡ. ನಿನಗ್ಗೊತ್ತಿಲ್ವಾ?' ಅಂದ್ಲು. ಏಕೆ? ಏನು? ಎಂದು ಕೇಳಿದಾಗ ನಾವು, 'ಅವಳು ಹೇಳಿದ ಉತ್ತರ ಇದು. ಬಿ.ಪಿ.ಎಲ್ ತಗೋಬೇಕಾದ್ರೆ 2 ಟಿ.ವಿ. ತಗೋಬೇಕಾಗುತ್ತೆ. ಒಂದು ತಗೊಂಡ್ರೆ ಏನೂ ಉಪಯೋಗವಿಲ್ಲ. 2 ಟಿ.ವಿ. ತಗೊಂಡ್ರೇನೇ... 1 ಮೊಲದ ಚಿತ್ರ ಪೂರ್ತಿ ಕಾಣ್ಸೋದು. ನನ್ನ ಫ್ರೆಂಡ್ ರಮಾ ಮನೇಲಿ ನೋಡ್ತೀನಲ್ಲಾ ನಾನು... ಅಡ್ವರ್‌ಟೈಸ್ ತೋರಿಸ್ತಾರಲ್ಲಾ ಆಗ, ನೀವುಗಳು ನೋಡಿಲ್ವಾ?! ನೋಡಿ ಬೇಕಾದ್ರೆ 2 ಟಿ.ವಿ. 'ಸೇರಿ 1 ಮೊಲದ ಪೂರ್ತಿ ಚಿತ್ರ ಕಾಣ್ಸುತ್ತೆ. ಒಂದೊಂದು ಟಿ.ವಿ.ನಲ್ಲಿ 1/2 1/2 ಮೊಲದ ಚಿತ್ರ ಬರುತ್ತೆ. 2 ಟಿ.ವಿ. ಪಕ್ಕ ಪಕ್ಕ ಇಟ್ಟಾಗಲೇ ಪೂರ್ತಿ ಚಿತ್ರ ಕಾಣ್ಸೋದು. 2 ಟಿ.ವಿ. ತಗೊಳ್ಳೋಕೆ ಅಷ್ಟೊಂದು ಹಣ ನಮ್ಹತ್ರ ಎಲ್ಲಿ ಪಪ್ಪಾ? ಅಂದಾಗ ಅವಳ ಮುಂದಾಲೋಚನೆಗೆ ಬೆರಗಾಗಿ ನಕ್ಕಿದ್ದೇ ನಕ್ಕಿದ್ದು.

–ಲೀಲಾ ಚಂದ್ರಶೇಖರ್, ನಾಸಿಕ್
ಮಹಾರಾಷ್ಟ್ರ

# ಮೈಸೂರಿನಲ್ಲಿ ವಿಶ್ವ ಪ್ರವಾಸೋದ್ಯಮ ದಿನಾಚರಣೆ





ಈ ಬಾರಿಯ ವಿಶ್ವ ಪ್ರವಾಸೋದ್ಯಮ ದಿನಾಚರಣೆಯನ್ನು ಮೈಸೂರಿನಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು.

ಮಾನವೀಯ ಸಂಬಂಧಗಳ ವೃದ್ಧಿಗಾಗಿ ಏರ್ಪಡಿಸಲಾಗಿದ್ದ ವಿಶ್ವ ಪ್ರವಾಸೋದ್ಯಮ ದಿನಾಚರಣೆಯ ಅಂಗವಾಗಿ ಸೆಪ್ಟೆಂಬರ್ 27ರ ಬೆಳಿಗ್ಗೆ ರಂಗು ರಂಗಿನ ಮೆರವಣಿಗೆಯೊಂದನ್ನು ಆಯೋಜಿಸಲಾಗಿತ್ತು. ಈ ಮೆರವಣಿಗೆಯಲ್ಲಿ ನಗರದ ವಿವಿಧ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳು, ಬ್ಯಾಂಡ್ ವೃಂದದವರು, ನಾಗಸ್ವರ ವೃಂದದವರು, ಕ್ರೀಡಾ ಹಾಸ್ಟೆಲ್‌ನ ವಿದ್ಯಾರ್ಥಿಗಳು, ವಿವಿಧ ಹೋಟೆಲ್‌ಗಳ ಸಿಬ್ಬಂದಿ ವರ್ಗದವರು,



ಪ್ರವಾಸೋದ್ಯಮ ಇಲಾಖೆಯ ಹಿರಿಯ ಉಪ ನಿರ್ದೇಶಕ ಎ.ಆರ್. ರಂಗಸ್ವಾಮಿ ಮತ್ತಿತರ ಸಿಬ್ಬಂದಿ ವರ್ಗದವರು ಪಾಲ್ಗೊಂಡಿದ್ದರು.









ನಗರದ ಪ್ರಮುಖ ಆಕರ್ಷಣೆಯಾದ ದಸರಾ ಆನೆಗಳೊಂದಿಗೆ ಸಾಗಿದ ಈ ವೈವಿಧ್ಯಮಯ ಮೆರವಣಿಗೆಯು ಮೈಸೂರಿನ ಪ್ರಮುಖ ಬೀದಿಗಳಲ್ಲಿ ಪ್ರವಾಸೋದ್ಯಮ ಘೋಷಣೆಗಳನ್ನೊಳಗೊಂಡ ಫಲಕಗಳೊಂದಿಗೆ ಸಾಗಿತು.

ವಿದೇಶೀ ಪ್ರವಾಸಿಗಳಿಗೆ ಭಾರತದ ಭವ್ಯ ಪರಂಪರೆ ಮತ್ತು ಸ್ಥಳೀಯ ಜನರಲ್ಲಿ ಪ್ರವಾಸೋದ್ಯಮ ಹಾಗೂ ಭಾವೈಕ್ಯತೆಯ ಬಗ್ಗೆ ಜಾಗೃತಿ ಮೂಡಿಸಲು ವಿಶ್ವ ಪ್ರವಾಸೋದ್ಯಮ ದಿನದಂದು ಮೈಸೂರಿನ ಹೋಟೆಲ್ ಸದರನ್ ಸ್ಟಾರ್‌ನಲ್ಲಿ ವರ್ಣಮಯ 'ಸಾಂಸ್ಕೃತಿಕ ಸಂಜೆ'ಯನ್ನು ಏರ್ಪಡಿಸಲಾಗಿತ್ತು.

ಸಾಂಸ್ಕೃತಿಕ ಸಂಜೆಯ ಅಂಗವಾಗಿ ಶ್ರೀರಂಗಪಟ್ಟಣ ಸಹೋದರಿಯರಿಂದ ಕರ್ನಾಟಕ ಸಂಗೀತ (ಹಾಡುಗಾರಿಕೆ) ಎಂ.ಜಿ. ನರಹರಿ ಮತ್ತು ವೃಂದದವರಿಂದ ಶಾಸ್ತ್ರೀಯ ವಾದ್ಯವೃಂದ, ಹತ್ತರಿಂದ ಹದಿನಾರು ವರ್ಷ ವಯಸ್ಸಿನ ಮಕ್ಕಳಿಗಾಗಿ ವಿವಿ ವೇಷ ಸ್ಪರ್ಧೆಯನ್ನು





ಏರ್ಪಡಿಸಲಾಗಿತ್ತು.

ಒನಕೆ ಓಬವ್ವ, ಟಿಪ್ಪೂ ಸುಲ್ತಾನ್, ಶಕುಂತಲೆ, ಕಾವೇರಿ ಮಾತೆ, ಕೊಡಗಿನ ಸ್ತ್ರೀ, ರೊಬೊಟ್, ಕಾಡು ಮನುಷ್ಯ, ಚಾರ್ಲಿ ಚಾಪ್ಲಿನ್, ಸ್ವಾಮಿ ವಿವೇಕಾನಂದರ ವೇಷ ಧರಿಸಿದ್ದ ಮಕ್ಕಳು ಸಭಿಕರನ್ನು ರಂಜಿಸಿದರು.

ಭಾರತದ ಅಂತರರಾಷ್ಟ್ರೀಯ ವ್ಯಾಪಾರ ಸಂಸ್ಥೆ (ಐ.ಐ.ಟಿ.ಸಿ.)ಯ ವಿದ್ಯಾರ್ಥಿಗಳು ಕೊಂಕಣಿ ಭಾಷೆಯ ಜನಪದ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿ ಶ್ರೋತೃಗಳನ್ನು ಗೋವೆಯ ಕಡಲತೀರದ ಭಾವನಾ ಲೋಕದಲ್ಲಿ ವಿಹರಿಸುವಂತೆ ಮಾಡಿದರೆ, ಮೈಸೂರಿನ ರಾಯಲ್ ಶಾಲೆಯ ನಾಲ್ಕನೇ ತರಗತಿಯ ಕಿಶೋರಿ ಕು। ವೇದಶ್ರೀ ಸುಲಲಿತವಾಗಿ 'ಸಿತಾರ್' ನುಡಿಸಿ "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು'' ಎಂಬ ಗಾದೆ ಮಾತು ಅಕ್ಷರಶಃ ಸತ್ಯ ಎಂದು ಸಭೆಗೆ ಮನನ ಮಾಡಿಕೊಟ್ಟಳು.

ಉತ್ತರ ಭಾರತದ ಕಲೆ, ಸಂಸ್ಕೃತಿಯನ್ನು ಪರಿಚಯಿಸುವ ಸಲುವಾಗಿ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿಯ ವಿದ್ಯಾರ್ಥಿಗಳು ಪಂಜಾಬಿನ 'ಭಾಂಗ್ಡಾ' ನೃತ್ಯವನ್ನು ಪ್ರದರ್ಶಿಸಿ ಪ್ರೇಕ್ಷಕರೂ ತಮ್ಮೊಡನೆ ಚಪ್ಪಾಳೆ ತಟ್ಟಿ ಭಾವನಾತ್ಮಕ ಪ್ರಪಂಚದಲ್ಲಿ ತೇಲುವಂತೆ ಮಾಡಿದರೆ, ಐ.ಐ.ಟಿ.ಸಿ.ಯ ಕು. ಮೋನಿಕಾ ರಾಜಸ್ಥಾನೀ ನೃತ್ಯದೊಂದಿಗೆ ಸಭಿಕರ ಮೆಚ್ಚುಗೆಗೆ ಪಾತ್ರರಾದರು.

ಸಮಾರಂಭದ ಪ್ರಮುಖ ಕಾರ್ಯಕ್ರಮವಾದ "ಜನರ ಸಾಂಪ್ರದಾಯಿಕ ವೇಷಭೂಷಣ ಸ್ಪರ್ಧೆ" ಭಾರತೀಯ ಸಂಸ್ಕೃತಿ ಮತ್ತು ಪರಂಪರೆ ಎಷ್ಟು ವೈವಿಧ್ಯಮಯವಾದದ್ದೆಂಬುದನ್ನು ಸಭೆಗೆ ಮನವರಿಕೆ ಮಾಡಿತು.

ಈ ಸ್ಪರ್ಧೆಯಲ್ಲಿ ಮೈಸೂರು ಪೇಟ, ಹಣೆಯಲ್ಲಿ ತಿಲಕ, ಶುಭ್ರ ಶ್ವೇತವರ್ಣದ ಕಚ್ಚೆ, ಪಂಚೆ, ಜುಬ್ಬ ಮತ್ತು ಶಲ್ಯದೊಂದಿಗೆ ಅಚ್ಚ ಕನ್ನಡಿಗರ ವೇಷ–ಭೂಷಣಗಳೊಂದಿಗೆ ವೇದಿಕೆಯನ್ನು ಪ್ರವೇಶಿಸಿದ ನದೀಮ್ ಮತ್ತು ಅವರೊಡನೆ ಅಚ್ಚ ಕನ್ನಡತಿಯ ಹಾಗೆ ರೇಷ್ಮೆ ಸೀರೆ, ತುರುಬು, ಮಲ್ಲಿಗೆ ದಂಡೆ ಮುಡಿದು ಬಂದ ವಿನುತಾ ಪ್ರೇಕ್ಷಕರ ಕಣ್ಮನ ಸೂರೆಗೊಂಡರು.

ಕೊಡವರ ಸಾಂಪ್ರದಾಯಿಕ ವೇಷ ಧರಿಸಿದ ಶ್ರೀಧರ್ ಮತ್ತು ಪ್ರೀತಿ, ಅಯ್ಯಂಗಾರರ ವೇಷದಲ್ಲಿ ರೆಹಾನ್ ಮತ್ತು ಉಷಾ, ರಾಜಸ್ಥಾನೀ ಸಾಂಪ್ರದಾಯಿಕ ವೇಷದಲ್ಲಿ ಸುರೇಶ್ ಮತ್ತು ಆಶಿಕ್, ಮೈಸೂರಿನ ಸಾಂಪ್ರದಾಯಿಕ ಗೃಹಿಣಿಯಂತೆ ಮೈಸೂರು ರೇಷ್ಮೆ ಕಚ್ಚೆ ಸೀರೆ, ಕೈಯಲ್ಲಿ ಹಣತೆ ಹಿಡಿದು ಸಭಿಕರಿಗೆ ಶುಭ ಕೋರಿದ ಉಮಾ ಎಸ್. ರಾವ್ ಸ್ಪರ್ಧೆಯ ಮುಖ್ಯ ಆಕರ್ಷಣೆಯಾಗಿದ್ದರು.

ಸಾಂಪ್ರದಾಯಿಕ ವೇಷಭೂಷಣಗಳ ಈ ಸ್ಪರ್ಧೆಯಲ್ಲಿ ಮುಸ್ಲಿಂ ದಂಪತಿಗಳ ವೇಷ ಧರಿಸಿದ್ದ ಹಾಗೂ ಗುಜರಾತಿನ ಸಾಂಪ್ರದಾಯಿಕ ವೇಷ ಧರಿಸಿದ್ದ ಜೋಡಿಗಳೂ ಕಿಕ್ಕಿರಿದ ಸಭೆಯ ಗಮನ ಸೆಳೆದರು.

ಪ್ರಥಮ ಬಹುಮಾನವನ್ನು ಅಚ್ಚ ಕನ್ನಡಿಗರ ವೇಷ ಧರಿಸಿದ್ದ ನದೀಮ್ ಮತ್ತು ವಿನುತಾ, ದ್ವಿತೀಯ ಬಹುಮಾನವನ್ನು ಕೊಡವ ವೇಷಧಾರೀ ಜೋಡಿ ಶ್ರೀಧರ್ ಮತ್ತು ಪ್ರೀತಿ, ಹಾಗೂ ತೃತೀಯ ಬಹುಮಾನವನ್ನು ರಾಜೇಶ್ ಪಡೆದರು. ಸಮಾಧಾನಕರ ಬಹುಮಾನವು ಅಯ್ಯಂಗಾರರ ಸಾಂಪ್ರದಾಯಿಕ ವೇಷ ಭೂಷ ಧರಿಸಿದ್ದ ರೆಹಾನ್ ಮತ್ತು ಉಷಾರಿಗೆ ದೊರೆಯಿತು.

ಈ ಸ್ಪರ್ಧೆಯ ಬಳಿಕ ಮಹಾಜನ ಕಾಲೇಜಿನ ವಿದ್ಯಾರ್ಥಿಗಳಿಂದ ಫ್ಯಾಷನ್ ಶೋ ಮತ್ತು ಶಾಲಾ ಮಕ್ಕಳಿಂದ ಕೊರವಂಜಿ ನೃತ್ಯ ಕಾರ್ಯಕ್ರಮವು ನಡೆದ ಬಳಿಕ ಹೋಟೆಲ್ ಸದರನ್ ಸ್ಟಾರ್‌ನ ಜನರಲ್ ಮ್ಯಾನೇಜರ್ ಅಶೋಕ್ ನೀರುಲಾ ವಿಜೇತರಿಗೆ ಬಹುಮಾನ ವಿತರಿಸಿದರು.

ಸಮಾರಂಭವು ಐ.ಐ.ಟಿ.ಸಿ. ವಿದ್ಯಾರ್ಥಿಗಳು ನಡೆಸಿಕೊಟ್ಟ ಅತ್ಯಾಕರ್ಷಕ ಫ್ಯಾಷನ್ ಷೋನೊಂದಿಗೆ ಮುಕ್ತಾಯಗೊಂಡಿತು. ಈ ಫ್ಯಾಷನ್ ಷೋನಲ್ಲಿ ಔಪಚಾರಿಕ ಸೂಟ್ ಧರಿಸಿದ ಶ್ರೀಧರ್, ರೆಹಾನ್, ನದೀಮ್, ಸುರೇಶ್, ಸಮೀರ್, ಎಜೀಜ್ ರಾಜ ಗಾಂಭೀರ್ಯದಿಂದ ಠೀವಿಯೊಡನೆ ವೇದಿಕೆಗೆ ಆಗಮಿಸಿದರೆ, ಕಣ್ಣು ಕುಕ್ಕುವ ಬನಾರಸ್, ರೇಶ್ಮೆ ಬ್ರೊಕೆಟ್ ಸೀರೆಗಳಲ್ಲಿ ಆಶಿಕ್, ನಳಿನಿ, ಪ್ರೀತಿ, ವಿನುತಾ, ಸಿಂಧು ಮತ್ತು ಅನಿತಾ ಕಣ್ಮನಗಳಿಗೆ ಮುದ ನೀಡಿದರು.

ಸಮಾರಂಭದ ಮತ್ತೊಂದು ಆಕರ್ಷಣೆಯೆಂದರೆ ಟೊರಿಷಿಯನ್ ಶಾಲೆಯಲ್ಲಿ ಎಂಟನೇ ತರಗತಿಯಲ್ಲಿ ಅಭ್ಯಸಿಸುತ್ತಿರುವ ಕು. ಪರಿಮಳಾಳ ಅತ್ಯದ್ಭುತವಾದ ಶಾಸ್ತ್ರೀಯ ನೃತ್ಯ ಕಾರ್ಯಕ್ರಮ. ಕಿರಿಯ ವಯಸ್ಸಿಗೇ ಶಾಸ್ತ್ರೀಯ ನೃತ್ಯವನ್ನು ಕರತಲಾಮಲಕ ಮಾಡಿಕೊಂಡಿರುವ ಈ ಬಾಲಕಿ ಪ್ರದರ್ಶಿಸಿದ ತಟ್ಟೆ ಹಾಗೂ ದೀಪದ ನೃತ್ಯಗಳು ಪ್ರೇಕ್ಷಕರನ್ನು ಅಚ್ಚರಿಯ ಕಡಲಲ್ಲಿ ಮುಳುಗಿಸಿತು.

ಮಾನವೀಯ ಸಂಬಂಧಗಳನ್ನು ಬೆಳೆಸಿ, ಸ್ನೇಹ, ಸೌಹಾರ್ದಗಳನ್ನು ವೃದ್ಧಿಸಿ, ಸಾಮಾಜಿಕ ಮತ್ತು ಆರ್ಥಿಕ ಒಗ್ಗಟ್ಟನ್ನು ಬಲಪಡಿಸುವಲ್ಲಿ ಪ್ರವಾಸೋದ್ಯಮ ಮುಖ್ಯ ಪಾತ್ರ ವಹಿಸಬಲ್ಲದೆಂಬುದನ್ನು ಈ ವಿಶ್ವ ಪ್ರವಾಸೋದ್ಯಮ ದಿನಾಚರಣೆಯ ಸಮಾರಂಭವು, ಮೈಸೂರಿನ ಜನತೆಗೆ ಹಾಗೂ ಪ್ರವಾಸಿಗಳಿಗೆ ಸಾರಿ ಹೇಳಿತು.

—ಶಾಂತಲಾ ಧರ್ಮರಾಜ್

ಚಿತ್ರಗಳು : ಎಸ್. ತಿಪ್ಪೇಸ್ವಾಮಿ






## ಸೇವೆಯಲ್ಲಿ ಹಿರಿಮೆ ಗಳಿಸಿರುವ ಸೌಭಾಗ್ಯವತಿ

ಶ್ರೀಮತಿ ಎಂ.ಎನ್. ಸೌಭಾಗ್ಯವತಿ ದೇವರು ಹಿರಿಯೂರಿನ ಮಹಿಳಾ ಸೇವಾ ಚಟುವಟಿಕೆಗಳಲ್ಲಿ ಗಮನಾರ್ಹ ವ್ಯಕ್ತಿಯೆನಿಸಿದ್ದಾರೆ. ಲಯನೆಸ್ ಜಿಲ್ಲಾಧ್ಯಕ್ಷೆಯಾಗಿ, ಪುರಸಭೆಯ ಸದಸ್ಯೆಯೂ ಆಗಿರುವ ಅವರು ಈಗ ಪುರುಷರಿಗೇ ಸೀಮಿತವಾಗಿದ್ದ ಲಯನ್ಸ್ ಕ್ಲಬ್‌ನ 324–ಬಿ4ರ ಜಿಲ್ಲಾಧ್ಯಕ್ಷೆಯಾಗುವ ಅರ್ಹತೆಯನ್ನು ಸಂಪಾದಿಸಿಕೊಂಡಿರುವುದು ಅವರ ಸೇವಾ ಹಿರಿಮೆಗೊಂದು ಗರಿ ಮೂಡಿದಂತಾಗಿದೆ.

ಸುಸಂಸ್ಕೃತ ಮನೆತನದಲ್ಲಿ ಹುಟ್ಟಿ ಉತ್ತಮ ವಿದ್ಯಾಭ್ಯಾಸವನ್ನು ಪಡೆದ ಅವರಿಗೆ ಒಳ್ಳೆಯ ಕುಟುಂಬದ ಸೊಸೆಯಾಗುವ ಅವಕಾಶವೂ ಲಭ್ಯವಾಯಿತು. ತಾರುಣ್ಯದಲ್ಲಿ ಹಲವು ಸೇವಾಸಂಸ್ಥೆಗಳೊಂದಿಗೆ ಸಂಪರ್ಕವಿಟ್ಟುಕೊಂಡ ಅವರು ಲಯನೆಸ್ ಕ್ಲಬ್‌ನ ಪರಿಚಯದೊಂದಿಗೆ ತಮ್ಮ ಸೇವಾ ಚಟುವಟಿಕೆಗಳನ್ನು ವಿಸ್ತರಿಸಿಕೊಂಡರು.

ಕ್ಲಬ್‌ನ ಜವಾಬ್ದಾರಿಯಲ್ಲಿ ಅವರು ಮಾಡಿರುವ ಸಾರ್ವಜನಿಕ ಸೇವಾ ಚಟುವಟಿಕೆಗಳು ಅಪಾರ. ಸೇವಾ ಚಟುವಟಿಕೆಯ ಸಂಚಾಲಕಿಯಾಗಿಯೂ ಅವರು ಗುರಿ ಮೀರಿದ ಸಾಧಕರಾಗಿ ಕ್ಲಬ್‌ನ ವಿಶೇಷ ಪ್ರಶಂಸೆಗೆ ಪಾತ್ರರಾದರು.

ಮಹಿಳೆಯರ ವಿವಿಧೋದ್ದೇಶ ಸೊಸೈಟಿ, ಲಯನ್ಸ್ ವಿದ್ಯಾ ಸಮಿತಿ, ಗಿರೀಶ್ ವಿದ್ಯಾಸಂಸ್ಥೆ, ಮಾತೃಮಂಡಳಿ, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಇತ್ಯಾದಿ ಸಂಸ್ಥೆಗಳ ನಿಕಟವರ್ತಿಯಾಗಿರುವ ಅವರು ಅಲ್ಲೂ ಗಮನಾರ್ಹ ಪದಾಧಿಕಾರಿಯಾಗಿ ಕರ್ತವ್ಯ ನಿಭಾಯಿಸಿದ್ದಾರೆ. 1989ರಲ್ಲಿ ಅನೇಕ ದೇಶಗಳನ್ನು ಸುತ್ತಿ ತಮ್ಮ ಅನುಭವದ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದ್ದಾರೆ.

ಲಯನ್ಸ್ ಚಟುವಟಿಕೆಗಳ ಜೊತೆಗೆ, ಜನತಾದಳದ ಪ್ರಧಾನ ಕಾರ್ಯದರ್ಶಿಗಳಲ್ಲೊಬ್ಬರಾಗಿ ಹಾಗೂ ಪುರಸಭೆಯ ಕಾರ್ಯಚಟುವಟಿಕೆಗಳಲ್ಲೂ ಭಾಗಿಯಾಗುತ್ತ ಬಿಡುವಿಲ್ಲದ ಕಾರ್ಯಶೀಲರಾಗಿ ಗಮನಿಸಲ್ಪಡುತ್ತಿದ್ದಾರೆ.

ಮನೆಯ ಜವಾಬ್ದಾರಿಯ ಜತೆಗೆ ಸೇವಾಕಾರ್ಯದಲ್ಲಿ ಆಸಕ್ತಿಯನ್ನು ರೂಢಿಸಿಕೊಂಡರೆ ಮಹಿಳೆಯೂ ಸಮಾಜದಲ್ಲಿ ಉನ್ನತ ಗೌರವಕ್ಕೆ ಅರ್ಹಳಾಗುತ್ತಾಳೆ ಎಂಬುದಕ್ಕೆ ಸೌಭಾಗ್ಯವತಿ ದೇವರು ಉತ್ತಮ ನಿದರ್ಶನವಾಗಬಲ್ಲರು.

—ಸಹೃದಯಿ, ದಾವಣಗೆರೆ

ಹೆಣ್ಣು ಮಕ್ಕಳ ಕಲ್ಯಾಣಕ್ಕಾಗಿ, ಸರ್ವತೋಮುಖ ಅಭಿವೃದ್ಧಿಗಾಗಿ ಜಗತ್ತಿನಾದ್ಯಂತ ಹೊಸ ಹೊಸ ಯೋಜನೆಗಳನ್ನು, ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದು ಸರಿಯಷ್ಟೆ. ಆದರೆ ಬಹುತೇಕ ಅಭಿವೃದ್ಧಿಶೀಲ ದೇಶಗಳಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಕ್ಷೀಣಿಸುತ್ತಿರುವುದನ್ನು ಗಮನಿಸಿ, ಅವರ ಅಳಿವು–ಉಳಿವಿನ ಪ್ರಶ್ನೆಯಿಂದಾಗಿಯೇ ವಿಶ್ವಸಂಸ್ಥೆ 1990ರ ವರ್ಷವನ್ನು ಹೆಣ್ಣುಮಕ್ಕಳ ವರ್ಷವೆಂದು, ಸಾರ್ಕ್ ದೇಶಗಳು 1990ರ ವರ್ಷವನ್ನು ಹೆಣ್ಣುಶಿಶುವಿನ ಜನನ ವರ್ಷವೆಂದು ಘೋಷಿಸಿದ್ದಲ್ಲದೆ ಈ ದಶಕವನ್ನೇ ಹೆಣ್ಣು ಶಿಶುವಿನ ಜನನದ ದಶಕವೆಂದು ಕರೆಯಬೇಕೆಂದು ಸಹ ಸಲಹೆ ನೀಡಿದ್ದಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಪರಿಸ್ಥಿತಿಯತ್ತ ಗಮನ ಹರಿಸಿದಾಗ, ನಮ್ಮ ದೇಶದಲ್ಲಿ ಪುರುಷರಿಗೆ ಹೋಲಿಸಿದರೆ ಸ್ತ್ರೀಯರ ಸಂಖ್ಯೆ ಕ್ಷೀಣಿಸುತ್ತಿರುವುದು (ಪ್ರತಿ 1000 ಪುರುಷರಿಗೆ 929 ಸ್ತ್ರೀಯರು – 1991ರ ಜನಗಣತಿಯ ಪ್ರಕಾರ); ಹೆಣ್ಣು ಭ್ರೂಣ ಹತ್ಯೆ ಅಧಿಕವಾಗುತ್ತಿರುವುದು; ಹೆಣ್ಣು ಮಕ್ಕಳಿಗೆ ಸರಿಯಾದ ವೈದ್ಯಕೀಯ ಸೌಲಭ್ಯ ಕೊಡದಿರುವುದು; ಎದೆಹಾಲನ್ನು ಸಾಕಷ್ಟು ಉಣಿಸದಿರುವುದು; 7–8 ವರ್ಷದ ಹೆಣ್ಣುಮಕ್ಕಳು ತನ್ನ ವಯಸ್ಸಿನ ಗಂಡು ಹುಡುಗರು ಶಾಲೆಗೆ ಹೋಗುತ್ತಿರುವಾಗ, ತನಗಿಂತ ಚಿಕ್ಕಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿ; ಬಾಲಕಿಯರ, ಮಹಿಳೆಯರ ಮೇಲಿನ ಲೈಂಗಿಕ ಅತ್ಯಾಚಾರ; ಕೆಲವೊಂದು ಮನೆಯವರು ತಮ್ಮ ಸಾಲದ ಹೊರೆಯನ್ನು ಇಳಿಸಿಕೊಳ್ಳಲು ಹೆಣ್ಣುಮಕ್ಕಳು ಪ್ರೌಢಾವಸ್ಥೆಗೆ ಬರುತ್ತಿದ್ದಂತೆ ಅತ್ಯಾಚಾರಕ್ಕೆ ಪ್ರಚೋದಿಸುವುದು; ಇಂದಿಗೂ ಸಹ ಬೆತ್ತಲ ಸೇವೆ, ದೇವದಾಸಿ ಪದ್ಧತಿಯಂತಹ ಅನಿಷ್ಟ ಪದ್ಧತಿಗಳನ್ನು ದೇವರ ಹೆಸರಿನಲ್ಲಿ ಜನರನ್ನು ತಪ್ಪು ದಾರಿಗೆಳೆಯುತ್ತಿರುವುದು ಒಂದೆಡೆಯಾದರೆ, ಮತ್ತೊಂದೆಡೆ ಕೆಲವೊಂದು ಹಳ್ಳಿಗಳಲ್ಲಿ ಪ್ರಸೂತಿ ಸಮಯದಲ್ಲಿ ಇಂದಿಗೂ ಸಹ ಬಸುರಿ ಹೆಣ್ಣು ಮಕ್ಕಳನ್ನು ಹಳ್ಳಿಗಳ ಹೊರವಲಯದಲ್ಲಿಡುವುದು, ರಾಜಾಸ್ಥಾನದ ಚುಕ್ಸ ಹಳ್ಳಿಯಲ್ಲಿ ಹೆಣ್ಣು ಮಗುವನ್ನು ಕೊಲ್ಲುವ ಪದ್ಧತಿ ಹಾಗೂ ಮದ್ರಾಸಿನ ಕಲ್ಲರ್ ಜನಾಂಗದಲ್ಲಿ ಗಂಡು ಮಗು ಹುಟ್ಟುತ್ತಾನೆಂಬ ನಂಬಿಕೆಯಿಂದಾಗಿ ಹೆಣ್ಣು ಮಗು ಹುಟ್ಟಿದಾಕ್ಷಣ ನಿರ್ದಾಕ್ಷಿಣ್ಯವಾಗಿ ಕೊಂದು ಹಾಕುವುದು, ಜೊತೆಗೆ 24 ಹೆಣ್ಣುಮಕ್ಕಳನ್ನು ಕೊಲೆ ಮಾಡಿದ ಭೂಪರು ನಮ್ಮಲ್ಲಿದ್ದಾರೆ– ಇವೆಲ್ಲ ಭಾರತದ ಚರಿತ್ರೆಯ



# ಹೆಣ್ಣಿನ ಅಳಿವು-ಉಳಿವು

**–ಅಂದಾನೂರು ಶೋಭಾ**

ಘಟನೆಗಳಲ್ಲಿ, ಇಂದಿಗೂ ವಿವಿಧೆಡೆಗಳಲ್ಲಿ ನಡೆಯುತ್ತಿರುವ ಜೀವಂತ ಘಟನೆಗಳು.

ಇನ್ನು ಸತಿ ಪದ್ಧತಿಯನ್ನು ವೈಭವಿಸಿ, ಪತಿ ಮರಣ ಹೊಂದಿದ ನಂತರ ಆತನ ಹೆಂಡತಿಯನ್ನು ಕಡ್ಡಾಯವಾಗಿ ಚಿತೆಗೇರಿಸಿ ಜೀವಂತ ಕೊಲ್ಲುತ್ತಿರುವುದು, ನಂತರ ಅವರ ಸ್ಮರಣಾರ್ಥ ದೇವಸ್ಥಾನ ಕಟ್ಟಿಸಿ ಹಣ ಮಾಡುವುದು; ವರದಕ್ಷಿಣೆಯನ್ನು ಕೊಡುವುದು–ತೆಗೆದುಕೊಳ್ಳುವುದರ ವಿರುದ್ಧ ಕಾನೂನು ಜಾರಿಯಲ್ಲಿದ್ದರೂ ಸಹ, ಈ ವ್ಯಾಪಾರ ಅವ್ಯಾಹತವಾಗಿ ನಡೆದುಕೊಂಡು ಬರುತ್ತಿರುವುದು–ಈ ವ್ಯಾಪಾರದಲ್ಲಿ ಅಲ್ಪ ಸ್ವಲ್ಪ ಕಡಿಮೆಯಾದರೂ ಸಹ ಯಾವ ಮಾನವೀಯತೆ ಮೌಲ್ಯಗಳಿಗೂ ಬೆಲೆ ಕೊಡದೆ ತಾಳಿ ಕಟ್ಟುವ ಕೈ ಹಿಂದಕ್ಕೆ ಸರಿಯುವುದು ಹಾಗೂ ಬಹುತೇಕ ಜನರ ಮನೆಯ ಸ್ಟೌವುಗಳು ಸಹ ಆ ಮನೆಯವರಲ್ಲಿ ಯಾರನ್ನೂ ಆಹುತಿ ತೆಗೆದುಕೊಳ್ಳದೆ (ಬಹುಶಃ ಈ ಶತಮಾನದ ಪವಾಡವಿರಬೇಕು) ಬರುವ ಸೊಸೆಗಾಗಿ ಕಾಯುವುದು. ಅಂತಹ ಪ್ರಕರಣಗಳ ದೂರನ್ನು ಪೋಲೀಸರು ದಾಖಲು ಮಾಡಿಕೊಳ್ಳದಿರುವುದು ಸರ್ವೇ ಸಾಮಾನ್ಯವಾಗಿದೆ. ಪ್ರತಿದಿನ ದೈನಂದಿನ ಪತ್ರಿಕೆಗಳಲ್ಲಿ ಮಹಿಳೆಯರ ಸಾವಿನ ವರದಿಯಿಲ್ಲದಿಲ್ಲ. ಅದು ವರದಕ್ಷಿಣೆಯಾಗಿರಬಹುದು – ಲೈಂಗಿಕ ಹಿಂಸೆಯಿಂದಾಗಿರಬಹುದು ಇಲ್ಲವೇ ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಮಕ್ಕಳು ಸಾಮಾಜಿಕ ಪರಿಸ್ಥಿತಿಯಿಂದಾಗಿ ಬದುಕಲು ಅಸಹಾಯಕರಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಿರಬಹುದು. ಇಲ್ಲೆಲ್ಲಾ ಕಾನೂನಿನ ಪ್ರಕಾರ, ಇಂತಹ ಕೃತ್ಯಗಳಿಗೆ ಕಾರಣರಾದವರನ್ನು ಶಿಕ್ಷೆಗೆ ಗುರಿಪಡಿಸಬಹುದು. ನಮ್ಮ ದೇಶದಲ್ಲಿ ವರದಕ್ಷಿಣೆಯ ವಿರುದ್ಧ ಕಾಯಿದೆ 1961ರಿಂದ ಜಾರಿಯಲ್ಲಿದ್ದು 1984 ಹಾಗೂ 1986ರಲ್ಲಿ ಅನೇಕ ತಿದ್ದುಪಡಿಗಳನ್ನು ಹೊಂದಿದ್ದರೂ ಸಹ, ಈ ಕಾಯಿದೆಗೆ ಅನ್ವಯವಾಗಿ ಬೆರಳೆಣಿಕೆಯಷ್ಟು ಜನರಿಗೆ ಮಾತ್ರ ಶಿಕ್ಷೆಯಾಗುತ್ತಿದೆಯೆಂದರೆ ಬಹುಶಃ ಆಶ್ಚರ್ಯವಾಗಬಹುದು.

ಹಾಗೆಯೇ ಅತ್ಯಾಚಾರ ಹಾಗೂ ಶೈಕ್ಷಣಿಕ ಸ್ಥಳಗಳಲ್ಲಿ ನಡೆಯುವ ಅತ್ಯಾಚಾರ ಇತ್ಯಾದಿ ಕುರಿತಂತೆಯಿರುವ ಕಾಯಿದೆಯಲ್ಲಿಯೂ ಇದೀಗ ಅಲ್ಪ ಸ್ವಲ್ಪ ಬದಲಾವಣೆಯಾಗಿದೆ. 1973ರಲ್ಲಿ ಮಥುರಾ ಮೇಲೆ ನಡೆದ ಅತ್ಯಾಚಾರದ ಘಟನೆ ಪಡೆದ ಪ್ರಚಾರದಿಂದಾಗಿ, ಸಾರ್ವಜನಿಕರ ಪ್ರತಿಕ್ರಿಯೆಯಿಂದಾಗಿ ಅತ್ಯಾಚಾರ ಕಾಯಿದೆಯಲ್ಲಿ ಸ್ವಲ್ಪ ಬದಲಾವಣೆ ತಿದ್ದುಪಡಿ ಮಾಡಲಾಗಿದೆ. ಕಾಯಿದೆಯಲ್ಲಿ ತಪ್ಪಿತಸ್ಥರಿಗೆ ಶಿಕ್ಷೆಯನ್ನು ಸೂಚಿಸಿದೆ.: 1. ತಪ್ಪಿತಸ್ಥರಿಗೆ ಏಳು ವರ್ಷ ಸಜೆ. 2. ರಕ್ಷಣಾ ಸ್ಥಳಗಳಲ್ಲಿ ಅಂದರೆ ಪೋಲೀಸರಿಂದ, ಜೈಲಿನ ಅಧಿಕಾರಿಗಳಿಂದ, ವೈದ್ಯರಿಂದ ಸಂಬಂಧಿಸಿದ ಬಲಾತ್ಕಾರಕ್ಕೆ; ಬಸುರಿ ಹೆಣ್ಣು ಮಕ್ಕಳ ಮೇಲೆ ನಡೆದರೆ, 12 ವರ್ಷಕ್ಕಿಂತ ಕೆಳಗಿನ ಹುಡುಗಿಯರ ಮೇಲೆ ಸಂಭವಿಸಿದ್ದರೆ 10 ವರ್ಷಗಳ ಸಜೆ. ಅಷ್ಟೇ ಅಲ್ಲದೆ ಮಹಿಳೆಯ ಇಚ್ಚೆಗೆ ವಿರುದ್ಧವಾಗಿ ನಡೆದ, 16 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಹಿಳೆಯ ಪತಿಯನ್ನು ಬಿಟ್ಟು ಪರಪುರುಷ ಸಂಭೋಗ ನಡೆಸಿದರೆ, ಹಾಗೆಯೇ 15 ವಯಸ್ಸಿನ ಹುಡುಗಿಯನ್ನು ಆಕೆಯ ಗಂಡನಾದವನು ಸಂಭೋಗ ನಡೆಸಿದಾಗಲೂ ಬಲಾತ್ಕಾರವಾಗುತ್ತದೆ. ಹೀಗಿದ್ದು ಸಹ ಇತ್ತೀಚೆಗೆ ದೊರೆತ ಅಂಕಿ–ಅಂಶಗಳ ಪ್ರಕಾರ ಈ ರೀತಿಯ ಪ್ರಕರಣಗಳು ಅಧಿಕವಾಗುತ್ತಿವೆ. ರಕ್ಷಣಾ ಸ್ಥಳಗಳಲ್ಲಿ ಪಾಲಕತ್ವದಲ್ಲಿ ನಡೆಯುತ್ತಿರುವ ಬಲಾತ್ಕಾರಗಳು ಅಂಕಿ–ಅಂಶ ಅಷ್ಟಾಗಿ ಬೆಳಕಿಗೆ ಬರುತ್ತಿಲ್ಲ. ಇನ್ನು ಬಿಗಿಯಾದ ಕಟ್ಟುನಿಟ್ಟಾದ ಕಾನೂನು ಜಾರಿಗೆ ಬರಬೇಕು. ಜೊತೆಗೆ ಬೇಗನೇ ಪ್ರತಿಕ್ರಿಯೆ ತೋರಿಸುವಂತಹ, ತೀವ್ರ ಕ್ರಮ ಕೈಗೊಳ್ಳುವಂತಹ ನ್ಯಾಯಾದಿ ಇಲಾಖೆಗಳು ಬೇಕಾಗಿವೆ. ಅಷ್ಟೇ ಅಲ್ಲದೆ, ಮಹಿಳೆಯರ ಮೇಲೆ ನಡೆಯುವ ಇಂತಹ ನೀಚ ಕೃತ್ಯಗಳ ವಿರುದ್ಧ ಹೋರಾಡಲು ಮಹಿಳೆಯರ ಜಾಗೃತ ಸಮಿತಿ ಅಥವಾ ಎಚ್ಚರಿಕೆ ಸಮಿತಿ (Vigilance Groups) ಇರುವುದು ತೀರ ಅವಶ್ಯಕವಾಗಿದೆ. ಅದೆಲ್ಲಕ್ಕಿಂತ ಸಮಾಜದಲ್ಲಿ ಸಂಪೂರ್ಣವಾಗಿ ಕ್ರಾಂತಿಯಾಗಬೇಕು. ಅಂದರೆ ಹಲ್ಲೆಗೆ ಬಲಿಯಾದ ಮಹಿಳೆಯರನ್ನು ಸಮಾಜ ದೂಷಿಸಬಾರದು. ಇಲ್ಲಿ ಜನಗಳ ಮನಸ್ಸಿನ ಯೋಚನೆಯಲ್ಲಿ ಬದಲಾವಣೆಯಾಗಬೇಕು. ತಪ್ಪಿತಸ್ಥರಿಗೆ ಕಠಿಣ ಶಿಕ್ಷೆಯಾಗಬೇಕು. ಹಾಗೆಯೇ ಪೋಲೀಸ್ ಠಾಣೆಗಳಲ್ಲಿ ಮಹಿಳೆಯರನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಇದೀಗ 'ಮಹಿಳಾ ದೂರು ವಿಭಾಗ' ಹಾಗೂ 'ವಿಶೇಷ ಘಟಕ'ಗಳನ್ನು ಪೋಲೀಸ್ ವಿಭಾಗ ತೆರೆದಿರುವುದರಿಂದ ಮಹಿಳೆಯರು ತಮಗಾದ ಅನ್ಯಾಯದ ವಿರುದ್ಧ ಕೂಡಲೇ ಇಲ್ಲಿ ದೂರನ್ನು ಸಲ್ಲಿಸಬಹುದಾಗಿದೆ. ಜೊತೆಗೆ ಯಾವ ತಪ್ಪೂ ಇಲ್ಲದೆ ಅತ್ಯಾಚಾರಕೆ ಒಳಗಾದ ಹೆಣ್ಣು ಮಗಳನ್ನು ಆಕೆಯ ಮನೆಯವರು ಸ್ವಾಗತಿಸದಿರುವುದರಿಂದ, ಇಂತಹ ಹೆಣ್ಣು ಮಕ್ಕಳು ಬೀದಿಪಾಲಾಗುತ್ತಿರುವುದು. ಕೆಲವೊಂದು ಮಹಿಳೆಯರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಮತ್ತು ಕೆಲವರನ್ನು ಹೊಂಚು ಹಾಕಿ ಸೂಳೆಗಾರಿಕೆಗೆ ಕೊಂಡೊಯ್ಯುತ್ತಿರುವ ದಳ್ಳಾಳಿಗಳು ಸಹ ಹೆಚ್ಚುತ್ತಿದ್ದಾರೆ. ಇಂತಹ ದಳ್ಳಾಳಿಗಳ ಬಗೆಗೆ ತೀವ್ರ ಕ್ರಮ ಕೈಗೊಳ್ಳಬೇಕು. ಹಾಗೆಯೇ ಪರಿಸ್ಥಿತಿಯನ್ನು ಅರಿತು ಜನರು ಅತ್ಯಾಚಾರಕ್ಕೆ ಒಳಗಾದ ಮಹಿಳೆಯನ್ನು ಚೆನ್ನಾಗಿ ಬದುಕುವಂತೆ ನೋಡಿಕೊಳ್ಳಬೇಕೇ ಹೊರತು ದೂಷಿಸಬಾರದು.

ಕಡ್ಡಾಯ ಶಿಕ್ಷಣ : ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ಸಿಗಬೇಕಾದರೆ ಹೆಣ್ಣು ಮಕ್ಕಳಿಗೆ ಕಡ್ಡಾಯ ಶಿಕ್ಷಣ ಜಾರಿಗೆ ಬರಬೇಕು. ಈಗಿರುವ ನಿಯಮದಂತೆ ಪ್ರಾಥಮಿಕ ಶಾಲೆಯಿಂದ ಮಾಧ್ಯಮಿಕದವರೆಗೆ ಉಚಿತ ಶಿಕ್ಷಣ, ಉಚಿತ ಸಮವಸ್ತ್ರ, ಪಠ್ಯಪುಸ್ತಕಗಳೊಂದಿಗೆ ಪೌಷ್ಠಿಕ ಆಹಾರ ಹಾಗೂ ಅವರ ತಂದೆ–ತಾಯಿಯರ ಜೀವನೋಪಾಯಕ್ಕೆ ಕೆಲವೊಂದು ವರ್ಷಗಳವರೆಗೂ ಪರಿಹಾರವನ್ನು ನೀಡಿ ಮಕ್ಕಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗೆ ಕಳಿಸುವಂತೆ ಉತ್ತೇಜಿಸಬೇಕು. ಈ ದಿಕ್ಕಿನಲ್ಲಿ ಈಗಾಗಲೇ ಮದ್ರಾಸಿನಲ್ಲಿ ಕೈಗೊಂಡಿರುವ ಅಂದರೆ ಗ್ರಾಮೀಣ ಪ್ರದೇಶದಲ್ಲಿ 8ನೇ ತರಗತಿವರೆಗೆ, ಗುಡ್ಡಗಾಡಿನಲ್ಲಿ 5ನೇ ತರಗತಿವರೆಗೆ ಓದಿಸುವ ಬಡ ಹೆಣ್ಣು ಮಕ್ಕಳಿಗೆ ಮದುವೆಗಾಗಿ 5000.00 ರೂ.ಗಳನ್ನು ಕೊಡುತ್ತದೆ. ಈ ಯೋಜನೆ ಜಾರಿಗೆ ಬಂದದ್ದರಿಂದ ಶಾಲೆಗಳಲ್ಲಿ ಹೆಣ್ಣು ಮಕ್ಕಳ ದಾಖಲಾತಿ ಹೆಚ್ಚಿದೆಯೆಂದೂ, ಈ ಸೌಲಭ್ಯವನ್ನು ಅನೇಕರು ಪಡೆದಿದ್ದಾರೆಂದು ತಿಳಿದು ಬಂದಿದೆ.

ಅಂತೆಯೇ ಸರ್ಕಾರವು ಸಹ ಕಡಿಮೆ ಸಂಬಳ ಪಡೆಯುವವರ ಹೆಣ್ಣು ಮಕ್ಕಳಿಗೆ ಹಾಗೂ ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳು ಶಾಲೆಗೆ ಸೇರಿದಾಕ್ಷಣ ಅವರಿಗೆ ಶಿಕ್ಷಣ–ಜೀವವಿಮಾ ಯೋಜನೆಯನ್ನು ಹಮ್ಮಿಕೊಳ್ಳಬೇಕು. ವಿಮೆಯ ಕಂತನ್ನು ರಾಜ್ಯ ಸರ್ಕಾರಗಳು ಮಾಧ್ಯಮಿಕ ಶಾಲೆಯವರೆಗೂ ಭರಿಸಬೇಕು. ವಾಯಿದೆ ತುಂಬಿದ ನಂತರ ಹಣವನ್ನು ಈ ಹೆಣ್ಣು ಮಕ್ಕಳು ಸ್ವಯಂ ಉದ್ಯೋಗದಲ್ಲಿ ತೊಡಗಿಸಿಕೊಳ್ಳಲು ಅನುಕೂಲವಾಗುತ್ತದೆ. ಆಗ ಹೆಣ್ಣು ಮಕ್ಕಳಿಗೆ ಪರಾವಲಂಬಿ ಭಾವನೆ ತಪ್ಪಿ, ಆತ್ಮಸ್ಥೈರ್ಯ ಉಂಟಾಗುತ್ತದೆ. ಇದರಿಂದ ಅಪಾರ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಶಾಲೆ ಬಿಡುವುದು ತಪ್ಪುತ್ತದೆ. ಇನ್ನೊಂದು ರೀತಿಯಲ್ಲಿ ಸರ್ಕಾರ ಹೆಣ್ಣು ಮಕ್ಕಳ ಸಾಕ್ಷರತೆಯನ್ನು ಹೆಚ್ಚಿಸಿದಂತೆಯೂ, ಚಿಕ್ಕ ವಯಸ್ಸಿಗೆ ಮದುವೆ ಮಾಡುವುದನ್ನು ತಪ್ಪಿಸಿದಂತೆಯೂ ಆಗುತ್ತದೆ. ಹಾಗೆಯೇ ಗ್ರಾಮೀಣ ಪ್ರದೇಶದಲ್ಲಿ ಜೀವನ ನಿರ್ವಹಣೆಗೆ ಕಷ್ಟವಿರುವುದರಿಂದ ಹಾಗೂ ದುಡಿಯುವ ಮತ್ತೊಂದು ಕೈಯನ್ನು ಕಳೆದುಕೊಳ್ಳಲು ಸಿದ್ಧವಿಲ್ಲದಿರುವುದರಿಂದ, ಅವರ ಜೀವನೋಪಾಯಕ್ಕೆ ಹಸುವನ್ನೋ ಕುರಿಯನ್ನೋ ಅಥವಾ ಬೇರಾವುದೇ ರೀತಿಯ ಅನುಕೂಲವನ್ನು ಕಲ್ಪಿಸಬೇಕು. ಈಗಾಗಲೇ ಸರ್ಕಾರ ನಿಯಮಿಸಿರುವಂತೆ ಶಾಲೆಗಳಲ್ಲಿ ಮಕ್ಕಳನ್ನು ನೋಡಿಕೊಳ್ಳುವಂತಹ ಶಿಶು ಕೇಂದ್ರಗಳನ್ನು ಕಡ್ಡಾಯವಾಗಿ ತೆರೆಯಬೇಕು. ಇದರಿಂದ ಶಾಲೆಗೆ ಬರುತ್ತ ಅವರೊಂದಿಗೆ ಕರೆದುತಂದ ಮಕ್ಕಳನ್ನು ಇಂತಹ ಕೇಂದ್ರಗಳಲ್ಲಿ ಬಿಟ್ಟು ಹೆಣ್ಣು ಮಕ್ಕಳು ಕಲಿಕೆಯಲ್ಲಿ ಆಸಕ್ತಿ ವಹಿಸಬಹುದಾಗಿದೆ. (ನಮ್ಮ ದೇಶದಲ್ಲಿ ಬಹುತೇಕ ಸರ್ಕಾರದ ನಿಯಮಗಳು,

ಆಜ್ಞೆಗಳು ಜನಪರವಾಗಿವೆ ನಿಜ. ಆದರೆ ಅವುಗಳನ್ನು ಇನ್ನೂ ವ್ಯವಸ್ಥಿತವಾಗಿ ಜಾರಿಗೆ ತರಬೇಕಾಗಿದೆ. ಬಹುತೇಕ ಆಜ್ಞೆಗಳು ಕಡತಗಳ ನಡುವೆ ಬೆಚ್ಚಗೆ ಮಲಗಿವೆ. ಈ ರೀತಿಯ ಅನುಕೂಲಗಳಿಂದ ಕಡ್ಡಾಯ ಶಿಕ್ಷಣ ಹೆಣ್ಣು ಮಕ್ಕಳಿಗೆ ದೊರೆತರೆ, ಮುಂದೆ ಅನೇಕ ಸಂಸಾರಗಳನ್ನೇ ಶಿಕ್ಷಿತರನ್ನಾಗಿ ಮಾಡಿದಂತಾಗುತ್ತದೆ. ವಿದ್ಯಾಭ್ಯಾಸವು ಹೆಣ್ಣುಮಕ್ಕಳಿಗೆ ಸಾಮಾಜಿಕ ಬದಲಾವಣೆಯಲ್ಲಿ ಪ್ರತಿಕ್ರಿಯಿಸಲು ಪ್ರೇರೇಪಿಸುತ್ತದೆ. ಲಿಂಗಾದಾರಿತ ಅಸಮಾನತೆಯನ್ನು ಹೋಗಲಾಡಿಸಲು ಮತ್ತು ವಿಮರ್ಶಾತ್ಮಕ ಪ್ರಜ್ಞೆಯನ್ನು ಹೆಣ್ಣುಮಕ್ಕಳಲ್ಲಿ ಮೂಡಿಸಲು ಶಿಕ್ಷಣದಿಂದ ಸಹಾಯವಾಗುತ್ತದೆ.

ಪಠ್ಯಪುಸ್ತಕಗಳ ಬದಲಾವಣೆ :

ಚಿಕ್ಕಂದಿನಿಂದಲೇ ಮಕ್ಕಳಲ್ಲಿ ಹೆಣ್ಣು–ಗಂಡು ಸಮಾನರೆಂಬ ಮನೋಭಾವನೆ ಬೆಳೆಸುವಂತೆ ಶಾಲಾ ಪಠ್ಯಪುಸ್ತಕಗಳ ಪಠ್ಯಕ್ರಮದಲ್ಲಿ ಅಳವಡಿಸುವುದು ತೀರ ಅವಶ್ಯವಾಗಿದೆ. ಈಗಲೂ ಕೆಲವು ಪಠ್ಯಪುಸ್ತಕಗಳಲ್ಲಿ ಗಂಡುಮಕ್ಕಳು ತಂದೆಗೆ ಹೊರಗಿನ ಕೆಲಸಗಳಲ್ಲಿ ಹೆಣ್ಣು ಮಕ್ಕಳು ತಾಯಿಗೆ ಮನೆಯೊಳಗೆ ಸಹಾಯ ಮಾಡುವ ಚಿತ್ರಗಳು ಕಂಡು ಬರುತ್ತವೆ. ಇದರಿಂದ ಹುಡುಗರ ಮನೋಭೂಮಿಕೆಯಲ್ಲಿ ತಾರತಮ್ಯ ಭಾವನೆ ಬಲವಾಗಿ ಬೇರು ಬಿಡುತ್ತದೆ. ಮನೆಯ ಕೆಲಸವನ್ನು ಹಂಚಿಕೊಂಡು ಮಾಡುವಂತಿರ ಬೇಕು. ಯಾವ ಕೆಲಸ ಮಾಡಲೂ ಹಿಂಜರಿಕೆಯಾಗಲೀ ಅವಮಾನವೆಂದು ಯಾರೂ ಭಾವಿಸಬಾರದು. ಪಠ್ಯ ವಿಷಯಗಳ ಆಯ್ಕೆಯಲ್ಲಿ ಮೂಲಭೂತವಾಗಿ ಬದಲಾವಣೆಯಾಗಬೇಕಾಗಿದೆ. ನಮ್ಮ ಸಾಂಸ್ಕೃತಿಕ ಮೌಲ್ಯಗಳತ್ತ ಮಕ್ಕಳು ಒಲವು ಹರಿಸುವ ಪ್ರಯತ್ನದ ಜೊತೆಯಲ್ಲಿ ಸಾಮಾಜಿಕ ಕಳಕಳಿಯ ಬಗೆಗೂ ಅವರ ಗಮನ ಹರಿಸಬೇಕಾಗಿದೆ. ಹಾಗೆಯೇ ವಿದ್ಯಾಭ್ಯಾಸದಲ್ಲಿ ಸಹ ಶಿಕ್ಷಣ ಪ್ರೈಮರಿಯಿಂದಲೇ ಇರಬೇಕು. ಮಾಧ್ಯಮಿಕ ಶಾಲೆಯಿಂದಲೇ ಲೈಂಗಿಕ ಶಿಕ್ಷಣಕ್ಕೆ ಅವಕಾಶವಿರಬೇಕು. ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯು ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಹೆಣ್ಣು ಮಕ್ಕಳಿಗೆ ಗಂಡು ಮಕ್ಕಳೊಂದಿಗೆ ಸುಸಮಾನವಾದ ಶಿಕ್ಷಣವನ್ನು ಕಲ್ಪಿಸುವ ಯೋಜನೆಯನ್ನು ಹೊಂದಿದೆ. ಇದರ ಪ್ರಕಾರ ಪ್ರತಿ ಕಿಲೋಮೀಟರಿಗೆ ಪ್ರಾಥಮಿಕ ಶಾಲೆ ಹಾಗೂ ಪ್ರತಿ ಕಿ.ಮೀ. ಅಂತರದಲ್ಲಿ ಪ್ರೌಢಶಾಲೆ ತೆರೆಯಬೇಕೆಂದು ತಿಳಿಸಿದೆ. ಆದಷ್ಟು ಬೇಗ ಈ ನಿಯಮವನ್ನು ಕಾರ್ಯರೂಪಕ್ಕೆ ತಂದು ಶಾಲೆಗಳನ್ನು ತೆರೆದರೆ, ಹೆಣ್ಣುಮಕ್ಕಳನ್ನು ಮನೆಯವರು ಧೈರ್ಯವಾಗಿ ಶಾಲೆಗೆ ಕಳುಹಿಸುತ್ತಾರೆ. ಹಾಗೂ ದೂರದ ಶಾಲೆಗೆ ಹೋಗಿ ಬರುವಾಗ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ಹಲ್ಲೆ, ಅತ್ಯಾಚಾರವನ್ನು ಕಡಿಮೆ ಮಾಡಿದಂತಾಗುತ್ತದೆ.

ಶಾಲೆಗಳನ್ನು ಮಾತ್ರ ತೆರೆದರೆ ಪ್ರಯೋಜನವಿಲ್ಲ. ಜೊತೆಗೆ ಸರಿಯಾದ ಶಿಕ್ಷಕರನ್ನು ನಿಯಮಿಸುವುದು ಹಾಗೂ ಕಡ್ಡಾಯವಾಗಿ ಶಾಲೆಗಳಲ್ಲಿ ಶಿಕ್ಷಕರು ಪಾಠ ಪ್ರವಚನ ನಡೆಸುವುದು /ಅಷ್ಟೇ ಮುಖ್ಯವಾಗಿದೆ. ಶಾಲೆಗೆ ಬರುತ್ತಿರುವ ಹೆಣ್ಣುಮಕ್ಕಳನ್ನು ಮಧ್ಯದಲ್ಲಿ ಬಿಡಿಸದಂತೆ, ಅವರುಗಳು ಪೂರ್ಣ ಶಿಕ್ಷಣ ಪಡೆಯುವಂತೆ ಗಮನ ಹರಿಸುವುದೂ ಅಷ್ಟೇ ಮುಖ್ಯ. ಆಯಾ ಪ್ರದೇಶದ ಆವಶ್ಯಕತೆಗನುಸಾರವಾಗಿ ವೃತ್ತಿ ಶಿಕ್ಷಣವನ್ನು ಕೊಡಬೇಕು. ಅಂತೆಯೇ ಹೆಣ್ಣುಮಕ್ಕಳಿಗೆ 18 ವರ್ಷಕ್ಕೆ ಮುಂಚೆ ಮದುವೆ ಮಾಡದಂತೆ ಸೂಕ್ತ ನಿರ್ದೇಶನ, ಸಲಹೆಯನ್ನು ಕೊಡಬೇಕು. ಕಾರಣ ನಮ್ಮ ದೇಶದಲ್ಲಿ ಹೆಣ್ಣು ಮಕ್ಕಳ ಸಾವು ಅತ್ಯಧಿಕವಾಗುತ್ತಿದೆ. ಇತ್ತೀಚಿನ ವರದಿಯ ಪ್ರಕಾರ ಪ್ರತಿ ವರ್ಷ, ನಮ್ಮ ದೇಶದಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಶಿಶುಗಳು ಸಾವನ್ನಪ್ಪುತ್ತಿರುವುದು ದಾಖಲಾಗಿದೆ. ಇದಕ್ಕೆ ಕಾರಣ ಚಿಕ್ಕ ವಯಸ್ಸಿಗೆ ಹೆಣ್ಣು ಮಕ್ಕಳನ್ನು ಮದುವೆ ಮಾಡುವುದು, ಅವರುಗಳು ಗರ್ಭವತಿಯರಾದಾಗ ಸರಿಯಾದ ಆಹಾರ, ಆರೈಕೆ, ವೈದ್ಯಕೀಯ ನೆರವು ನೀಡದಿದ್ದರೆ ನಿಶ್ಶಕ್ತಿಯಿಂದ ಬಳಲುವುದು ಜಾಸ್ತಿ, ತಂದೆ–ತಾಯಿಯರು ಹೆಣ್ಣು ಮಗುವಿಗೆ ಸರಿಯಾದ ವೈದ್ಯಕೀಯ ನೆರವು ನೀಡದಿದ್ದರೆ, ಹಾಗೂ ಮಕ್ಕಳಲ್ಲಿ ಲಿಂಗ ಭೇದ ಮಾಡದೆ ಪೌಷ್ಟಿಕ ಆಹಾರವನ್ನು ಕೊಟ್ಟರೆ, ಯಾವ ತಪ್ಪನ್ನೂ ಮಾಡದ ಹೆಣ್ಣುಮಕ್ಕಳ ಬದುಕುವ ಹಕ್ಕನ್ನು ಇತರರು ನಾಶ ಮಾಡುವುದು ತಪ್ಪಿದಂತಾಗುತ್ತದೆ.

ಹಾಗೆಯೇ ಗ್ರಾಮೀಣ ಪ್ರದೇಶಗಳಲ್ಲಿ ವೈದ್ಯರು ಸದಾ ಲಭ್ಯವಿರುವಂತೆ, ಎಲ್ಲಾ ರೀತಿಯ ಔಷಧಗಳು ದೊರಕುವಂತೆ ಕ್ರಮ ಕೈಗೊಳ್ಳಬೇಕು. ತುರ್ತಾಗಿ ರೋಗಿಯನ್ನು ನಗರಕ್ಕೆ ದೊಡ್ಡ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗುವ ಪ್ರಸಂಗ ಒದಗಿದರೆ, ಅವರುಗಳಿಗೆ ವಾಹನ ಸೌಲಭ್ಯವಿಲ್ಲದ ಕಾರಣದಿಂದಾಗಿ ಸಾವನ್ನಪ್ಪುವ ಸಾಧ್ಯತೆ ಹೆಚ್ಚಿರುವುದರಿಂದ, ವಾಹನ ಸೌಲಭ್ಯವನ್ನು ಒದಗಿಸಬೇಕು. ಜೊತೆಗೆ ವೈದ್ಯರಿಗೆ ಹಲವು ಅನುಕೂಲಗಳನ್ನು ಕಲ್ಪಿಸಿಕೊಡಬೇಕು.

ಎಲ್ಲರ ಕಾಳಜಿ

ಹೆಣ್ಣು ಮಕ್ಕಳಿಗೆ ಶುಚಿತ್ವದ ಬಗ್ಗೆ ಅರಿವು, ತಿಳುವಳಿಕೆ ಕೊಡುವುದು ತೀರಾ ಅವಶ್ಯಕವಾಗಿದೆ. ಹೆಣ್ಣುಮಗುವಿನ ಬಗ್ಗೆ ಇರುವ ತಾರತಮ್ಯಗಳ ನಿವಾರಣೆಯನ್ನು ಜನ ಸಾಮಾನ್ಯರ ಅರಿವನ್ನು ಹೆಚ್ಚಿಸಲು ಸಮೂಹ ಮಾಧ್ಯಮಗಳು ಹೆಚ್ಚಿನ ಪರಿಣಾಮವನ್ನು ಬೀರಬಹುದು. ಗ್ರಾಮೀಣ ರಲ್ಲಿ ಅನಕ್ಷರಸ್ತರೇ ಜಾಸ್ತಿಯಿರುವಾಗ, ಬೀದಿ ನಾಟಕಗಳ ಮೂಲಕ, ಸಾಕ್ಷ್ಯ ಚಿತ್ರಗಳ ಮೂಲಕ, ಗೊಂಬೆಯಾಟಗಳ ಮೂಲಕ, ಸಾಕ್ಷರತೆಯ ಪ್ರಾಮುಖ್ಯತೆಯ ಬಗ್ಗೆ, ಆರೋಗ್ಯದ ಬಗ್ಗೆ, ಸಾಮಾಜಿಕ ಆರೋಗ್ಯದ ಬಗ್ಗೆ, ಕೆಲವು ಕಾಯಿಲೆಗಳ, ಮುಂಜಾಗ್ರತೆಯ ಬಗೆಗೆ, ಸಮಾಜದಲ್ಲಿನ ಅನಿಷ್ಟ ಪದ್ಧತಿಗಳ, ಅಂಧ ಸಂಪ್ರದಾಯಗಳ ಕುಟುಂಬ ಯೋಜನೆಯ, ಮಕ್ಕಳ ವಿದ್ಯಾಭ್ಯಾಸದ, ಕಾನೂನಿನ, ಹೆಣ್ಣು–ಗಂಡು ಸಮಾನರೆಂಬುದರ ಬಗೆಗೆ ಹಕ್ಕಿನ ಬಗೆಗೆ, ವಯಸ್ಕರ ಶಿಕ್ಷಣದ, ಲೈಂಗಿಕ ಸಂಪರ್ಕದಿಂದ ಅಂಟುವ ರೋಗ ಹಾಗೂ ಅದರ ದುಷ್ಪರಿಣಾಮಗಳ ಬಗೆಗೆ, ಏಡ್ಸ್‌ನಂತಹ ಭಯಂಕರ ಕಾಯಿಲೆಯ ಬಗೆಗೆ– ಹೀಗೆ ಹಲವಾರು ವಿಷಯಗಳ ಬಗ್ಗೆ ಜನರಲ್ಲಿ ಅರಿವು, ಜಾಗೃತಿಯನ್ನು ಮೂಡಿಸುವ ಕಾರ್ಯವನ್ನು ದೂರದರ್ಶನದಂತಹ ಪ್ರಭಾವೀ ಮಾಧ್ಯಮದ ಮೂಲಕ ಯಶಸ್ವಿಯಾಗಿ ನಿರ್ವಹಿಸಬಹುದು.

ಈಗಾಗಲೇ ಗುಜರಾತಿನ ಚೇತನ ಸಂಸ್ಥೆಯವರು 'ಮಕ್ಕಳಿಂದ ಮಕ್ಕಳಿಗೆ' ಎನ್ನುವ ಯೋಜನೆಯಲ್ಲಿ ಪ್ರೌಢಾವಸ್ಥೆಯಲ್ಲಿರುವವರಿಗೆ ಆರೋಗ್ಯ ಹಾಗೂ ಪೋಷಣೆ ನೀಡುವುದರಲ್ಲಿ ವಿಶೇಷ ತರಬೇತಿ ಕಾರ್ಯಕ್ರಮವನ್ನು ನಡೆಸುತ್ತಿರುವುದನ್ನು, ಬಂಗಾಳದ 'Child in need institute' ನವರು ನಗರದ ಶಾಲಾ ಮಕ್ಕಳನ್ನು ಹಳ್ಳಿಗಳಿಗೆ ಕಳುಹಿಸಿ, ಅಲ್ಲಿನ ಶಾಲಾ ಹುಡುಗಿಯರಿಗೆ ಪರಿಸರ ನೈರ್ಮಲ್ಯದ ಬಗ್ಗೆ, ಆರೋಗ್ಯದ ಬಗ್ಗೆ, ಪೋಷಣೆಯ ಬಗ್ಗೆ ತಿಳಿಯಪಡಿಸುವ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸುತ್ತಿರುವುದನ್ನು ಇಲ್ಲಿ ನೆನೆಯಬಹುದು. ಇಂತಹ ಕಾರ್ಯಕ್ರಮಗಳನ್ನು ಎಲ್ಲೆಡೆಯೂ ಹಮ್ಮಿಕೊಂಡರೆ, ಗ್ರಾಮೀಣ ಮಹಿಳೆಯರ ತಿಳುವಳಿಕೆ, ಜ್ಞಾನವನ್ನು ವೃದ್ಧಿಸಿದಂತಾಗುತ್ತದೆ.

ಮಹಿಳೆಯರ ಮೇಲಿನ ಅತ್ಯಾಚಾರ : ಇಂದು ಬಾಲಕಿಯರ ಮೇಲೆ ಲೈಂಗಿಕ ಹಿಂಸೆ ಯಾರಿಗೂ ತಿಳಿಯದಂತೆ ನಡೆಯುತ್ತಿದೆ. ಎಳೆ ವಯಸ್ಸಿನ ಹುಡುಗಿಯರ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯ, ಅವರ ಮನಸ್ಸಿನ ಮೇಲೆ ಘೋರವಾದ ಪರಿಣಾಮ ಬೀರುತ್ತಿದೆ. ಭಯ, ಲೈಂಗಿಕ ಹೆದರಿಕೆ, ಅಸಹ್ಯ ಭಾವನೆ ಮನಸ್ಸಿನಲ್ಲಿ ಉಳಿದು ಮಾನಸಿಕ ಆಘಾತವಾಗುತ್ತದೆ. ಕೆಲವೊಮ್ಮೆ ಪ್ರಕರಣಗಳು ಆತ್ಮಹತ್ಯೆಯಲ್ಲಿ ಕೊನೆಗೊಳ್ಳುತ್ತಿವೆ. ಇಂತಹ ಲೈಂಗಿಕ ಹಿಂಸೆಯನ್ನು ಹಲವೊಮ್ಮೆ ಮನೆಗೆ ಬರುವ ಆಪ್ತರು, ನೆರೆಹೊರೆಯವರು–ನೆಂಟರು ಇವರುಗಳೇ ಹೆಚ್ಚಾಗಿ ಮಾಡುವ ಸಾಧ್ಯತೆ ಇದೆ. ಆದ್ದರಿಂದ ಬಾಲಕಿಯರಿಗೆ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ದೊಡ್ಡವರು– ಆಪ್ತರು ತಿಳಿಯಪಡಿಸುವುದು ಸೂಕ್ತ. ಮಕ್ಕಳಲ್ಲಿರುವ ಅಜ್ಞಾನದ ಬಗ್ಗೆ ತಂದೆ–ತಾಯಿಗಳು ಸಂಕೋಚವಿಲ್ಲದೆ ಚರ್ಚಿಸಬೇಕು. ಶಾಲೆಗಳಲ್ಲಿ ಕರಾಟೆಯನ್ನು ಕಡ್ಡಾಯವಾಗಿ ಹೆಣ್ಣು ಮಕ್ಕಳಿಗೆ ಕಲಿಸಬೇಕು.

ಇತ್ತೀಚೆಗೆ ಹೆಣ್ಣುಮಕ್ಕಳನ್ನು ಅಪಹರಿಸುವುದು, ಮಾರುವುದು ಸಹ ಜಾಸ್ತಿಯಾಗುತ್ತಿದೆ. ಇದರಿಂದ ಅನೇಕರು ದಿಢೀರನೆ ಶ್ರೀಮಂತರಾಗುತ್ತಿದ್ದಾರೆ. ಬಹಳ ಸುಲಭವಾಗಿ ಕಂಡವರ ಮನೆಯ ಹೆಣ್ಣು ಮಕ್ಕಳನ್ನು ಅಪಹರಿಸುವುದು, ಇತರ ದೇಶಗಳಿಗೆ ಮಾರುವುದು, ಇಲ್ಲವೇ ದೇಹ ಮಾರುವ ಕ್ರಿಯೆಗೆ ಒಳಪಡಿಸುತ್ತಿದ್ದಾರೆ. ಈ ಕಸುಬನ್ನು ನಡೆಸುತ್ತಿರುವ ವ್ಯಕ್ತಿಗಳು ಪಶುಗಿಂತಲೂ ಕೀಳೆನ್ನಬಹುದು. ಹೃದಯವಿಲ್ಲದವರ ಕ್ರಿಯೆ. ಇಲ್ಲೆಲ್ಲಾ ದೊಡ್ಡ ಜಾಲದ ಪ್ರಭಾವೀ ವ್ಯಕ್ತಿಗಳ, ಶಕ್ತಿಗಳ ಕೈವಾಡ ಇರುತ್ತದೆ.

### ಚೆಲುವಿನ ಕುರುಹು

" ಎಲೆ ಲಲನೆ ಏಕಿಂತು ಕೃಶಳಾದೆ ? !
ತಲೆಯ ಕುಂತಲವೆಲ್ಲ ಬಿಳುಪಾದುದೇಕೆ ? !
ಕಣ್ಣುಗಳ ಹೊಳಪಿಲ್ಲ ! ಗಲ್ಲಗಳ ನುಣುಪಿಲ್ಲ !
ಬಾಗಿದಾ ಹುಬ್ಬದುವೆ ಉದುರಿತೇಕೆ ? ! "
ನಾನೆಂತು ಬಡಬಡಿಸಿದರೂ
ಹೇಳಲಾರೆಯಾ ನೀನೆಂದಾಗ——
ನಸುನಕ್ಕು ತೋರಿದಳು ಆಗವಳು ಮಗನನ್ನು
" ಎನ್ನ ಚೆಲುವೆಲ್ಲ ಮಗನಲ್ಲಿ ಮೂಡಿಹುದು
ಮಗನ ರಕ್ತ ಬಿಸಿಯಾಗುವಷ್ಟರಲಿ
ತಣ್ಣಗಾಯಿತೆಲೆ ಎನ್ನಯಾ ರಕುತ "

— ನಾಗಲಕ್ಷ್ಮಿ ಕೆ. ಆರ್.

ಒಮ್ಮೆ ಹೆಣ್ಣು ಮಕ್ಕಳನ್ನು ನಗರಗಳ ಕೆಂಪು ದೀಪಗಳ ನರಕದ ಕೂಪಕ್ಕೆ ತಳ್ಳಿದರೆ, ಅವರನ್ನು ಅಂತಹ ವಿಷ ವರ್ತುಲದಿಂದ ಬಿಡಿಸುವುದು ಸುಲಭದ ಕೆಲಸವಲ್ಲ. ಏನೂ ಅರಿಯದ ಹೆಣ್ಣುಮಕ್ಕಳನ್ನು ಹಣ ದಾಸೆಯಿಂದಾಗಿ, ಅವರುಗಳ ಕನಸನ್ನು – ಜೀವನದ ಆಸೆಯನ್ನೆಲ್ಲಾ ಅರಿಯದ ಕೈಗಳು ಸುಟ್ಟು ಹಾಕಿ, ಅವರುಗಳನ್ನು ಜೀವಂತ ಪ್ರೇತವನ್ನಾಗಿ ಮಾಡುತ್ತಿವೆ. ಇತ್ತೀಚಿನ ಮಹಾರಾಷ್ಟ್ರದ ಸ್ವಯಂ ಸೇವಾ ಸಂಸ್ಥೆಯವರು ಕೆಂಪು ದೀಪದ ನೆರಳಲ್ಲಿ ನಲುಗುತ್ತಿದ್ದ ಅನೇಕ ಮಹಿಳೆಯರನ್ನು ಮದ್ರಾಸು ಸರ್ಕಾರದ ನೆರವಿನಿಂದ ಬಿಡಿಸಿದ್ದನ್ನು ಹಾಗೂ ರಾಜಸ್ಥಾನದಲ್ಲಿ ಹೆಣ್ಣು ಮಕ್ಕಳ ಮಾರಾಟವನ್ನು ತಡೆಗಟ್ಟುತ್ತಿರುವ ಸೇವಾ ಸಂಸ್ಥೆಗಳನ್ನು ಅಭಿನಂದಿಸಬೇಕು. ಇತರರು ಸಹ ಅದೇ ರೀತಿಯನ್ನು ಅನುಸರಿಸಿದರೆ ಅನೇಕರಿಗೆ ಅನುಕೂಲ ಮಾಡಿದಂತಾಗುತ್ತದೆ. ಸೇವಾ ಮನೋಭಾವನೆ ಯಿರುವವರು, ದೊಡ್ಡ ದೊಡ್ಡ ಕೈಗಾರಿಕೋದ್ಯಮಿಗಳು ಇಂತಹ ಹೆಣ್ಣು ಮಕ್ಕಳಿಗೆ ಕೆಲಸ ನೀಡಿ, ಅವರುಗಳು ಸ್ವಾವಲಂಬಿಗಳನ್ನಾಗಿ ಬದುಕಲು ನೆರವು ನೀಡಬೇಕು.

ಧಾರವಾಡದ ಹತ್ತಿರದ ಸವದತ್ತಿಯ ಯಲ್ಲಮ್ಮನ ಹೆಸರಿನಲ್ಲಿ ಬಿಡುವ ದೇವದಾಸಿ ಪದ್ಧತಿಯ ಬಗ್ಗೆ ಸರ್ಕಾರ ಇದೀಗ ನಿಷೇಧ ತಂದಿದೆ. ಈ ದೇವದಾಸಿಯರ ಪುನರ್‌ವಸತಿಗಾಗಿ ಅನೇಕ ಯೋಜನೆಗಳು ಜಾರಿಯಲ್ಲಿವೆ. ಇತ್ತೀಚೆಗೆ ದೇವದಾಸಿಯರಲ್ಲಿ ಮದುವೆಯನ್ನು ಸಹ ನೆರವೇರಿಸಿದೆ. ಇವರ ಮಕ್ಕಳ ಶಿಕ್ಷಣಕ್ಕೆ ನೆರವು ನೀಡುತ್ತಿದೆ. ಈ ಪದ್ಧತಿಯ ವಿರುದ್ಧ ಕರ್ನಾಟಕ, ಮಹಾರಾಷ್ಟ್ರ, ಹಾಗೂ ಆಂಧ್ರಪ್ರದೇಶಗಳಲ್ಲಿ ಕಾನೂನು ಜಾರಿಯಲ್ಲಿವೆ. ಅನೇಕ ಸ್ವಯಂ ಸೇವಾ ಸಂಸ್ಥೆಯವರು ಸಹ ದೇವದಾಸಿಯರ ಪುನರ್ ವಸತಿಗಾಗಿ ಶ್ರಮಿಸುತ್ತಿದ್ದಾರೆ. ಸ್ವಯಂ ಈ ಪದ್ಧತಿಯಲ್ಲಿ ನಿರತರಾಗಿರುವ ತಾಯಂದಿರೇ ಇದನ್ನು ಬಿಡಬೇಕಾಗಿದೆ. ಇಂತಹ ಕ್ರೂರ ಪದ್ಧತಿ ವಿರುದ್ಧವಿರುವ ಕಾನೂನಿನ ಕಣ್ಣು ತಪ್ಪಿಸಿ ದೇವಸ್ಥಾನದಲ್ಲಿ ಜರುಗುತ್ತಿದ್ದ ಮುತ್ತು ಕಟ್ಟಿಸಿಕೊಳ್ಳುವ ಕ್ರಿಯೆ ಇದೀಗ ಮನೆಗಳಲ್ಲಿ ನಡೆಯಲು ಪ್ರಾರಂಭವಾಗಿದೆ. ಇಲ್ಲೆಲ್ಲಾ ಪೋಲೀಸಿನವರು ಗುಪ್ತ ದಳದವರ, ಸ್ವಯಂ ಸೇವಾ ಸಂಸ್ಥೆಯವರ ನೆರವಿನಿಂದ ತಪ್ಪಿತಸ್ಥರನ್ನು ಬಂಧಿಸಿ ಕಠಿಣ ಶಿಕ್ಷೆಗೆ ಗುರಿಪಡಿಸಬೇಕಾಗಿದೆ. ಹಾಗೆಯೇ ಚಂದ್ರ ಗುತ್ತಿಯಲ್ಲಿ ನಡೆಯುವ ಬೆತ್ತಲೆ ಸೇವೆಯ ಬಗ್ಗೆಯೂ ಇನ್ನೂ ತೀವ್ರ ಕ್ರಮ ಕೈಗೊಳ್ಳಬೇಕಾಗಿದೆ.

ಈ ರೀತಿಯ ಅನೇಕ ಪದ್ಧತಿಗಳು ಬಾಲಕಿಯರ, ಹೆಂಗಸರ ಮೇಲೆ ನಡೆಯುತ್ತಿದ್ದರೆ, ಇತ್ತೀಚೆಗೆ ವಿಜ್ಞಾನದ ಮುನ್ನಡೆಯನ್ನು ದುರುಪಯೋಗಪಡಿಸಿಕೊಂಡು ಭ್ರೂಣದ ಹಂತದಲ್ಲಿಯೇ ಲಿಂಗ ಪರೀಕ್ಷೆ ಮಾಡಿಸಿ ಹೆಣ್ಣು ಭ್ರೂಣದ ಹತ್ಯೆ ಮಿತಿಮೀರಿ ನಡೆಯುತ್ತಿದೆ. ಅನುವಂಶಿಕವಾಗಿ ಬರುವಂತಹ ಕಾಯಿಲೆಗಳನ್ನು ಭ್ರೂಣದ ಹಂತದಲ್ಲಿಯೇ ಪರೀಕ್ಷಿಸುವಂತಹ ಕಾರ್ಯ ಅನೇಕ ಕಾಲದಿಂದಲೂ ಇತ್ತು. ಆದರೆ ಇತ್ತೀಚೆಗೆ ಇದನ್ನು ದುರುಪಯೋಗಪಡಿಸಿಕೊಂಡು 'ಸಮಾಜದಲ್ಲಿ ಶೂನ್ಯತೆಗೆ' ಕಾರಣರಾಗುತ್ತಿರುವ ತಂದೆ–ತಾಯನ್ನು, ವೈದ್ಯರನ್ನು ಯಾರೂ ಕ್ಷಮಿಸಬಾರದು. ಈಗಾಗಲೇ ಮಹಾರಾಷ್ಟ್ರ ಸರ್ಕಾರ 1988ರಲ್ಲಿ ನಂತರ ಗೋವಾ ಸರ್ಕಾರ ಕಾನೂನನ್ನು ಜಾರಿಗೆ ತಂದಿವೆ. ರಾಜಸ್ಥಾನ ಹಾಗೂ ಕೇಂದ್ರ ಸರ್ಕಾರದಲ್ಲಿ ಕರಡು ಸಿದ್ಧವಿದೆ. ಇಂತಹ ಪರೀಕ್ಷೆಯನ್ನು ಸರ್ಕಾರ ರದ್ದುಗೊಳಿಸಬೇಕು. ಇಂತಹ ಕ್ರಿಯೆಯ ಬಗ್ಗೆ ಜನಗಳಲ್ಲಿ ಜಾಗೃತಿ–ಅರಿವು ಮೂಡಿಸುವ ಕೆಲಸವನ್ನು ಇನ್ನೂ ತೀವ್ರಗತಿಯಲ್ಲಿ ಮಾಡಬೇಕಾದ ಹೊಣೆ ಎಲ್ಲರ ಮೇಲೆಯೂ ಇದೆ.

ಉತ್ತೇಜನದ ಹಾದಿ : ಇತ್ತೀಚೆಗೆ ಸರ್ಕಾರ ಹೆಣ್ಣು ಮಕ್ಕಳಿಗೆ ಉತ್ತೇಜನೆ ನೀಡಲು ಸ್ವಾವಲಂಬಿಯಾಗುವಂತೆ ಪ್ರೋತ್ಸಾಹಿಸಲು ಹುದ್ದೆಗಳಲ್ಲಿ ಶೇಕಡ 30ರಷ್ಟು ಮೀಸಲಾತಿಯನ್ನು ಜಾರಿಗೆ ತಂದಿದೆ. ಸ್ವಯಂ ಉದ್ಯೋಗ ನಡೆಸಲು ಉಚಿತವಾಗಿ ತರಬೇತಿ ಕಾರ್ಯಕ್ರಮಗಳಿವೆ. ಉಗ್ರಾಣಗಳನ್ನು ಆದ್ಯತೆಯ ಮೇರೆಗೆ ಕೊಡುತ್ತಿದ್ದಾರೆ. ಸರ್ಕಾರದ ಜೊತೆಗೆ ಕೆಲವು ರಾಷ್ಟ್ರೀಕೃತ ಬ್ಯಾಂಕುಗಳು ಸಹ ಮಹಿಳಾ ಉದ್ಯಮಿಗಳಿಗೆ ಆರ್ಥಿಕ ನೆರವು ನೀಡುತ್ತಿವೆ. ಎಲ್ಲರೂ ದೊಡ್ಡ ಉದ್ಯಮಿಗಳೇ ಆಗಬೇಕಿಲ್ಲ. ಕಡಿಮೆ ಬಂಡವಾಳದಿಂದಲೇ, ಮಹಿಳೆಯರು ಬಿಡುವಿನ ವೇಳೆಯ ಸದುಪಯೋಗ ಪಡೆದುಕೊಂಡು ಮನೆಗಳಲ್ಲಿಯೇ ಅನೇಕ ಕೆಲಸಗಳನ್ನು ಮಾಡಬಹುದು. ದೇಶದ ಆರ್ಥಿಕಾಭಿವೃದ್ಧಿಗೆ ಪ್ರತಿ ಯೊಬ್ಬರೂ ಶ್ರಮಿಸಿದಾಗ ಮುನ್ನಡೆ ಹೊಂದಲು ಸಾಧ್ಯ

ಒಟ್ಟಿನಲ್ಲಿ ಹೆಣ್ಣು ಮಕ್ಕಳ ಅಳಿವು–ಉಳಿವು ಎಲ್ಲರ ಕೈಯಲ್ಲಿದೆ. ನಮ್ಮ ಕಂದಾಚಾರ, ಹಳೆ ಸಂಪ್ರದಾಯಗಳಿಂದ ಈ ವರೆಗೆ ಹೆಣ್ಣು ಮಕ್ಕಳು ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದಾರೆ. ಈ ಪರಿಸ್ಥಿತಿ ಬದಲಾಗಲು ಪ್ರತಿಯೊಬ್ಬರೂ ಶ್ರಮಿಸಬೇಕಾಗಿದೆ. ಗಂಡು ಮಗುವಿಗಾಗಿ 'ಹರಕೆ' ಹೊರುವುದು, ಹೆಣ್ಣು ಮಗು 'ಖರ್ಚಿನ ಬಾಬತ್ತು' 'ಹೊರೆ' ಎನ್ನುವ ಯೋಚನೆಯನ್ನು ಬಿಡಬೇಕು. ಹಾಗೆಯೇ ದೊಡ್ಡವರಿಗೆ ಹೆಣ್ಣು ಮಕ್ಕಳು ನಮಸ್ಕರಿಸಿದಾಗ 'ಪುತ್ರವತಿ'ಯಾಗೆಂದು ಹರಸುವುದನ್ನು ಬಿಡಬೇಕು. ಮಕ್ಕಳನ್ನು ಹೊಂದ ಬೇಕೆಂದು ನಿರ್ಧರಿಸಿದಾಗ, ಹೆಂಗಸರ ಆರೋಗ್ಯದ ಕಡೆ ಗಮನ ಕೊಡಬೇಕು. ಸಮೂಹ ಮಾಧ್ಯಮಗಳು ಹೆಣ್ಣನ್ನು ಅಸಹಾಯಕ ಹೆಂಗಸೆಂಬಂತೆ ತೋರಿಸಬಾರದು. ನಮ್ಮ ಸಂವಿಧಾನದಲ್ಲಿ ಪುರುಷರಿಗೆ–ಸ್ತ್ರೀಯರಿಗೆ ಸಮಾನ ಅವಕಾಶವನ್ನು ಹೇಳಿದ್ದರೂ ಗಂಡು–ಹೆಣ್ಣು ಮಕ್ಕಳಲ್ಲಿ ತಾರತಮ್ಯವನ್ನು ತಂಧೆ–ತಾಯಿಯರೇ ಮಾಡುತ್ತಿದ್ದಾರೆ. ಆದರೆ ಪ್ರಕೃತಿ ನಿಯಮ ಹೆಣ್ಣು–ಗಂಡಿನ ಸಮ್ಮಿಲನ ವಿಲ್ಲದೆ ಸಂಸಾರ ಬೆಳೆಯುವ ಬಗೆ ಹೇಗೆ? ಈ ಕುರಿತು ಯೋಚಿಸಬೇಕಲ್ಲವೇ? ಕುಲ ಕಸುಬನ್ನು ನೋಡಿಕೊಳ್ಳಲು ಹಾಗೂ ದೊಡ್ಡ ದೊಡ್ಡ ಉದ್ದಿಮೆದಾರರು ತಮ್ಮ ಕೈಗಾರಿಕೆಗಳನ್ನು ನೋಡಿಕೊಳ್ಳಲು ಗಂಡು ಮಕ್ಕಳೇ ಇರಬೇಕೆಂದು ಭಾವಿಸದೆ, ತಮ್ಮ ಹೆಣ್ಣು ಮಕ್ಕಳು ನಡೆಸಿಕೊಂಡು ಹೋಗುವಂತೆ ತರಬೇತಿ ನೀಡಬೇಕು. ಈಗಾಗಲೆ ನಮ್ಮ ದೇಶದಲ್ಲಿನ ಮಹಿಳಾ ಉದ್ಯಮಿಗಳು ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹೆಸರನ್ನು ಪಡೆದಿರುವರು. ಹಾಗೆಯೇ ಅಂತ್ಯ ಸಂಸ್ಕಾರ ಮಾಡಲು ಹೆಣ್ಣು ಮಕ್ಕಳಿಗೂ ಅವಕಾಶ ನೀಡಬೇಕು.

ಬಹುಶಃ 21ನೇ ಶತಮಾನಕ್ಕೆ ಕಾಲಿರಿಸುವ ಹೊತ್ತಿಗೆ ಸರ್ಕಾರ ಹಾಗೂ ಸೇವಾ ಮನೋಭಾವದ ಸಂಘ–ಸಂಸ್ಥೆಯವರು ಹಾಗೂ ತಂದೆ–ತಾಯಂದಿರು ಹೆಣ್ಣು ಮಕ್ಕಳಿಗೆ ಜನ್ಮ ಸಿದ್ಧವಾಗಿ ಸಿಗಬೇಕಾಗಿರುವ ಹಕ್ಕು ಮತ್ತು ಇತರ ಸೌಲಭ್ಯಗಳನ್ನು ದೊರಕಿಸಿ ಕೊಡಬೇಕು. ಸಂಪ್ರದಾಯಗಳ ಬಂಧನದಿಂದ ಮುಕ್ತಿ ಹೊಂದಿದ, ಆರೋಗ್ಯಕರವಾದ ಸುಶಿಕ್ಷಿತ ಧೈರ್ಯವಂತ ಹೆಣ್ಣು ಮಕ್ಕಳನ್ನು ಮುಂಬರುವ ದಿನಗಳಲ್ಲಿ ನಾವೆಲ್ಲರೂ ನೋಡುವಂತಾಗಬೇಕು. ಹಾಗೆಯ ಸ್ವತಃ ಹೆಣ್ಣು ಮಕ್ಕಳು ಸಹ ತಮ್ಮ ಉಳಿವಿನ ಬಗ್ಗೆ ಯೋಚಿಸಿ ತಮಗಿರುವ ಅನುಕೂಲಗಳ ಸದುಪಯೋಗ ಮಾಡಿಕೊಂಡು ಚೆನ್ನಾಗಿ ಬದುಕುವಂತಾಗಬೇಕು.

## ಲೋಕಜ್ಞಾನ

### ಪ್ರಶ್ನೆಗಳು

1. ನೊಬೆಲ್ ಪ್ರಶಸ್ತಿ ಗಳಿಸಿದ ಮೊದಲ ಮಹಿಳೆ ಯಾರು?
2. 'ಕ್ವೀನ್‌ಬಿ' ಎಂದು ಕರೆಯಲ್ಪಡುವ ಹೆಸರಾಂತ ಟೆನ್ನಿಸ್ ಆಟಗಾರ್ತಿ
3. ವಿಶ್ವ ಸೌಂದರ್ಯ ಸ್ಪರ್ಧೆಯಲ್ಲಿ ಈವರೆಗೆ ಪ್ರಶಸ್ತಿ ಪಡೆದ ಏಕ ಮಾತ್ರ ಭಾರತೀಯ ಮಹಿಳೆ.
4. ಆನಿ ಬೆಸೆಂಟ್ ಅವರ ನೇತೃತ್ವದಿಂದ ಆರಂಭವಾದ ಸೇವಾ ಸಂಸ್ಥೆ
5. ಮೊದಲ ಎಲಿಜಬೆತ್ ರಾಣಿ ಅಧಿಕಾರಕ್ಕೆ ಬಂದಿದ್ದು ಯಾವಾಗ?
6. ರೋಮನ್ನರ ಯುದ್ಧದೇವತೆ ಯಾರು?
7. ಇವಾ ಬ್ರೌನ್ ಸರ್ವಾಧಿಕಾರಿಯೊಬ್ಬರ ಪ್ರೇಯಸಿಯಾಗಿದ್ದಾಳೆ, ಆ ಸರ್ವಾಧಿಕಾರಿ ಯಾರು?
8. ಖ್ಯಾತ ಕರ್ನಾಟಕ ಸಂಗೀತ ಗಾಯಕಿ ಎಂ.ಎಸ್. ಸುಬ್ಬುಲಕ್ಷ್ಮಿ ಅವರು 1974ರಲ್ಲಿ ಪಡೆದ ಪ್ರತಿಷ್ಠಿತ ಪ್ರಶಸ್ತಿ
9. 1989ರಲ್ಲಿ ಲೋಕಸಭೆಗೆ ಆಯ್ಕೆಯಾದ ಚಿತ್ರನಟಿ–ನೃತ್ಯಗಾತಿ
10. ಮಹಾತ್ಮಾಗಾಂಧಿ ಅವರ ತಾಯಿಯ ಹೆಸರು
11. ಆರ್. ಕಲ್ಯಾಣಮ್ಮನವರು ಮಕ್ಕಳಿಗಾಗಿ ಸ್ಥಾಪಿಸಿದ ಸಂಸ್ಥೆ
12. ಹಿಂದಿ ಚಿತ್ರರಂಗದ ಖ್ಯಾತ ನಟಿ ಮೀನಾ ಕುಮಾರಿ ಅಭಿನಯಿಸಿದ ಕೊನೆಯ ಚಿತ್ರ

[ಉತ್ತರಗಳು ಇದೇ ಸಂಚಿಕೆಯಲ್ಲಿವೆ. ಹುಡುಕಿ ನೋಡಿ]

* ವಿ.ಜಿ

## 'ಕಥೆಗೊಂದು ಚಿತ್ರ' ಶೀರ್ಷಿಕೆಯಲ್ಲಿ ಆಯ್ಕೆಯಾದ ಕಥೆಗಳು

### ಬಿಡುಗಡೆ

ಸುಜಯನ ಮಾತು ಕೇಳಿ ಕಲ್ಲಾದಳು ಕವಿತಾ. ಈ ಮಾತುಗಳನ್ನು ಹೇಳುತ್ತಿರುವವನು ತನ್ನ ಸುಜಯನೇ? ತನ ಕಿವಿಯನ್ನೇ ನಂಬಲಾರದವಳಾಗಿದ್ದಳು. ಯಾರಿಗೋಸ್ಕರ ತಾನು ತನ್ನ ಹೆತ್ತವರನ್ನು, ಒಡಹುಟ್ಟಿದವರನ್ನು ಮರೆತು ಓಡೋಡಿ ಬಂದಿದ್ದಳೋ, ಯಾರಿಗೆ ತನ್ನ ಜೀವನವನ್ನು ಸಮರ್ಪಿಸಿಕೊಂಡಿದ್ದಳೋ ಸುಜಯನೇ ಇವನು? ವಿಗ್ರಹವಾದಳು ಕವಿತಾ! ಬಟ್ಟೆಗಳನ್ನು ಸೂಟ್‌ಕೇಸಿಗೆ ತುಂಬುತ್ತಾ ಅವನಾಡುತ್ತಿರುವ ಮಾತುಗಳು ಅವಳ ಹೃದಯವನ್ನೇ ಇರಿಯುತ್ತಿತ್ತು! "ಇನ್ನು ಮೇಲೆ ನಮ್ಮಿಬ್ಬರಿಗೂ ಯಾವ ಸಂಬಂಧವೂ ಇಲ್ಲ ಕವಿತಾ! ಇದನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೋ! ನನ್ನ ನಿನ್ನ ಮದುವೆಗೆ ಯಾರ ಸಾಕ್ಷಿಯೂ ಇರಲಿಲ್ಲ.

ನನಗೆ ಬೇಕಾಗಿದ್ದುದು ನಿನ್ನ ಹಣ, ನೀನಲ್ಲ! ನಿನ್ನ ಮುದ್ದು ಮುಖ ನೋಡಿ ನಾನು ಖಂಡಿತಾ ನಿನ್ನ ಹಿಂದೆ ಬರಲಿಲ್ಲ. ನಾನೀಗ ಹೋಗುತ್ತಿದ್ದೇನೆ. ಇಷ್ಟು ದಿನ ಹೆಂಡತಿಯಾಗಿದ್ದುದಕ್ಕೆ ತುಂಬಾ ಥ್ಯಾಂಕ್ಸ್! ಗುಡ್‌ಬೈ'' ಎಂದು ಸೂಟ್‌ಕೇಸನ್ನು ಲಾಕ್ ಮಾಡಿದ ಸಂಜಯ.

ಅವನು ಹೊರಡುತ್ತಿರುವುದನ್ನು ನೋಡಿದ ಕವಿತ ಚಲಿಸಿದಳು.

''ಬೇಡ ಸಂಜು, ನಾನು ನಿನ್ನನ್ನೇ ನಂಬಿ ಬಂದಿದ್ದೀನಿ. ನೀನು ಹೋದರೆ ನನಗ್ಯಾರಿದ್ದಾರೆ. ನನ್ನ ಬಿಟ್ಟು ಹೋಗಬೇಡಿ ಸಂಜು ಪ್ಲೀಸ್. ನಾ ನಿನಗೆ ಅಂಥಾ ಏನು ಮೋಸ ಮಾಡಿದೆ ಅಂತ ಹೋಗ್ತಾ ಇದೀಯ. ಅಥವಾ ಎಲ್ಲಿಗೆ ಹೋಗ್ತಾ ಇದೀಯ ಅದನ್ನಾದ್ರೂ ಹೇಳು ಸಂಜೂ ಪ್ಲೀಸ್'' ಎಂದು ಕಣ್ಣೀರುಗರೆಯಲು ಶುರು ಮಾಡಿದಳು.

''ಥೂ, ಅಳಬೇಡವೇ ಶನಿ! ನಾನು ಹೋಗಾವಾಗ್ಲೆ ಎಲ್ಲಿಗೆ ಹೋಗ್ತೀನಿ ಅಂತ ಕೇಳ್ತೀಯ. ನಾನು ನನ್ನ ಫ್ರೆಂಡ್ ಅನಿತಾ ಜೊತೆಗೆ ಹೋಗ್ತಾ ಇದ್ದೀನಿ. ಎಲ್ಲಿಗೆ ಅಂತ ಕೇಳ್ಬೇಡ'' ಎಂದು ಹೇಳಿ ಸೂಟ್‌ಕೇಸ್ ಎತ್ತಿಕೊಂಡು, ಅಡ್ಡ ನಿಂತಿದ್ದ ಕವಿತಾಳನ್ನು ಎಡಗೈನಿಂದ ದಬ್ಬಿ ನಡೆದ.

ಕವಿತಾ ಇನ್ನು ತಡೆಯದಾದಳು. ಅವನ ಕಾಲು ಹಿಡಿದು ''ಬೇಡ ಸಂಜು ನನಗೋಸ್ಕರವಲ್ಲದಿದ್ರೂ, ನನ್ನ ಹೊಟ್ಟೇಲಿರೋ ನಿನ್ನ ಮಗೂಗೋಸ್ಕರನಾದ್ರೂ ಇರು. ನೀನು ಬೇಕಾದ್ರೆ ಅನಿತಾನ್ನ ಈ ಮನೇಲೆ ಕರ್‍ಕೊಂಡು ಬಂದಿರು. ಆದ್ರೆ ಇಲ್ಲಿಂದ ಮಾತ್ರ ಹೋಗ್ಬೇಡ'' ಎಂದು ಕಾಲನ್ನು ಬಿಗಿಯಾಗಿ ತಬ್ಬುತ್ತಾ ಬಿಕ್ಕಿ ಬಿಕ್ಕಿ ಅತ್ತಳು. ಆದರೆ ಅವಳ ಅಳು ಅರಣ್ಯ ರೋದನವಾಯ್ತು. ಅವಳನ್ನು ಕಾಲಿನಿಂದಲೇ ಝಾಡಿಸಿ, ಸಂಜು ಎದುರು ಬಂದಿದ್ದ ಆಟೋ ಹತ್ತಿದ. ಅವಳು ಬಿದ್ದ ರಭಸಕ್ಕೆ ಹೊಟ್ಟೆಗೆ ಬಲವಾಗಿ ಏಟು ಬಿತ್ತು. 'ಸಂಜೂ' ಎಂದು ಕೂಗುತ್ತಾ ಕವಿತಾ ಪ್ರಜ್ಞಾ ಶೂನ್ಯಳಾದಳು. ಅವಳ ದುಃಖವನ್ನೆಲ್ಲಾ ತಾನು ಹೊತ್ತಂತೆ ಕರಿ ಮೋಡಗಳು ಧೋ ಎಂದು ಮಳೆ ಸುರಿಸುತ್ತಿದ್ದವು.

ಕಣ್ಣು ಬಿಟ್ಟಾಗ ಕವಿತಾ ಆಸ್ಪತ್ರೆಯಲ್ಲಿದ್ದಳು. ಆಸ್ಪತ್ರೆಯ ಬಿಳಿ ಗೋಡೆಯಂತೆ ಅವಳ ಮನಸ್ಸೂ ಶೂನ್ಯವಾಗಿತ್ತು. ಬಾಳಲ್ಲಿ ಅರ್ಥವೇ ಇಲ್ಲವೆನಿಸಿತು. 'ಓ ಪೇಷಂಟ್‌ಗೆ ಎಚ್ಚರವಾಗಿದೆ' ಎಂಬ ದನಿ ಕೇಳಿ ಅತ್ತ ತಲೆ ತಿರುಗಿಸಿದಳು ಕವಿತಾ. ನರ್ಸ್ ಒಬ್ಬಳು ಡಾಕ್ಟರ್‌ನೊಂದಿಗೆ ವಾರ್ಡ್‌ನ ಒಳಗೆ ಪ್ರವೇಶಿಸಿದಳು.

ಡಾಕ್ಟರ್ ಅವಳ ಕೈ ಹಿಡಿದು ನಾಡಿ ನೋಡುತ್ತಾ ''ನೋಡೀಮ್ಮ ನೀವು ಈಗ ಸ್ವಲ್ಪ ಧೈರ್ಯ ತೊಗೋಬೇಕು. ನೀವು ತುಂಬಾ ವೀಕ್ ಆಗಿದ್ದೀರಾ. ಹೊಟ್ಟೇಲಿರೋ ಮಗೂಗೆ ಏಟು ಬಿದ್ದು ಅದನ್ನ ಅಬಾರ್ಷನ್ ಮಾಡಬೇಕಾಯ್ತು. ನೀವೀಗ ಚೆನ್ನಾಗಿ ರೆಸ್ಟ್ ತೊಗೊಳ್ಳಿ. ನಾನು ಕೊಡೋ ಟಾನಿಕ್, ಮಾತ್ರೇನಾ ದಿನಾ ತೊಗೊಳ್ಳಿ'' ಎಂದರು. ಕವಿತಾ ಸುಮ್ಮನೆ ಅವರತ್ತ ನೋಡುತ್ತಾ ತಲೆ ಆಡಿಸಿದಳು.

ಇದಾಗಿ ನಾಲ್ಕು ತಿಂಗಳು ಕಳೆದಿದೆ. ಕವಿತಾ ಪೂರ್ತಿ ಅಲ್ಲದಿದ್ದರೂ ಸ್ವಲ್ಪ ಸ್ವಲ್ಪವಾಗಿ ಚೇತರಿಸಿ ಕೊಳ್ಳುತ್ತಿದ್ದಳು. ಅವಳು ಈಗ ಸ್ಕೂಲ್ ಒಂದರಲ್ಲಿ ಟೀಚರ್. ಅವಳ ಪಕ್ಕದ ಮನೆಯಲ್ಲಿದ್ದ ದಂಪತಿಗಳು ದೇವರಂತೆ ಕಷ್ಟಗಳಿಗೆ ಸಹಾಯ ಮಾಡಿದ್ದರು.

ಕವಿತಾ ಶಾಲೆಗೆ ಹೋಗುವಾಗಲೇ ಶಾಲೆಯ ಪ್ಯೂನ್ ಬಂದು 'ನಿಮ್ಮನ್ನು ಯಾರೋ ಕೂಗುತಿದ್ದಾರಮ್ಮ' ಎಂದ. ಅವನೊಡನೆ ಇನ್‌ಸ್ಪೆಕ್ಟರನ್ನು ನೋಡಿ ಕವಿತಾ ದಂಗಾದಳು. ''ನೀವೇನಾಮ್ಮ ಮಿಸೆಸ್ ಸಂಜಯ? ಸಂಜಯ ಈಗ ಪೋಲೀಸ್ ಸ್ಟೇಶನ್‌ನಲ್ಲಿದ್ದಾರೆ. ನಿಮ್ಮನ್ನು ಕಾಣಬೇಕು ಅಂತಿದ್ದಾರೆ'' ಎಂದು. ಸಂಜಯನ ಹೆಸರು ಕೇಳಿ ಮನ ಕಲ್ಲಾದರೂ, ಕವಿತಾ ಅವರೊಡನೆ ಹೆಡ್‌ಮಾಸ್ಟರರ ಪರ್ಮಿಷನ್ ಕೇಳಿ ನಡೆದಳು.

ಸ್ಟೇಷನ್‌ನಲ್ಲಿ ಇನ್‌ಸ್ಪೆಕ್ಟರ್‌ಗೆ ಎದುರಾಗಿ ತಲೆತಗ್ಗಿಸಿ ನಿಂತಿದ್ದ ಸಂಜಯನನ್ನು ನೋಡಿ ಅವಳ ಗಂಟಲ ಸೆರೆಯುಬ್ಬಿ ಕಣ್ತುಂಬಿ ಬಂತು. ಮನ ಸಂತೋಷದಿಂದ ಚೀರಿಡುತ್ತಿತ್ತು. ಆದರೆ ಹಿಂದಿನದೆಲ್ಲಾ ನೆನೆಸಿಕೊಂಡು ಅವಳ ಮನ ಕೂಡಲೇ ಕಠಿಣವಾಯಿತು. ಇನ್‌ಸ್ಪೆಕ್ಟರ್ ನತ್ತ ನೋಡುತ್ತಾ, ''ಏನು ಸಾರ್? ಏನು ವಿಷಯ?'' ಎಂದಳು.

ಇನ್‌ಸ್ಪೆಕ್ಟರ್ ಕವಿತಾಳಿಗೆ ಕೂರಲು ಹೇಳಿ ಸಂಜಯ ನನ್ನು ನೋಡುತ್ತಾ, ''ನೋಡಮ್ಮ. ಈ ಮನುಷ್ಯ ಹುಡುಗಿಯರನ್ನ ಆಟ ಆಡಿಸ್ತಾ ಇದ್ರು. ಅವರ ಜೀವನ ಹಾಳು ಮಾಡ್ತಾ ಇದ್ದ. ಆದರೆ ಇವನಿಗೇ ಒಬ್ಬಳು ಚಳ್ಳೆ ಹಣ್ಣು ತಿನ್ಸಿದಾಳೆ. ಇವನ ಜೊತೆ ಇದ್ದ ಹುಡುಗಿ ಇವನ ಚಿನ್ನ, ಹಣ, ಎಲ್ಲಾ ತೊಗೊಂಡು ಇನ್ನೊಬ್ಬನ ಜೊತೆಗೆ ಓಡಿ ಹೋಗೋದನ್ನ ನೋಡಿ ಇವನು ಅವಳಿಗೆ ಅರೆಜೀವ ಆಗುವಂತೆ ಹೊಡೆದಿದ್ದಾನೆ. ಅವರಿಬ್ಬರೂ ಈಗ ಕಂಪ್ಲೇಂಟ್ ಕೊಟ್ಟಿದ್ದಾರೆ. ಇವನು ಮಾಡಿದ ತಪ್ಪು ಒಪ್ಪಿಕೊಂಡು ನಿನ್ನ ಜಾಮೀನು ಕೇಳಕ್ಕೆ ಇಲ್ಲಿಗೆ ಕರೆಸಿದ್ದಾನೆ'' ಎಂದರು.

ಕವಿತಾ ಸಂಜುವಿನೆಡೆಗೆ ನೋಡುತ್ತಾ ಹೇಳಿದಳು. ''ಆ ಹುಡುಗಿ ಹೋದ್ಲು ಅಂತ ಇವರು ನನ್ನ ಹುಡುಕಿಕೊಂಡು ಬಂದಿದ್ರೆ, ಆ ಕೆಲ್ಸ ಮಾಡಿ ಇವರು ತಪ್ಪು ಮಾಡಿದ್ದಾರೆ. ಇವರು ಯಾರೋ ನಂಗೆ ಗೊತ್ತಿಲ್ಲ ಸಾರ್. ನನಗೆ ಯಾರೂ ದಿಕ್ಕಿಲ್ಲ. ಈಗ್ಗೆ 3 ತಿಂಗಳ ಹಿಂದೆ ನನ್ನ ಮದುವೆಯಾದವನು ಸತ್ತು ಹೋದ. ಅವನು ಹೋಗುವಾಗಲೇ ನನ್ನ ಮಗುವು ಸತ್ತು ಹೋಯ್ತು. ನಾನೀಗ ಇವರಿಗೆ ಜಾಮೀನು ಕೊಡ್ತೀನಿ! ಆದ್ರೆ ಮನುಷ್ಯತ್ವ ಇರುವುದರಿಂದ ಅಷ್ಟೆ! ನಾನೀಗ ಯಾರ ಪಂಜರದ ಗಿಳಿಯೂ ಅಲ್ಲ! ನನಗೆ ಯಾವತ್ತೋ ಪಂಜರದಿಂದ ಬಿಡುಗಡೆ ಆಗಿದೆ. ಆದ್ರೆ ಈ ಮನುಷ್ಯನಿಗೆ ಹೇಳಿ. ಇನ್ಯಾರ ಜೀವನದಲ್ಲೂ ಕೂಡ ಆಟವಾಡಬೇಡ ಅಂತ'' ಎಂದು ಹೇಳಿ 'ಬರ್ತೀನಿ ಸಾರ್' ಎಂದು ಇನ್‌ಸ್ಪೆಕ್ಟರ್‌ಗೆ ಹೇಳಿ ಎದ್ದು ತಿರುಗಿ ಸರಸರನೆ ನಡೆದು ಹೋದಳು.

**–ವೀಣಾ ಪಿ. ರಾಜೇಂದ್ರ**



ನಮಗಲ್ಲ ಪ್ರಯಾಣಿಕರಿಗೆ ಮಾತ್ರ

## ಅಪರಾಧಿ

ಪೋಲೀಸ್ ಕಂಪ್ಲೇಂಟ್ ಕೊಟ್ಟು ದುಗುಡದಿಂದಲೇ ತಂದೆಯ ಮನೆಗೆ ಬಂದ ಅಮೃತಾ ತೀರಾ ಖಿನ್ನ ಳಾಗಿದ್ದಳು. ಸ್ವಂತ ಮನೆಯ ಅವಳ ಆಶೆಗೆ ತಣ್ಣೀರಿನ ಪ್ರೋಕ್ಷಣೆಯಾಗಿತ್ತು. ಆದರೆ ಆಶ್ಚರ್ಯವೆಂಬಂತೆ ಮಧ್ಯಾಹ್ನವೇ ಪೋಲೀಸ್ ಇನ್‌ಸ್ಪೆಕ್ಟರ್ ಕಳ್ಳನ ಪತ್ತೆಯಾಗಿದೆಯೆಂದು ಫೋನ್ ಮಾಡಿದ್ದರು. ಇಷ್ಟು ಶೀಘ್ರ ಕಳ್ಳನ ಪತ್ತೆಯಾದುದಕ್ಕೆ ಸಂಭ್ರಮಿಸುತ್ತಾ ತಾಯಿಗೆ ತಿಳಿಸಿ ಮನೆಯಿಂದ ಹೊರಟಳು ಅಮೃತಾ.

ಅವಳ ಮನಸ್ಸು ನಡೆದ ಘಟನೆಗಳನ್ನೆಲ್ಲಾ ಮೆಲುಕು ಹಾಕುತ್ತಾ ನಡೆದಿತ್ತು. ರಾಮರಾಯರ ಗಂಡು ಮಕ್ಕಳ ಪಾಳ್ಯದ ನಡುವೆ ಮುದ್ದಿನ ಕುವರಿಯಾಗಿ ಬೆಳೆದವಳು ಅಮೃತಾ. ಸ್ವಾಭಿಮಾನಿ, ಹಿಡಿದ ಕೆಲಸವನ್ನು ಶತಾಯ ಗತಾಯ ಸಾಧಿಸುವ ಛಲದವಳು. ಪದವೀಧರೆಯಾದ ಕೂಡಲೇ ಅವಳನ್ನು ಇಂಜಿನಿಯರ್ ಗಂಡಿಗೇ ಕೊಟ್ಟು ಅದ್ದೂರಿಯಾಗಿ ಮದುವೆ ಮಾಡಿದ್ದರು ಅವಳ ತಂದೆ.

ಮದುವೆಯಾದ ಹೊಸತರಲ್ಲಿ ಎಲ್ಲಾ ಚೆನ್ನಾಗಿಯೇ ಇತ್ತು. ಆದರೆ ಕ್ರಮೇಣ ಅಮೃತಾಳಿಗೆ ಗಂಡ ಅಖಿಲೇಶ್‌ನ ಒಂದೊಂದೇ ಅವಗುಣಗಳ ಪರಿಚಯ ಆಗತೊಡಗಿತ್ತು. ದೊಡ್ಡ ಹುದ್ದೆಯಲ್ಲಿದ್ದು, ಕೈ ತುಂಬಾ ಸಂಬಳ ಬರುತ್ತಿದ್ದರೂ ತಿಂಗಳ ಕೊನೆಯಲ್ಲಿ ಪರದಾಟ ಇದ್ದದ್ದೇ. ಎಷ್ಟು ಹಣವಿದ್ದರೂ ಅಖಿಲೇಶನ ಮೋಜಿನ ಜೀವನಕ್ಕೇ ಸಾಲುತ್ತಿರಲಿಲ್ಲ. ಕುಡಿತ, ಪಾರ್ಟಿ, ಗೆಳೆಯರು ಕ್ಲಬ್ ಇದೇ ಅವನ ಸರ್ವಸ್ವ.

ಮೂರೇ ವರ್ಷಗಳಲ್ಲಿ ಎರಡು ಹೆಣ್ಣು ಮಕ್ಕಳ ತಾಯಿಯಾದಾಗಲಂತೂ ಗಂಡನ ಬೇಜವಾಬ್ದಾರಿ ತನದಿಂದ ರೋಸಿ ಹೋದಳು. ಸೂಚ್ಯವಾಗಿ ಅವನನ್ನು ತಿದ್ದಲು ಹೊರಟಾಗ ಅವನು ಹೇಳಿದ್ದಾದರೂ ಏನು? ''ಹೇಗೂ ನೀನು ಪದವೀಧರೆಯಲ್ಲವೇ? ಒಂದು ಕೆಲಸಕ್ಕೆ ಸೇರಿಕೋ. ನೀನೂ ಆರಾಮಿರಬಹುದು. ನನಗೂ ನಿನ್ನ ಕಾಟ ಇರುವುದಿಲ್ಲ''

ತನ್ನ ಮಕ್ಕಳ ಭವಿಷ್ಯವನ್ನು ರೂಪಿಸಲು ಅಮೃತಾ ಬ್ಯಾಂಕಿನಲ್ಲಿ ಉದ್ಯೋಗವನ್ನು ದೊರಕಿಸಿಕೊಂಡಳು. ಮಕ್ಕಳನ್ನು ಉತ್ತಮ ಶಾಲೆಗೆ ಸೇರಿಸಿದಳು. ಪ್ರತಿ ಯೊಂದಕ್ಕೂ ಗಂಡನನ್ನು ಗೋಗರೆಯುವ ಪರಿಸ್ಥಿತಿ ಈಗಿರಲಿಲ್ಲ. ಗಂಡನ ಕೈಯಲ್ಲಿ ಒಂದು ಚಿಕ್ಕಾಸೂ ಉಳಿತಾಯವಾಗುವುದಿಲ್ಲ ಎಂದು ಅರಿತಿದ್ದ ಅಮೃತಾ ಅಚ್ಚು ಕಟ್ಟಾಗಿ ಸಂಸಾರ ನಿಭಾಯಿಸುತ್ತಾ, ತಮ್ಮದೇ ಆದ ಒಂದು ಸ್ವಂತ ಗೂಡಿನ ಆಸೆಯಲ್ಲಿ ಹಣವನ್ನು ಒಟ್ಟು ಮಾಡತೊಡಗಿದಳು. ಬ್ಯಾಂಕಿನ ನೆರವೂ ಅವಳಿಗೆ ಸಿಕ್ಕಿತು. ಫ್ಲ್ಯಾಟೊಂದರಲ್ಲಿ ಸುಂದರ ಮನೆ ಯನ್ನು ಕೊಳ್ಳುವ ನಿರ್ಧಾರ ಮಾಡಿ, ಕಡಿಮೆ ಬಂದ

25 ಸಾವಿರ ರೂಪಾಯಿಗಳನ್ನು ಗೆಳತಿಯರ ಮೂಲಕ ಪಡೆದು ತಂದಳು. ಅದೇ ಹೊತ್ತಿಗೆ ತಾಯಿ ಬಚ್ಚಲಿನಲ್ಲಿ ಜಾರಿ ಬಿದ್ದ ಸುದ್ದಿ ತಿಳಿದು ಹಣವನ್ನು ಬೀರುವಿನಲ್ಲಿಟ್ಟು ಅದೇ ಊರಿನಲ್ಲಿರುವ ತಾಯಿ ಮನೆಗೆ ತೆರಳಿ ಎರಡು ದಿನ ಬಿಟ್ಟು ಬಂದಾಗ ಅವಳ ಹಣ ಕಾಣೆಯಾಗಿತ್ತು.

ಯೋಚಿಸುತ್ತಾ ಅಮೃತ ಪೋಲಿಸ್ ಸ್ಟೇಷನ್ ತಲುಪಿದ್ದಳು. ಇನ್ಸ್‌ಪೆಕ್ಟರ್ ನಗುತ್ತಾ ಇವಳನ್ನು ಸ್ವಾಗತಿಸಿದರು. ಆದರೆ ಅಮೃತಾಳಿಗೆ ಆತುರ, 'ಕಳ್ಳ ಯಾರಾಗಿರಬಹುದು? ಕೆಲಸದ ಲಕ್ಷ್ಮಿಯೇ, ಇಸ್ತ್ರಿ ಬಟ್ಟೆ ತರುವ ಹುಡುಗನೇ, ಹಾಲು ಹಾಕುವ ಗಂಗಪ್ಪನೇ?' ಎಂದು ಊಹಿಸುತ್ತಿದ್ದವಳಿಗೆ ಎದುರಿಗೆ ತಲೆತಗ್ಗಿಸಿ ನಿಂತ ವ್ಯಕ್ತಿಯನ್ನು ಕಂಡು ಆಶ್ಚರ್ಯವಾಗಿತ್ತು. ಆ ವ್ಯಕ್ತಿ ಮತ್ತಾರೂ ಅಲ್ಲ ಅಖಿಲೇಶ್. ಸ್ವತಃ ತನ್ನ ಮನೆಯನ್ನೇ ದೋಚಿದ್ದ. ವಿಷಯವಿಷ್ಟೇ, ಎಲ್ಲಾ ಜೂಜಾಟಗಳನ್ನೂ ಮೈಗೂಡಿಸಿಕೊಂಡಿದ್ದ ಅಖಿಲೇಶ್‌ಗೆ ಬೀರುವಿನಲ್ಲಿದ್ದ 25 ಸಾವಿರ ರೂಪಾಯಿಗಳು ಒಮ್ಮೆಗೆ ಕಂಡಾಗ, ಕುದುರೆ ರೇಸ್ ಕಣ್ಮುಂದೆ ಕುಣಿದಿತ್ತು. 25 ಸಾವಿರ ಕ್ಷಣ ಮಾತ್ರದಲ್ಲಿ ಕರಗಿಹೋಗಿತ್ತು. ಇನ್ಸ್‌ಪೆಕ್ಟರ್ ವಿವರಿಸುತ್ತಿದ್ದರೆ, ಅಮೃತಾಳ ಹೃದಯ ಚೂರುಚೂರಾದ ತನ್ನ ಕನಸಿನ ಗೂಡನ್ನು ಕುರಿತು ರೋಧಿಸುತ್ತಿತ್ತು. ಪುನಃ ಹಣದ ವ್ಯವಸ್ಥೆಯಾಗಬೇಕಲ್ಲಾ ಎಂಬ ಚಿಂತೆಯಲ್ಲಿದ್ದ ಅಮೃತಾಳಿಗೆ 'ಕಂಪ್ಲೇಂಟ್ ವಾಪಸ್ ತಗೋಳ್ತೀರಾ?' ಎಂಬ ಇನ್ಸ್‌ಪೆಕ್ಟರ್‌ರ ಮಾತು ಕೇಳಿಸಲೇ ಇಲ್ಲ. ಇದಾವುದೂ ತನಗೆ ಸಂಬಂಧವಿಲ್ಲವೆಂಬಂತೆ ಅಖಿಲೇಶ್ ಅಪರಾಧಿ ಸ್ಥಾನದಲ್ಲಿ ನಿಂತಿದ್ದ.

**–ಶ್ರೀಮತಿ ಯಶೋದ ಎಂ. ಗೋಪಿ**
ಕಲ್ಲಮುಂಡ್ಕೂರು – 574 272

## ಅಭಿಮಾನ

ಕುಮಾರ್ ಕಂಪೆನಿಯೊಂದರಲ್ಲಿ ಆಫೀಸರ್ ಆಗಿ ಕೆಲಸ ಮಾಡುತ್ತಿದ್ದ. ಹೆಚ್ಚಾಗಿಯೇ ಸಂಬಳ ಪಡೆಯುತ್ತಿದ್ದ ಅವನು ತನ್ನ ದೊಡ್ಡದಾದ ಬಂಗಲೆಯಲ್ಲಿ ತಾಯಿಯೊಂದಿಗೆ ಇರುತ್ತಿದ್ದ. ಪ್ರತಿದಿನ ತನ್ನ ತಪ್ಪಿಲ್ಲದಿದ್ದರೂ ಯಾವುದಾದರೂ ಕಾರಣದಿಂದ ತನ್ನ ಬಾಸ್ ಕೈಲಿ ಬೈಗುಳ ತಿನ್ನಬೇಕಾಗುತ್ತಿತ್ತು. ಆದ್ದರಿಂದ ಅವನು ಮನೆಯಲ್ಲಿ ನಿಶ್ಶಬ್ದದ ಸ್ನೇಹವನ್ನು ಬಯಸುತ್ತಿದ್ದ. ಮಿತಭಾಷಿಯಾದ ಅವನ ತಾಯಿ ಗೌರಮ್ಮ ಸ್ವಲ್ಪ ಮಾತಾಡಿದರೂ ರೇಗುತ್ತಿದ್ದ. ಆದ್ದರಿಂದ ಅವರು ಮಾತನಾಡುವುದನ್ನೇ ಬಿಟ್ಟಿದ್ದರು. ಹೀಗಿರುವಾಗ ಅವನಿಗೆ ಶ್ರೀಮಂತರ ಮನೆಯ ಗೀತಾ ಎಂಬ ಹುಡುಗಿಯೊಂದಿಗೆ ಮದುವೆಯಾಯಿತು. ಅವಳು ಸ್ವಭಾವತಃ ವಾಚಾಳಿಯಾಗಿದ್ದಳು. ಅವಳ ಅರಳು ಹುರಿದಂತಹ ಮಾತು ಗೌರಮ್ಮನಿಗೆ ಬಹಳ ಪ್ರಿಯವಾಗಿತ್ತು. ಅವಳ ಜೊತೆಯಲ್ಲಿ ಮನಸ್ಸು ಬಿಚ್ಚಿ ಮಾತನಾಡುತ್ತಿದ್ದರು. ಆದರೆ ಸಂಜೆ ಸಮೀಪಿಸುತ್ತಿದ್ದಂತೆ ಮೌನವ್ರತ ಆಚರಿಸುತ್ತಿದ್ದರು. ಅವರ ಈ ವರ್ತನೆ ಗೀತಳಿಗೆ ಕುತೂಹಲ ಕೆರಳಿಸಿತಾದರೂ ಕೇಳಲು ಸಂಕೋಚವಾಗಿ ಸುಮ್ಮನಿರುತ್ತಿದ್ದಳು. ಆದರೆ ತನ್ನ ಮಾತನ್ನು [illegible]ಸುತ್ತಿರಲಿಲ್ಲ. ಸಂಜೆ ಕೆಲಸದಿಂದ ಬಂದ ಕುಮಾರನಿಗೆ ಗೀತಳ ಮಾತನ್ನು ಕೇಳಿದಾಗ ಮೈ [illegible]ತ್ತಿತ್ತು. ಅವನು ಎಷ್ಟೋ ಬಾರಿ ಎಚ್ಚರಿಸಿದ್ದರೂ ಹಾಸ್ಯಕ್ಕೆ ಹೇಳುತ್ತಾನೆಂದು ತಿಳಿದು ತನ್ನ ಅಭ್ಯಾಸ ಬಿಡಲಿಲ್ಲ. ಒಂದು ದಿನ ತನ್ನ ಬಾಸ್‌ನಿಂದ ಬೈಗುಳಗಳಿಂದ ತುಂಬಿದ ದೀರ್ಘಭಾಷಣ ಕೇಳಿ ಬಂದಿದ್ದ ಕುಮಾರನಿಗೆ, ಇವಳ ಮಾತು ಕೇಳಿ ಸಿಟ್ಟು ನೆತ್ತಿಗೇರಿ, ಅವಳ ಕಪಾಳಕ್ಕೆ ಹೊಡೆದನು. ಇದರಿಂದ ಅವಮಾನಿತಳಾದ ಗೀತ ಅಳುತ್ತಾ, ತನ್ನ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿದಳು. ಗೌರಮ್ಮನಿಗೆ ಇದರಿಂದ ನೋವಾದರೂ ತಮ್ಮ ಮಗನ ಭಯದಿಂದ ಸುಮ್ಮನಾದರು. ಮಾರನೆಯ ದಿನ ಕುಮಾರ ಕೆಲಸಕ್ಕೆ ಹೋದ ನಂತರ, ಗೀತ ತನ್ನ ಮನಸ್ಸಿನ ಗೊಂದಲಕ್ಕೆ ಕಾರಣವಾದ ಕುಮಾರನ ನಿಶ್ಶಬ್ದ ಪ್ರಿಯತೆಯ ಕಾರಣವನ್ನು ಗೌರಮ್ಮನ ಹತ್ತಿರ ಕೇಳಿದಳು. ಇಷ್ಟು ದಿನ ಮುಚ್ಚಿಟ್ಟಿದ್ದ ಆ ವಿಷಯವನ್ನು ಅವರು ಗೀತಳಿಗೆ ಹೇಳಿದರು. ಅವಳು ಅಂದಿನಿಂದ ಹೆಚ್ಚಾಗಿ ಮಾತನಾಡುವುದನ್ನು ಬಿಟ್ಟಳು. ತನ್ನ ಅತ್ತೆಯನ್ನೇ ಅನುಕರಿಸಲು ಶುರುಮಾಡಿದಳು. ಇದರಿಂದ ಕುಮಾರನ ಮನಸ್ಸಿನಲ್ಲಿ ನೆಮ್ಮದಿ ನೆಲೆಯೂರಿತು. ಆದರೆ ಈ ನೆಮ್ಮದಿ ಬಹುಕಾಲ ಉಳಿಯಲಿಲ್ಲ. ಕೆಲಸದಲ್ಲಿ ನಿಷ್ಠಾವಂತನಾಗಿದ್ದ ಕುಮಾರನನ್ನು ಕಂಡರೆ ಅವನ ಬಾಸ್‌ಗೆ ಒಂದು ರೀತಿಯ ಅಸೂಯೆಯಿತ್ತು. ಅವನು ತನಗಿಂತ ಮೇಲೇರಬಹುದೆಂಬ ಶಂಕೆಯಿತ್ತು. ಆ ಕಾರಣದಿಂದಾಗಿಯೇ ಆ ಧೂರ್ತನು ಕಂಪೆನಿಯ ಪ್ರಾಡಕ್ಟ್‌ಗಳ ಜೊತೆಗೆ ಕಳಪೆ ಪ್ರಾಡಕ್ಟ್‌ಗಳನ್ನು ಸೇರಿಸಿದ. ಈ ವಿಷಯ ಬಯಲಿಗೆ ಬಂದಾಗ, ಅವನ ಮೇಲಧಿಕಾರಿಗಳು ಈ ಬೇಜವಾಬ್ದಾರಿ ಕೆಲಸಕ್ಕೆ ಕಾರಣರಾರೆಂದು ವಿಚಾರಿಸಿದಾಗ, ಇದಕ್ಕೆ ಕುಮಾರನೇ ಕಾರಣನೆಂದು ಅವನ ಬಾಸ್ ಅವರಿಗೆ ತಿಳಿಸಿದ. ಈ ಕಾರಣದಿಂದ ಕುಮಾರನಿಗೆ ಜೈಲಾಯಿತು. ಅವನು ಜೈಲಿನಲ್ಲಿ ಒಂದೊಂದು ದಿನವನ್ನೂ ಬಹಳ ಕಷ್ಟದಿಂದ ಕಳೆಯಬೇಕಾಯಿತು. ಹೀಗೆ ಒಂದು ವಾರ ಕಳೆಯಿತು. ನಂತರ ಒಂದು ದಿನ ಪೇದೆಯೊಬ್ಬ ಇನ್ಸ್‌ಪೆಕ್ಟರ್ ಕರೆಯುತ್ತಿದ್ದಾರೆಂದು ಅವನನ್ನು ಅವರ ಬಳಿ ಕರೆದುಕೊಂಡು ಹೋದ. ಅಲ್ಲಿ ಇನ್ಸ್‌ಪೆಕ್ಟರ್ ಜೊತೆ ಮಾತನಾಡುತ್ತಿದ್ದ ಗೀತಳನ್ನು ಕಂಡು ಅಚ್ಚರಿಯಾಯಿತು. ನಂತರ ಗೀತಳೇ ತನಗೆ ಜಾಮೀನು ಕೊಟ್ಟು ಜೈಲಿನಿಂದ ಬಿಡಿಸಿರುವಳೆಂದು ಇನ್ಸ್‌ಪೆಕ್ಟರ್‌ರಿಂದ ತಿಳಿಯಿತು. ಆಗ ಸಂತೋಷದ ಜೊತೆಗೆ ಹಿಂದೆ ತಾನು ಅವಳೊಂದಿಗೆ ನಡೆದುಕೊಂಡ ರೀತಿಯನ್ನು ನೆನೆದು ಬಹಳ ನೊಂದುಕೊಂಡ ಮತ್ತು ನಾಚಿಕೆಪಟ್ಟುಕೊಂಡ. ಮನೆಗೆ ಬಂದ ಕುಮಾರ ತನ್ನ ನೋವನ್ನು ಹೇಳಿಕೊಳ್ಳಲಾರದೆ ಒದ್ದಾಡುತ್ತಿದ್ದ. ಇದನ್ನು ಗಮನಿಸಿದ ಗೀತಳೆ ಅವನೊಂದಿಗೆ ಮಾತನಾಡಿದಳು. "ನಿಮ್ಮ ಮನಸ್ಸು ನನಗರ್ಥವಾಗುತ್ತದೆ. ನೀವು ನನಗೆ ನೋವನ್ನು ಕೊಟ್ಟಿರಬಹುದು. ಆದರೆ ನೀವು ನನಗೆ ತಾಳಿ ಕಟ್ಟಿದ ಗಂಡ. ದಾಂಪತ್ಯದಲ್ಲಿ ಇಂತಹ ಘಟನೆಗಳು ನಡೆಯುತ್ತಲೇ ಇರುತ್ತದೆ. ಆದ್ದರಿಂದ ಸೋಲುಗೆಲುವಿನ ಬಗ್ಗೆ ಯೋಚಿಸದೆ ಹೊಂದಿಕೊಂಡು ಹೋದರೇನೇ ಎಲ್ಲರ ಮನಸ್ಸಿಗೂ ನೆಮ್ಮದಿ. ನೀವು ಇನ್ನೆಂದೂ ಆ ಕಂಪನಿಯ ಬಳಿ ಸುಳಿಯಬಾರದು. ಆ ಕಂಪನಿಯ ಪಕ್ಕದಲ್ಲೇ ನಾವು ನಮ್ಮದೇ ಆದ ಸ್ವಂತ ಕಂಪನಿಯನ್ನು ತೆಗೆಯಬೇಕು. ನಮ್ಮಲ್ಲಿರುವ ಹಣದ ಜೊತೆಗೆ ನಮ್ಮ ತಂದೆಯವರ ಹತ್ತಿರವೂ ಸ್ವಲ್ಪ ಹಣವನ್ನು ಸಾಲವಾಗಿ ತೆಗೆದುಕೊಂಡು ಕಂಪನಿಯನ್ನು ತೆರೆಯೋಣ. ಅದು ಲಾಭ ಗಳಿಸುವಂತೆ ಕಷ್ಟಪಟ್ಟು ದುಡಿಯೋಣ. ಹೆಚ್ಚು ಸಂಬಳದ ಆಸೆಯಿಂದ ಆ ನಿಮ್ಮ ಬಾಸ್ ಇಲ್ಲಿ ಕೆಲಸಕ್ಕೆ. ಸೇರುವಂತೆ ಮಾಡಬೇಕು. ನಿಮ್ಮನ್ನು ಅವಮಾನಗೊಳಿಸಿದ್ದರಿಂದಾಗಿ ನೀವು ಅವನ ವಿರುದ್ಧ ಪ್ರತೀಕಾರ ತೀರಿಸಿಕೊಂಡಾಗಲೇ ನನಗೆ ತೃಪ್ತಿ. ಆಗಲೆ ನನಗೆ ಸಂತೋಷ. ಅಲ್ಲಿಯವರೆಗೆ ನನಗೆ ಸಂತೋಷವಿಲ್ಲ" ಎಂದಳು. ಪ್ರತೀಕಾರ ತುಂಬಿದ ಅವಳ ಮಾತುಗಳನ್ನು ಕೇಳಿ ಕುಮಾರ ಸ್ತಬ್ಧನಾಗಿ ನಿಂತುಬಿಟ್ಟ. ಅವನ ಕಣ್ಣಿನಲ್ಲಿ ಅವಳ ಬಗ್ಗೆ ಅಭಿಮಾನ ಚಿಮ್ಮಿ ಆನಂದಾಶ್ರುಗಳ ಮೂಲಕ ಹೊರಬಂದಿತ್ತು.

**–ಪ್ರತಿಭಾ ಎಸ್.**
ಬೆಂಗಳೂರು

## ದೀಪ

ಆ ದೀಪ
ಈ ದೀಪ
ಯಾಕೆ?
ದಿಟ್ಟಿಸಿ ನೋಡು
ಗೆಳೆಯಾ
ನನ್ನ ಕಣ್ಣಾಗ
ಕಾಣುವ ಪ್ರೀತಿಯ
ನಂದಾದೀಪ

–ಸುಭದ್ರಾ, ಬಡಿಗೇರ
ತೆಗ್ಗಿನ ಪೇಟೆ

## ಬಯಲು

"ಅರೆ, ನಾಗೇಂದ್ರ ನೀನಾ? ನಾನ್ಹೆದರಿ ಬಿಟ್ಟಿದ್ದೆ. ಇದೇನಪ್ಪಾ ಡ್ಯೂಟಿ ಅವರ್ಸ್‌ನಲ್ಲಿ ಈ ಕಾನ್‌ಸ್ಟೇಬಲ್ಸ್ ನನ್ನ ಪೋಲೀಸ್ ಸ್ಟೇಷನ್‌ಗೆ ಕರೆ ತಂದರೂಂತ" ಬೆವೆತಿದ್ದ ಮುಖ ಒರೆಸಿಕೊಳ್ಳುವಾಗ ಮತ್ತೊಂದು ಬದಿಯಲ್ಲಿ ಕುಳಿತಿದ್ದ ದಾಕ್ಷಾಯಿಣಿಯನ್ನು ನೋಡಿದ ಪ್ರಸಾದ್ ".... ನೀನೂ..!? ನೀನೂ ಇಲ್ಲೇ ಇದೀಯಾ?" ಎನ್ನುತ್ತಾ ಅವಳನ್ನು ತನ್ನ ಪತ್ನಿಯೆಂದು ಪೋಲೀಸ್ ಇನ್ಸ್‌ಪೆಕ್ಟರ್ ನಾಗೇಂದ್ರನಿಗೆ ಪರಿಚಯಿಸಿದ.

ಗೆಳೆಯನ ಮಾತಿಗೆ ಪ್ರತಿಕ್ರಿಯಿಸದ ನಾಗೇಂದ್ರನ ಮುಖ ಬಿಗಿದುಕೊಂಡಿತ್ತು. ದಾಕ್ಷಾಯಿಣಿಯ ಮುಖ ಭೀತಿಯಿಂದ ಕೆಂಪಾಗಿತ್ತು. ಕುಳಿತುಕೊಳ್ಳುವಂತೆ ಸೌಜನ್ಯದ ಮಾತೊಂದನ್ನೂ ಆಡದ ಗೆಳೆಯನ ವರ್ತನೆಯಿಂದ ಕೋಪಗೊಂಡ ಪ್ರಸಾದ ಟೇಬಲ್ಲಿನ ಅಂಚನ್ನು ತನ್ನ ಅಂಗೈಗಳಿಂದ ಒತ್ತಿ ಹಿಡಿದ.

"ಪ್ರಸಾದ್, ಐ ಆ್ಯಮ್ ವೆರಿ ಸಾರಿ, ನಿನಗೆ ಈ ಸಂಗತಿ ತಿಳಿಸೋಕೆ ಬಹಳ ಬೇಸರವಾಗ್ತಿದೆ. ದಾಕ್ಷಾಯಿಣಿ ನನಗೆ ದೂರದ ಸಂಬಂಧಿ. ಹಾಗೇ ನೋಡಿದ್ರೆ ನನಗೆ ತಂಗಿಯಾಗಬೇಕಾದವ್ಳು. ನಿಮ್ಮ ಮದುವೆಯ ಸಂದರ್ಭದಲ್ಲಿ ಹಾಜರಿರದೆ ತಪ್ಪು ಮಾಡಿದನೇನೋ ಎಂಬ ಭಾವನೆ ಈಗ ಮೂಡ್ತಿದೆ. ಇವ್ಳು... ನೀನು ವರದಕ್ಷಿಣೆ ಕೇಳ್ತಿದೀ ಅಂತ ಕಂಪ್ಲೇಂಟ್ ಕೊಟ್ಟಿದಾಳೆ;

ಅದಕ್ಕಾಗಿ ನಿನ್ನ ತುರ್ತಾಗಿ ಕರೆಸಬೇಕಾಯ್ತು. ಕಾನೂನಿನ ಮುಂದೆ ನಮಗೆ ಕರ್ತವ್ಯ ಮುಖ್ಯವೇ ಹೊರತು ಸಂಬಂಧಗಳಲ್ವಲ್ಲಾ?'' ನಾಗೇಂದ್ರ ಅಧಿಕಾರದ ಗತ್ತಿನಿಂದ ನುಡಿದಾಗ ಪ್ರಸಾದ್ ಬಿಳಿಚಿಕೊಂಡ ಮೊಗವೆತ್ತಿ ಪತ್ನಿಯತ್ತ ನೋಡಿದ.

ಮಾವ ಮತ್ತು ತನ್ನೊಳಗೆ ಮಾತ್ರವಿದ್ದ ವರದಕ್ಷಿಣೆಯ ವ್ಯವಹಾರದ ಗುಟ್ಟು ಪತ್ನಿಯ ಮೂಲಕ ಗೆಳೆಯನ ಮುಂದೆ ಬಹಿರಂಗಗೊಂಡಿದ್ದು ಸಹ್ಯವಾಗಲಿಲ್ಲವೆಂಬುದನ್ನು ಪ್ರಸಾದ್‌ನ ಮುಖವೇ ಸಾರುತ್ತಿತ್ತು.

ಮಧುಪೊಕ್ಕೆಯ ಸುಂದರ್ಭದಲ್ಲಿ ಮಾವನ ಮನೆಯ ಶ್ರೀಮಂತಿಕೆಯನ್ನು ಕಂಡು ತಲೆ ತಿರುಗಿದ ಪ್ರಸಾದ್ ವರದಕ್ಷಿಣೆಯ ಹೊರೆಯನ್ನು ಮಾವನ ಬೆನ್ನಿಗೊರಗಿಸಿದ್ದ. ತನ್ನ ಸಹೋದ್ಯೋಗಿಗಳು ವರದಕ್ಷಿಣೆಯನ್ನು ತಾವು ಅಷ್ಟು ಕೇಳಿದ್ದಾಗಿ... ಇಷ್ಟು ಕೇಳಿದ್ದಾಗಿ ಬಡಾಯಿ ಕೊಚ್ಚಿಕೊಳ್ಳುವಾಗ "ನಾನೂ ಯಾಕೆ ಯತ್ನಿಸಬಾರದು'' ಎಂದು ಈ ಅಕೃತ್ಯಕ್ಕೆ ಕೈ ಹಾಕಿದ್ದ. ಹೇಗೋ ವಿಷಯ ತಿಳಿದ ದಾಕ್ಷಾಯಿಣಿ ಬೀದರ್‌ನಿಂದ ಬೆಂಗಳೂರಿಗೆ ವರ್ಗವಾಗಿ ಬಂದಿದ್ದ ನಾಗೇಂದ್ರನಲ್ಲಿ ಈ ಸಂಗತಿ ತಿಳಿಸಿದ್ದಳು.

''ಈಗಂತೂ ಎಲ್ಲರೂ ವರದಕ್ಷಿಣೆ ತಗೊಳ್ತಾರೆ, ಹಾಗೇ ನಾನೂ ವರದಕ್ಷಿಣೆ ಕೇಳಿದ್ರೆ ಅದ್ರಲ್ಲೇನು ತಪ್ಪು? ಯಾರಿಗೇನು ನಷ್ಟ?'' ಪ್ರಶ್ನಿಸಿದ ಪ್ರಸಾದ್ ತಾನು ಮಾಡುತ್ತಿರುವುದು ತಪ್ಪಲ್ಲವೇ ಅಲ್ಲ ಎನ್ನುವಂತೆ.

''ಇಲ್ಲೇ ನೀನೆಡವಿದ್ದು ಪ್ರಸಾದ್ ವಿದ್ಯಾವಂತನಾಗಿ, ಕೈ ತುಂಬಾ ಸಂಪಾದಿಸುವ ಬ್ಯಾಂಕ್ ಉದ್ಯೋಗಿಯಾಗಿದ್ದೂ ಮಾವನ ಮುಂದೆ ವರದಕ್ಷಿಣೆ ಹಣಕ್ಕಾಗಿ ಕೈ ಚಾಚಿದ್ದು ನಿನ್ನ ಅನಾಗರೀಕತೆಯ ಲಕ್ಷಣ ಅಲ್ವಾ?'' ಎದ್ದು ನಿಲ್ಲುತ್ತಾ ಗಡುಸಾಗಿ ಪ್ರಶ್ನಿಸಿದ ನಾಗೇಂದ್ರ.

''ನನಗೇನೋ ಹಣದ ಅವಶ್ಯಕತೆಯಿಲ್ಲದಿರಬಹುದು ನಾಗೇಂದ್ರ. ಒಂದು ಬಾರಿ ಮಾವನ್ನ ಹಣ ಕೇಳಿ ಈಗ ಬೇಡ ಅನ್ನಲಿಕ್ಕೆ ನನ್ನ ಮನಸ್ಸೊಪ್ಪದು. ಫ್ರೆಂಡ್ಸ್ ಮುಂದೆ ನನ್ನ ಪ್ರೆಸ್ಟೀಜ್ ಗತಿಯೇನು ಹೇಳು?''

''ವರದಕ್ಷಿಣೆ ಕೇಳಿದ್ರಿಂದ ನಿನ್ನ ಪ್ರೆಸ್ಟೀಜ್ ಏರಲೂ ಇಲ್ಲ. ಈಗ ಬೇಡ ಅಂದ್ರೆ ಪ್ರೆಸ್ಟೀಜ್ ಇಳಿಯೋದೂ ಇಲ್ಲ. ನನ್ನ ಸ್ನೇಹಿತ ವರದಕ್ಷಿಣೆಗೆ ಕೈ ಕೈಚಾಚಿದ್ದ ಅಂತ ಹೇಳಿಕೊಳ್ಳೋಕೆ ನಂಗೆ ತುಂಬಾ ನಾಚಿಕೆಯನ್ಸುತ್ತೆ ಪ್ರಸಾದ್'' ವೇದನೆಯಿಂದ ಮುಖ ಉಜ್ಜಿಕೊಂಡ ನಾಗೇಂದ್ರ.

''ಸಾರಿ, ನಿನ್ನಂಥಾ ಸ್ನೇಹಿತನ ಸ್ನೇಹಾನ ನಾನು ಕಳೆದುಕೊಳ್ಳೋಕೆ ಇಷ್ಟಪಡಲ್ಲ ನಾಗೇಂದ್ರ. ಹಿಂದೆ ನೀನು ನನಗೆ ಒದಿಗಾಗಿ ಮಾಡಿದ್ದ ಧನಸಹಾಯ ಮರೆಯೋಕೆ ಸಾಧ್ಯವೇ? ನಿನ್ನ ಮುಂದೆ ನಾನು ಸಣ್ಣವನಾದೆ. ಇಂದೇ ಮಾವನವರಲ್ಲಿ ಕ್ಷಮೆ ಕೇಳ್ತೀನಿ'' ಪ್ರಸಾದ್ ತಲೆತಗ್ಗಿಸಿ ನುಡಿದಾಗ ದಾಕ್ಷಾಯಿಣಿ, ನಾಗೇಂದ್ರನ ಮೊಗದಲ್ಲಿ ಆನಂದದ ನಗೆ ತುಳುಕಿತು.

ಪತಿಯನ್ನು ತನ್ನ ಸನ್ನಡತೆ, ಅಧಿಕಾರದ ದರ್ಪದಿಂದ ಸುದಾರಿಗೆ ತಂದ ಸೋದರ ನಾಗೇಂದ್ರನಿಗೆ ದಾಕ್ಷಾಯಿಣಿ ಗುಟ್ಟಾಗಿ ಕಣ್ಣಲ್ಲೇ ಧನ್ಯವಾದ ಅರ್ಪಿಸಿದಳು. ಕೊನೆಗೂ ದಾಕ್ಷಾಯಿಣಿ ನೀಡಿರದಿದ್ದ ವರದಕ್ಷಿಣೆಯ ಸುಳ್ಳು ಕಂಪ್ಲೆಂಟ್ ಗುಟ್ಟಾಗಿಯೇ ಉಳಿಯಿತು ದಾಕ್ಷಾಯಿಣಿ, ನಾಗೇಂದ್ರರಲ್ಲಿ.

—ಪಿ. ಕಾತ್ಯಾಯಿನಿ, ಮೈಸೂರು.

## ಭೌವಾಲ್ ಸಂನ್ಯಾಸಿ ಮೊಕದ್ದಮೆ

ಭೌವಾಲ್‌ನ ರಾಜರಾಜೇಂದ್ರ ನಾರಾಯಣ ರಾಯ್ ಭಾರೀ ಆಸ್ತಿವಂತರು. ದೊಡ್ಡ ಎಸ್ಟೇಟಿನ ಒಡೆಯ. ಆತನಿಗೆ ಮೂರು ಮಕ್ಕಳು. ಆದರೆ ಈ ಮೂರು ಮಕ್ಕಳಿಗೂ (ಕುಮಾರ ರಾಣೇಂದ್ರ ನಾರಾಯಣ ರಾಯ್, ಕುಮಾರ ರಾಮೇಂದ್ರ ನಾರಾಯಣರಾಯ್ ಮತ್ತು ಕುಮಾರ ರಬೀಂದ್ರ ನಾರಾಯಣರಾಯ್) ಸಂತಾನವಿರಲಿಲ್ಲ. ಕಾಲಕ್ರಮೇಣ ಆ ಮೂವರು ಸಹೋದರರೂ ತೀರಿಕೊಂಡರು. ವಾರಸುದಾರರಿಲ್ಲದ ಆಸ್ತಿಯನ್ನು ಸಹೋದರರ ವಿಧವಾ ಪತ್ನಿಯರು ನೋಡಿಕೊಳ್ಳಲಾರಂಭಿಸಿದರು.

ಆದರೆ 1930ರಲ್ಲಿ ಸಂನ್ಯಾಸಿಯೊಬ್ಬ ತಾನು ರಾಮೇಂದ್ರ ನಾರಾಯಣ ರಾಯ್ ಎಂದು ಘೋಷಿಸಿ ಢಾಕಾದ ಫಸ್ಟ್ ಅಡಿಷನಲ್ ಡಿಸ್ಟ್ರಿಕ್ಟ್ ಜಡ್ಜ್ ಕೋರ್ಟ್‌ನಲ್ಲಿ ಅದನ್ನು ಊರ್ಜಿತಗೊಳಿಸುವಂತೆ ಮನವಿ ಸಲ್ಲಿಸಿದ. ಈ ರಾಮೇಂದ್ರ ನಾರಾಯಣ ರಾಯ್ ರಾಜರಾಜೇಂದ್ರ ನಾರಾಯಣ ರಾಯ್‌ನ ಎರಡನೇ ಮಗ. ಈತ 1909ರಲ್ಲಿ ಮೃತನಾದನೆಂದು ಹೇಳಲಾಗಿತ್ತು.

ಇದುವರೆಗೂ ಶಾಂತವಾಗಿದ್ದ ಭೌವಾಲ್ ಕುಟುಂಬದಲ್ಲಿ ಗೊಂದಲ ತಲೆದೋರಿತು. ಬಿಭಾಬತಿ ದೇವಿ ತನ್ನ ಹೆಂಡತಿಯೆಂದೂ, ತಾನು ರಾಮೇಂದ್ರನಾರಾಯಣ ರಾಯ್ ಎಂದೂ ಆ ಸಂನ್ಯಾಸಿ ವಾದಿಸಿದರೆ, ತನ್ನ ಗಂಡ ಸತ್ತುಹೋಗಿರುವುದಾಗಿಯೂ ಈತ ಯಾರೋ ಠಕ್ಕನೆಂದು ಆಕೆ ವಾದಿಸಿದಳು.

'ನಾನು, ನನ್ನ ಹೆಂಡತಿ ಮತ್ತು ಮಿತ್ರರೊಂದಿಗೆ ದಾರ್ಜಿಲಿಂಗ್ ಹೋದಾಗ ನನಗೆ ಯಾರೋ ವಿಷ ಉಣಿಸಿದರು. ವಿಷವೇರಿ ಸ್ಮೃಹೆ ತಪ್ಪಿ ಬಿದ್ದೆ. ಹೀಗೆ ಎಚ್ಚರವಿಲ್ಲದೆ ಬಿದ್ದ ನಾನು ಸತ್ತುಹೋದೆನೆಂದು ಭಾವಿಸಿದ ಇವರೆಲ್ಲ ನಿಶ್ಚೇಷ್ಟಿತವಾಗಿ ಬಿದ್ದ ನನ್ನ ಶರೀರವನ್ನು 1909ರ ಮೇ 8ರಂದು ಅಂತ್ಯ ಸಂಸ್ಕಾರಕ್ಕಾಗಿ ಹೊತ್ತುಕೊಂಡು ಹೋದರು. ಆದರೆ ಬಿರುಗಾಳಿ ಜಡಿಮಳೆ ಹೀಗೆ ಪ್ರಕೃತಿ ವಿಕೋಪದಿಂದ ಊರಿಗೆ ಊರೇ ನಡುಗಿದಾಗ ಏನೂ ಮಾಡಲಾಗದೆ ನನ್ನ ದೇಹವನ್ನು ರುದ್ರಭೂಮಿಯಲ್ಲಿ ಹಾಗೇ ಬಿಟ್ಟು ಹೋದರು. ಅನಂತರ ನಾಗಾ ಸಂನ್ಯಾಸಿಗಳು ನನ್ನನ್ನು ರಕ್ಷಿಸಿ ತಮ್ಮೊಂದಿಗೆ ನನ್ನನ್ನು ಕರೆದುಕೊಂಡು ಹೋದರು. ವಿಷವೇರಿದ್ದರಿಂದಲೋ ಬೇರೇನು ಕಾರಣವೋ ನನ್ನ ಹಳೆಯದನ್ನೆಲ್ಲ ಪೂರ್ತಿಯಾಗಿ ಮರೆತೆ. 12 ವರ್ಷ ಕಾಲ ನಾನು ಆ ಸನ್ಯಾಸಿಗಳೊಂದಿಗೆ ಇದ್ದೆ.

ನಂತರ ಊರಿಂದೂರಿಗೆ ಅಲೆದಾಟ ಆರಂಭವಾಯಿತು. ಈ ಅಲೆದಾಟದಲ್ಲಿ ನಾನು ಢಾಕಾಗೆ ಬಂದೆ. ಇಲ್ಲಿ ಹಲವರು ನನ್ನನ್ನು ಗುರ್ತಿಸಿದರು. ನಾನು ಭೌವಾಲ ಕುಟುಂಬದ ಎರಡನೆಯ ಮಗನೆಂದು ಹೇಳಿದರು. ಈಗ ನನ್ನ ಹಳೆಯ ನೆನಪುಗಳು ಮರುಕಳಿಸಿವೆ. ನನ್ನ ಅಸ್ತಿತ್ವವನ್ನು ಊರ್ಜಿತಗೊಳಿಸಿ' ಎಂದು ಆ ಸನ್ಯಾಸಿ ನ್ಯಾಯಾಲಯಕ್ಕೆ ಮೊರೆಯಿಟ್ಟ.

ತನ್ನನ್ನು ಭೌವಾಲ ಕುಟುಂಬದ ಎರಡನೆ ಮಗನೆಂದು ಕರೆಯುವ ಈತ ಪಕ್ಕಾ ಠಕ್ಕ, ಮೋಸಗಾರ. ಇದರ ಹಿಂದೆ ದೊಡ್ಡ ಷಡ್ಯಂತ್ರವಿದೆಯೆಂದು ಭಾವಿಸುವೆ. ನಮ್ಮ ಎಸ್ಟೇಟಿನಲ್ಲಿ ಕೆಲಸದಿಂದ ತೆಗೆದು ಹಾಕಿದ ಸಿಬ್ಬಂದಿ ವರ್ಗ ಹಾಗೂ ಅತೃಪ್ತ ಗೇಣಿದಾರರು, ವಾರಸುದಾರರಿಲ್ಲದ ನಮ್ಮ ಆಸ್ತಿ–ಪಾಸ್ತಿಗಳನ್ನು ಲಪಟಾಯಿಸಲು ಮಾಡಿದ ಹುನ್ನಾರವಿದು. ನನ್ನ ಪತಿ ಎಂದೋ ತೀರಿಹೋಗಿದ್ದಾರೆ. ಅವರ ನೆನಪಿನಲ್ಲಿ ಬಾಳುತ್ತಿದ್ದೇನೆ. ನನ್ನ ಗಂಡನೆಂದು ಬಂದ ಈ ಭಂಡ ಮಹಾ ನಯವಂಚಕ. ಈತನನ್ನು ಶಿಕ್ಷಿಸಬೇಕೆಂದು ನ್ಯಾಯಾಲಯದಲ್ಲಿ ಕೇಳಿಕೊಳ್ಳುತ್ತೇನೆ'' ಎಂದು ಬಿಭಾಬತಿ ದೇವಿ ಪ್ರತಿವಾದಿಸಿದಳು.

ಆದರೆ ಆ ಸಂನ್ಯಾಸಿ ಕಿಂಚಿತ್ತೂ ಬೆದರಲಿಲ್ಲ. ಧೃತಿಗೆಡಲಿಲ್ಲ. ಬದಲು ತನ್ನ ವಾದವನ್ನು ಪುಷ್ಟೀಕರಿಸುವ ಹಲವಾರು ಪುರಾವೆಗಳನ್ನೊದಗಿಸಿ ಪುನಃ ಪುನಃ ತನ್ನ ಅಸ್ತಿತ್ವವನ್ನು ಊರ್ಜಿತಗೊಳಿಸುವಂತೆ ಮೊರೆಯಿಟ್ಟ. ಇತರರಿಗೆ ಗೊತ್ತಿರದ, ಬಿಭಾಬತಿ ದೇವಿಗೆ ಮಾತ್ರ ತಿಳಿದಿರುವ ಆಕೆಯ ಜೀವನದ ಅತ್ಯಂತ ಖಾಸಗಿ ವಿಷಯಗಳನ್ನು ಆತ ತನ್ನ ವಾದದ ಪುಷ್ಟೀಕರಣಕ್ಕಾಗಿ ನ್ಯಾಯಾಲಯದಲ್ಲಿ ಅನಿವಾರ್ಯವಾಗಿ ಬಹಿರಂಗಗೊಳಿಸಿದ.

ಹೀಗೆ ಈ ಮೊಕದ್ದಮೆ ಹಲವು ವರ್ಷಗಳ ಕಾಲ ನಡೆದು 1936ರ ಆಗಸ್ಟ್ 24ರಂದು ಆ ಸಂನ್ಯಾಸಿ ಕುಮಾರ ರಾಮೇಂದ್ರ ನಾರಾಯಣ ರಾಯ್ ಎಂದೇ ತೀರ್ಪು ನೀಡಿತು. ಬಿಭಾಬತಿ ದೇವಿ ಮೇಲ್ಮನವಿ ಸಲ್ಲಿಸಿದರೂ ಮೊದಲ ತೀರ್ಪನ್ನೇ ಉಚ್ಚ ನ್ಯಾಯಾಲಯ ಊರ್ಜಿತಗೊಳಿಸಿತು.

ಆದರೆ ಆ ಮೊಕದ್ದಮೆಯುದ್ದಕ್ಕೂ ನಾನೇನಾದರೂ ಠಕ್ಕನಾಗಿದ್ದಲ್ಲಿ ಈ ಮೊಕದ್ದಮೆಯಲ್ಲಿ ಗೆದ್ದರೂ ಅದರ ಫಲವನ್ನು ಭೋಗಿಸಲಾರೆ ಎಂದು ಆ ಸನ್ಯಾಸಿ ಪುನಃ ಪುನಃ ಹೇಳುತ್ತಿದ್ದ. ವಿಚಿತ್ರವೆಂದರೆ ಆತನ ಪರವಾಗಿ [illegible]
[illegible]

## ನನ್ನ ಕಂದ

ಹಾಲ್ಗೆನ್ನೆಯ
ಕಂದ,
ನಿನ್ನ ತೊದಲ್ನುಡಿಯೇ
ಚಂದ!,
ಹೊಳೆವ ನಿನ್ನ
ಮುಖಾರವಿಂದ,
ನನಗೆ ಬಂದಿಹುದು
'ಅಮಂದ'!
ನಿನ್ನೀ ಹುಸಿಯ
ಕೋಪ?!
ತರುವುದು ನನಗವರ
ನೆನಪ!,
ನೀ ಬರಲು
ಅಂದು,
ನಡೆಸಿದ್ದರೂ
ಚಳುವಳಿ!..
ಕಂದ!
ನೀನೇ ಅವರೆನಗಿತ್ತ
ಬಳುವಳಿ!!

—ಸ್ವಾತಿ

ಈ ಬಿಂದುವಿನಲ್ಲಿ ನಿಮಗೆ
ಒಂದು ಸುಗಂಧ ಸೂಸುವ
ದೈವೀಕತೆ
ಕಾಣುತ್ತಿದೆಯಲ್ಲವೇ?



# ಐಟೆಕ್ಸ್

# ದಿವ್ಯಾ ಕುಂಕುಮ್

ದಿವ್ಯಾ - ದೈವೀಕ ಸುಗಂಧಸೂಸುವ ಕುಂಕುಮ. ಭಾರತವಾದ್ಯಂತ ಕೋಟಿಗಟ್ಟಲೆ ಸ್ತ್ರೀಯರ ನಂಬಿಕೆಯ ಆಯ್ಕೆ. ನಿಮಗೆ ಬೇಕಾದ ಬಣ್ಣದಲ್ಲಿ, ನಿಮ್ಮ ಬಯಸಿದ ವೆಲ್ವೆಟ್ ಫಿನಿಶ್‌ನಲ್ಲಿ.

ದಿವ್ಯಾ - ಸುಗಂಧಸೂಸುವ ಕುಂಕುಮ. ಅಲರ್ಜಿ ಇಲ್ಲ, ಪೂರ್ತಿ ಸುರಕ್ಷಿತ.

ಐಟೆಕ್ಸ್ - 50ಕ್ಕೂ ಹೆಚ್ಚು ವರ್ಷಗಳಿಂದ ನಂಬಿಕೆಯ ಒಂದು ಹೆಸರು.



ಅರವಿಂದ್ ಲ್ಯಾಬೊರಟರೀಸ್, ಮದರಾಸು 600 033.

**SAY NO TO DRUGS**

Imageads 3090 Kan



# ದೇವಾಲಯಗಳ ಬೀಡು ತಮಿಳನಾಡು

—ಸುವರ್ಣ ಚಂದ್ರಶೇಖರ್—

(ಕಳೆದ ಸಂಚಿಕೆಯಿಂದ)

**ತಿರುಪ್ಪುರ ಕುಂಡ್ರಮ್ :**

"ಸರ್ವ ಶಕ್ತ ದೇವನ ಬೆಟ್ಟ'' ಎಂಬರ್ಥದ "ತಿರುಪ್ಪುರ ಕುಂಡ್ರಮ್'' ಮಧುರೆಯ ದಕ್ಷಿಣಕ್ಕೆ 8 ಕಿ.ಮೀ. ದೂರದಲ್ಲಿದೆ. ಸುಬ್ರಹ್ಮಣ್ಯ ಆರಾಧ್ಯ ದೈವವಾಗಿರುವ ಆರು ದೇವಾಲಯಗಳಲ್ಲಿ ಒಂದಾದ ಈ ದೇವಾಲಯವು ಬೆಟ್ಟದ ಬುಡದಲ್ಲಿದೆ. ಕಲ್ಲನ್ನು ಕೊರೆದು ನಿರ್ಮಿಸಿದ ಈ ಗುಹಾ ದೇವಾಲಯವು ಕ್ರಿ.ಶ. 6ನೇ ಶತಮಾನದ್ದೆಂದು ಹೇಳಲಾಗುತ್ತಿದೆ. ಇಲ್ಲೇ ಸುಬ್ರಹ್ಮಣ್ಯನು ದೇವೇಂದ್ರನ ಮಗಳು ದೇವಯಾನಿಯನ್ನು ಮದುವೆಯಾದನಂತೆ. ಪತ್ನಿಯರಾದ ವಳ್ಳಿ, ದೇವಯಾನಿಯರೊಂದಿಗೆ ನಿಂತಿರುವ ಷಣ್ಮುಗನ ಗುಡಿಯಲ್ಲಿ, ಅವನ ಮುಖಗಳೂ ಭಕ್ತಾದಿಗಳಿಗೆ ಕಾಣಿಸುವಂತೆ ವಿಗ್ರಹದ ಹಿಂಭಾಗದಲ್ಲಿ ಬೃಹತ್ ಗಾತ್ರದ ಕನ್ನಡಿಯನ್ನು ಅಳವಡಿಸಲಾಗಿದೆ. ಈ ದೇವಾಲಯದಲ್ಲಿ ಶಿವ, ವಿಷ್ಣು, ದುರ್ಗೆ, ಗಣಪತಿಯರ ಗುಡಿಗಳೂ ಇವೆ. ದೇವಾಲಯದ ದ್ವಾರದಲ್ಲಿ ಸುಂದರ ಕೆತ್ತನೆಗಳನ್ನೊಳಗೊಂಡ 48 ಕಂಭಗಳಿವೆ. ಈ ಬೆಟ್ಟದ ತುದಿಯಲ್ಲಿ ಮುಸ್ಲಿಂ ಸಂತ, ಸಿಕಂದರನ ಸಮಾಧಿಯಿದೆ.

## ತಂಜಾವೂರು

ಚೋಳ, ನಾಯಕ, ಮರಾಠರ ಕಾಲದಲ್ಲಿ ಕಟ್ಟಲ್ಪಟ್ಟು, ಬೆಳೆದು ಬೆಳಕಿಗೆ ಬಂದ ತಂಜಾವೂರು ತಮಿಳುನಾಡಿನ 8ನೇ ದೊಡ್ಡ ನಗರ. 3,654 ಚದರಮೈಲಿ ವಿಸ್ತೀರ್ಣವಿರುವ ಇದು, ಮದ್ರಾಸು ನಗರದ ದಕ್ಷಿಣಕ್ಕೆ 345 ಕಿ.ಮೀ. ದೂರದಲ್ಲಿದೆ.

ತನ್ನದೇ ಆದ ಇತಿಹಾಸ, ಸ್ಥಳ ಪುರಾಣವನ್ನು ಹೊಂದಿರುವ 'ತಂಜಾವೂರಿ'ಗೆ ಈ ಹೆಸರು ಬರಲು ಕಾರಣವಾದ ಕತೆ ಇಂತಿದೆ – ಕುಬೇರನು ಶಿವನನ್ನು ಪೂಜಿಸಿದ ಈ ಸ್ಥಳಕ್ಕೆ ಮೊದಲು "ಅಲಕೈ'' ಎಂಬ ಹೆಸರಿತ್ತು. ಇಲ್ಲಿ ತಪಸ್ಸು ಮಾಡುತ್ತಿದ್ದ ಪರಾಶರ ಮುನಿಯು ತನಗೆ ಉಪಟಳ ನೀಡುತ್ತಿದ್ದ ರಾಕ್ಷಸರಲ್ಲಿ ಪ್ರಮುಖರಾದ ತಂಜ, ದಂಡಕ, ತಾರಕರಿಂದ ತನ್ನನ್ನು ರಕ್ಷಿಸಲು ವಿಷ್ಣು ಮತ್ತು ದೇವಿ ದುರ್ಗೆಯರನ್ನು ಪ್ರಾರ್ಥಿಸಿದನಂತೆ. ಅವನ ಬೇಡಿಕೆಯಂತೆ ವಿಷ್ಣು, ತಂಜ ಮತ್ತು ದಂಡಕರನ್ನು, ದುರ್ಗೆಯು ತಾರಕನನ್ನೂ ಸಂಹಾರ ಮಾಡಿದರಂತೆ. ಸಾಯುವ ಮೊದಲು ತಂಜನು, ಆ ಸ್ಥಳಕ್ಕೆ ತನ್ನ ಹೆಸರಿಡಬೇಕಾಗಿ ದೇವಿ ದುರ್ಗೆಯನ್ನು ಪ್ರಾರ್ಥಿಸಿಕೊಂಡನಂತೆ. ಹೀಗೆ "ಅಲಕೈ'' ಎಂದು ಹೆಸರಿದ್ದ ಈ ಸ್ಥಳ ಮುಂದೆ "ತಂಜೈ'' ಅಥವಾ "ತಂಜಾವೂರು'' ಎಂಬ ಹೆಸರು ಪಡೆಯಿತು. ಇಲ್ಲಿರುವ "ರಾಜಾಗೋರಿ'' ಎಂಬ ನೀರಿನ ಟ್ಯಾಂಕ್ (ಕೊಳ) ಹಿಂದೆ ಪರಾಶರ ಮುನಿಯ ಯಜ್ಞಕುಂಡವಾಗಿತ್ತಂತೆ.

ಸುಮಾರು ಕ್ರಿ.ಶ. 9ರಿಂದ 13ನೇ ಶತಮಾನದವರೆಗೆ ಮೂರು ರಾಜವಂಶಗಳ ಆಳ್ವಿಕೆಗೊಳಗಾಗಿದ್ದ ತಂಜಾವೂರು ಚೋಳರ ಕಾಲದಲ್ಲಿ ಅವರ ರಾಜಧಾನಿಯಾಗಿ ವೈಭವದ ಉತ್ತುಂಗಕ್ಕೇರಿತು. ಆದರೆ ಮೊದಲನೆಯ ರಾಜರಾಜಚೋಳ ತನ್ನ ರಾಜಧಾನಿಯನ್ನು "ಗಂಗೈಕೊಂಡ ಚೋಳಪುರಂ''ಗೆ ವರ್ಗಾಯಿಸಿದ ಮೇಲೆ ತಂಜಾವೂರು ತನ್ನ ಪ್ರಾಮುಖ್ಯತೆಯನ್ನು ಸ್ವಲ್ಪ ಕಳೆದುಕೊಂಡಿತು. 13ನೇ ಶತಮಾನದ ಕೊನೆಯಲ್ಲಿ ಪಾಂಡ್ಯರ ಆಳ್ವಿಕೆಯಲ್ಲಿ ಪ್ರಾಮುಖ್ಯತೆಯನ್ನು ಮತ್ತೆ ಪಡೆದುಕೊಂಡ ಅದು, ಕ್ರಿ.ಶ.1549ರಲ್ಲಿ ವಿಜಯನಗರದ ನಾಯಕರ ಆಳ್ವಿಕೆಯಲ್ಲಿ ಮತ್ತೆ ವೈಭವ ಪಡೆಯಿತು. 1866ರಲ್ಲಿ ಮರಾಠರ ಆಳ್ವಿಕೆಯನ್ನೂ ತಂಜಾವೂರು ಕಂಡಿತು.

ಚೋಳರ ಕಾಲದಲ್ಲಿ ಸಕಲ ರೀತಿಯಿಂದಲೂ ಪ್ರಗತಿ ಸಾಧಿಸಿದ್ದ ತಂಜಾವೂರು ವಿದ್ಯೆ, ಸಂಸ್ಕೃತಿ, ಜ್ಞಾನಗಳ ಕೇಂದ್ರವಾಗಿತ್ತು. ಸೂರ್ಯ ವಂಶಜರಾದ ಚೋಳರು ಪರಾಕ್ರಮ ಹಾಗೂ ಕಲಾಭಿಮಾನಕ್ಕೆ ಹೆಸರಾದವರು. ಐದು ಶತಮಾನಗಳ ಕಾಲ ವೈಭವದಿಂದ ಆಳಿದ ಚೋಳರ ಆಳ್ವಿಕೆಯಲ್ಲಿ ಅಸಂಖ್ಯ ದೇವಾಲಯಗಳು ಸ್ಥಾಪನೆಗೊಂಡವು. ಆ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಚೋಳರ ಸಮರ ವಿಜಯಗಳ, ವೈಭವದ ಸ್ಮಾರಕಗಳು, ಅವರ ಕಲಾಪ್ರೇಮದ, ಕಲಾಶೈಲಿಯ ಪ್ರತೀಕಗಳು. ಚೋಳರಲ್ಲಿ ಪ್ರಮುಖನಾದವನು "ರಾಜ ರಾಜನ್'' "ಶಿವಪಾದಶೇಖರ್'' ಎಂದೆಲ್ಲ ಬಿರುದಾಂಕಿತನಾಗಿದ್ದ 'ಮೊದಲನೆ ರಾಜ ರಾಜ ಚೋಳ'. ಇವನು ಸೌಂದರ್ಯ ಹಾಗೂ ಭವ್ಯತೆಯಲ್ಲಿ ಭಾರತದಲ್ಲೇ ಅದ್ವಿತೀಯವಾದ 'ಬೃಹದೀಶ್ವರ ದೇವಾಲಯ'ವನ್ನು ನಿರ್ಮಿಸಿದನು. ಕ್ರಿ.ಶ.1003ರಲ್ಲಿ ಈ ದೇವಾಲಯದ ನಿರ್ಮಾಣ ಕಾರ್ಯವನ್ನು ಕೈಗೊಂಡು ಕ್ರಿ.ಶ. 1009ರಲ್ಲಿ ತನ್ನ ಮೂವತ್ತೆಂಟನೇ ವಯಸ್ಸಿನಲ್ಲಿ ಇದನ್ನು ಪೂರ್ತಿಗೊಳಿಸಿ ಶಿವನಿಗರ್ಪಿಸಿದನು. ಇದು ಭಾರತದಲ್ಲಿಯೇ ಗ್ರಾನೈಟ್ ಕಲ್ಲಿನಿಂದ ಕಟ್ಟಿದ ಮೊದಲ ದೇವಾಲಯವಾಗಿದೆ.

ಚೋಳರ ಶಿಲ್ಪ ಶಾಸ್ತ್ರದಲ್ಲಿನ ಪ್ರಯೋಗಾತ್ಮಕ ದೃಷ್ಟಿಕೋನಕ್ಕೆ ಮಾದರಿಯಾಗಿರುವ ಈ ದೇವಾಲಯದಲ್ಲಿ ಮೊದಲ ಬಾರಿಗೆ ಒಂದೇ ದಿಕ್ಕಿನಲ್ಲಿ ಎರಡು ಗೋಪುರಗಳ ನಿರ್ಮಾಣವಾಯಿತು. ದೇವಾಲಯದ ಪ್ರವೇಶ ದ್ವಾರದಲ್ಲಿರುವ 90 ಅಡಿ ಎತ್ತರದ ಗೋಪುರವು ದೇವಾಲಯದ ಭವ್ಯತೆಯನ್ನು ಸಾರುವ ಮೊದಲ ಪ್ರತೀಕವಾಗಿದೆ. ಅದರ ಬುಡವು ಬಹಳ ಅಗಲವಾಗಿರುವುದರಿಂದ

ಗೋಪುರದ ಎತ್ತರದ ಅರಿವು ನಮಗಾಗುವುದಿಲ್ಲ. ಇದೇ ದಿಕ್ಕಿನಲ್ಲಿ ಇದರ ಪಕ್ಕದಲ್ಲೇ ಇರುವ 'ರಾಜರಾಜನ್ ದ್ವಾರ' ಎಂಬ ಗೋಪುರವು ಸುಂದರ ಕುಸುರಿ ಕೆಲಸದಿಂದ ಕೂಡಿದ್ದು ಮಾನವಾಕಾರಗಳಿಂದಲೇ ನಿರ್ಮಿತವಾಗಿದೆ.

ದೇವಾಲಯವನ್ನು ಪ್ರವೇಶಿಸಿದೊಡನೆ 500 ಅಡಿ ಉದ್ದ ಹಾಗೂ 250 ಅಡಿ ಅಗಲದ ವಿಶಾಲವಾದ ಪ್ರಾಂಗಣವು ನಮ್ಮನ್ನಾಕರ್ಷಿಸುತ್ತದೆ. ಗ್ರಾನೈಟ್ ಕಲ್ಲು ಹಾಗೂ ಇಟ್ಟಿಗೆಗಳನ್ನು ನೆಲಕ್ಕೆ ಹಾಸಿರುವ ಈ ಪ್ರಾಂಗಣದ ಪೂರ್ವ ಹಾಗೂ ದಕ್ಷಿಣ ದಿಕ್ಕಿನಲ್ಲಿರುವ ಕಟ್ಟಡಗಳು, ಯಾಗ ಶಾಲೆಗಳು. ಪಶ್ಚಿಮ ದಿಕ್ಕಿನಲ್ಲಿ ಉಗ್ರಾಣ ಅಡಿಗೆಮನೆ ಮತ್ತು ಊಟದ ಮನೆಗಳಿವೆ. ಉತ್ತರ ದಿಕ್ಕಿನಲ್ಲಿ "ನವಗ್ರಹಗಳು" (ಪರಿವಾರಲಯತು ಪಿಳ್ಳೆಯಾರ್) ಲಿಂಗದ ರೂಪದಲ್ಲಿವೆ. ಈ ದೇವಾಲಯ ನಿರ್ಮಾಣವಾಗುವ ಮೊದಲು, ಇಲ್ಲಿ ಸ್ಥಾಪಿತವಾಗಿಯೇ ಇದ್ದ ಈ ನವಗ್ರಹಗಳಿಗೆ ಪೂಜೆ ಸಲ್ಲುತ್ತಿತ್ತು. ಈ ದಿಕ್ಕಿನಲ್ಲಿಯೇ 108 ಶಿವಲಿಂಗಗಳು ಹಾಗೂ ಅಷ್ಟ ದಿಕ್ಪಾಲಕರ ವಿಗ್ರಹಗಳಿವೆ. ಇಲ್ಲಿನ ಗೋಡೆಗಳಲ್ಲಿ ಶಿವನ 64 ನಾಟ್ಯ ಭಂಗಿಗಳನ್ನು ಚಿತ್ರಿಸಲಾಗಿದೆ.

ಮುಖ್ಯ ಶಿವನ ಮಂದಿರದ ಪ್ರವೇಶ ದ್ವಾರದಲ್ಲಿ ಗಣೇಶ, ದುರ್ಗೆಯರ, ಶನಿ, ಭೈರವರ ವಿಗ್ರಹಗಳಿವೆ. ಪ್ರವೇಶ ದ್ವಾರದ ಇಕ್ಕೆಲದಲ್ಲಿ 18 ಅಡಿ ಎತ್ತರ



ಹಾಗೂ 8 ಅಡಿ ಅಗಲದ, ಒಂದೇ ಗ್ರಾನೈಟ್ ಕಲ್ಲಿನಲ್ಲಿ ಕೆತ್ತಿದ ಕಲಾತ್ಮಕವಾದ ದ್ವಾರಪಾಲಕರ ವಿಗ್ರಹಗಳಿವೆ. ಪ್ರವೇಶದ್ವಾರದ ಒಳಭಾಗದಲ್ಲಿ "ಸಂಗೀತ ಮತ್ತು ನೃತ್ಯಶಾಲೆಗಳು", ತ್ಯಾಗರಾಜರ ಗುಡಿ ಇರುವ "ಸ್ಥಾಪನ ಮಂಟಪ"ಗಳಿವೆ. ಅಲ್ಲದೆ "ಮಹಾಮಂಟಪ", ಅರ್ಥಮಂಟಪ ಮತ್ತು ದೇವರ ಗರ್ಭಗುಡಿಗಳಿವೆ. ಗರ್ಭಗುಡಿಯೊಳಗೆ ಭವ್ಯವಾಗಿ ನಿಂತಿರುವ ಬೃಹದಾಕಾರದ ಶಿವಲಿಂಗವು ಅಚ್ಚರಿ ತುಂಬುತ್ತ ಮನವನ್ನು ಮೂಕವಾಗಿಸುತ್ತದೆ. ಶಿವಲಿಂಗದ ಗಾತ್ರವು ವಿಸ್ಮಯಗೊಳಿಸುತ್ತದೆ. 6 ಅಡಿ ಎತ್ತರ ಹಾಗೂ 54 ಅಡಿ ಸುತ್ತಳತೆ ಇರುವ ಪಾಣಪೀಠದ ಮೇಲೆ 9 ಅಡಿ ಎತ್ತರ ಹಾಗೂ 23 1/2 ಅಡಿ ಸುತ್ತಳತೆ ಇರುವ ಶಿವಲಿಂಗವಿದೆ. ಇಷ್ಟು ಬೃಹತ್ ಗಾತ್ರದ ಶಿವಲಿಂಗ ಜಗತ್ತಿನಲ್ಲಿ ಬೇರೆಲ್ಲೂ ಇಲ್ಲ. "ರಾಜರಾಜೇಶ್ವರ ಮುದಲಿಯಾರ್" "ಅದಾವಲ್ಲನ್" "ದಕ್ಷಿಣ ಮೇರು ವಿತಂಕನ್" "ಪೆರುವುದಯಾರ್" ಎಂಬೆಲ್ಲ ನಾಮ ವಿಶೇಷಗಳಿಂದ ಕರೆಯಲ್ಪಡುವ ಈ ಬೃಹದೀಶ್ವರನನ್ನು ಸಂತ ಕವಿ ಕರೂರರು ಹಾಡಿ ಹೊಗಳಿ ಪದ್ಯಗಳನ್ನು ರಚಿಸಿದ್ದಾರೆ. ಈ ಲಿಂಗವನ್ನು ರಾಜ ರಾಜ ಚೋಳ ನರ್ಮದಾ ನದಿಯ ದಂಡೆಯಿಂದ ತಂದನಂತೆ. ದೇವಾಲಯದಲ್ಲಿ ಒಟ್ಟು 252 ಲಿಂಗಗಳಿವೆ.

ಈ ದೇವಾಲಯದ ಇನ್ನೊಂದು ಪ್ರಮುಖ ಆಕರ್ಷಣೆ ಎಂದರೆ, ಗರ್ಭಗುಡಿಯ ಮೇಲೆ ಕಟ್ಟಿರುವ ಗೋಪುರ. (ಹೆಚ್ಚಿನೆಲ್ಲ ದೇವಾಲಯಗಳಲ್ಲಿ ಗರ್ಭಗುಡಿಯ ಮೇಲೆ ಗೋಪುರಗಳಿರುವುದಿಲ್ಲ ಎನ್ನುವುದೂ ಇಲ್ಲಿ ಗಮನಿಸಬಹುದಾದ ಒಂದು ಅಂಶ.) "ದಕ್ಷಿಣ ಮೇರು" ಎಂದು ಕರೆಯಲ್ಪಡುವ ಈ ಗೋಪುರವು ಸುಮಾರು 270 ಅಡಿ ಎತ್ತರವಿದ್ದು ಗಗನವನ್ನು ಚುಂಬಿಸುಮಂತೆ ನಿಂತಿದೆ. ಈ ಗೋಪುರದ ಅಡಿ ಭಾಗವು 96 ಚದರ ಅಡಿಗಳಷ್ಟು ಇದ್ದು, ಗೋಪುರದಲ್ಲಿರುವ ಒಟ್ಟು ಹದಿನಾಲ್ಕು ಅಂತಸ್ತುಗಳು, ಮಂದಿರಗಳ ಮೇಲೆ ಮಂದಿರಗಳನ್ನು ನಿರ್ಮಿಸಿದಂತೆ ತೋರುತ್ತವೆ. ಗೋಪುರದ ತುಂಬೆಲ್ಲ ಸಣ್ಣ ಸಣ್ಣ ಕಂಭಗಳು,

---

ನೃತ್ಯ ವನಿತಾ :

## ಭರವಸೆಯ ರಂಗ ಪ್ರವೇಶ

ಬೆಂಗಳೂರಿನ ನಾಟ್ಯಶ್ರೀ ಸಂಸ್ಥೆಯ ಶ್ರೀಮತಿ ಸುಮನಾ ನಾಗೇಶ್ ಅವರ ವಿದ್ಯಾರ್ಥಿನಿಯರಾದ ಕುಮಾರಿ ಜ್ಯೋತಿ ಮತ್ತು ಕುಮಾರಿ ಕಲಾ ಅವರ ಭರತನಾಟ್ಯ ರಂಗ ಪ್ರವೇಶ ಅಕ್ಟೋಬರ್ 21ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಿತು. ಮೀನಾಕ್ಷಿ ಸುಂದರಂ ಸೆಂಟರ್ ಫಾರ್ ಪರ್ಫಾರ್ಮಿಂಗ್ ಆರ್ಟ್ಸ್‌ನ ನಿರ್ದೇಶಕಿ ಶ್ರೀಮತಿ ಲೀಲಾ ರಾಮನಾಥನ್ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷ ಶ್ರೀ ಶೇಷಾದ್ರಿ ಗವಾಯಿ, ಮದರಾಸಿನ ಕಲಾಕ್ಷೇತ್ರದ ನೃತ್ಯ ನಿರ್ದೇಶಕ ಶ್ರೀ ಎ.ಆರ್. ಕೃಷ್ಣಮೂರ್ತಿ ಹಾಗೂ ರಂಗನಟಿ ಬಿ. ಜಯಶ್ರೀ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಚಲನಚಿತ್ರ ತಾರೆ ವಿನಯಾ ಪ್ರಸಾದ್ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು.

ಗಣೇಶ ಕೌಸ್ತುಭಂನೊಂದಿಗೆ ಪ್ರಾರಂಭವಾದ ಕಾರ್ಯಕ್ರಮ ಅಲರಿಪು, ಜ್ಯತಿಸ್ವರಂ ಹಾಗೂ ವರ್ಣದವರೆಗೆ ಲವಲವಿಕೆಯಿಂದ ಸಾಗಿತು. ಮಧ್ಯಂತರ ವಿರಾಮದ ನಂತರ ಪುರಂದರ ದಾಸರ ದೇವರ ನಾಮ, ಭಜನೆ ನಂತರ ತಿಲ್ಲಾನದೊಂದಿಗೆ ಮುಕ್ತಾಯವಾಯಿತು. ಮೊದಲಿನಿಂದ ಕೊನೆಯವರೆಗೆ ಜ್ಯೋತಿ ಮತ್ತು ಕಲಾ ಲವಲವಿಕೆಯಿಂದ ನರ್ತಿಸಿ ಒಳ್ಳೆಯ ನರ್ತಕಿಯರಾಗುವ ಭರವಸೆ ವ್ಯಕ್ತಪಡಿಸಿದರು. ಶ್ರೀಮತಿ ಜಾಹ್ನವಿ ಜಯಪ್ರಕಾಶ್ ಅವರ ಗಾಯನ ಮೊದಲಿಂದ ಕೊನೆಯವರೆಗೆ ಇಂಪಾಗಿದ್ದು ನೃತ್ಯ ಕಾರ್ಯಕ್ರಮಕ್ಕೆ ಕಳೆ ನೀಡಿತು. ಗುರು ಸುಮನಾ ನಾಗೇಶ್ ನೇತೃತ್ವದ ನಟುವಾಂಗ ಒಪ್ಪವಾಗಿದ್ದಿತು.

ಶ್ರೀಮತಿ ಸೀತಾಲಕ್ಷ್ಮಿ ಮತ್ತು ಎಚ್.ಆರ್. ಅನಂತರಾಮ ಅವರ ಪುತ್ರಿಯರಾದ ಜ್ಯೋತಿ ಮತ್ತು ಕಲಾ ಪ್ರತಿಭಾವಂತ ಕಲಾವಿದೆಯರಾಗಿದ್ದು ದೂರದರ್ಶನ ಧಾರಾವಾಹಿಗಳ ಜತೆಗೆ ಹಲವು ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

ಕಾರ್ಯಕ್ರಮಕ್ಕೆ ಚಲನಚಿತ್ರ ಕಲಾವಿದರಾದ ಶ್ರೀಧರ್, ಮುಖ್ಯಮಂತ್ರಿ ಚಂದ್ರು, ನಿರ್ದೇಶಕ ಫಣಿ ರಾಮಚಂದ್ರ ಮುಂತಾದವರು ಆಗಮಿಸಿದ್ದರು.

ಶ್ರೀ ನಾಗೇಶ್ ಕಾರ್ಯಕ್ರಮದ ನಿರೂಪಣೆಯನ್ನು ನಿರ್ವಹಿಸಿದರು.




ಬೃಹದೀಶ್ವರ ದೇವಾಲಯ

ಸುಂದರವಾದ ಕಿಟಕಿಗಳು, ಕಲ್ಲಿನಲ್ಲಿ ಜೀವ ತುಂಬಿ ನಿಂತಿರುವ ವಿಗ್ರಹಗಳು ಸೌಂದರ್ಯವನ್ನು ಸಾರುತ್ತಿವೆ. ಈ 'ಬೃಹತ್ ಗೋಪುರದ ನೆರಳು ಭೂಮಿಗೆ ಬೀಳುವುದಿಲ್ಲ' ಎನ್ನುವುದೂ ಇದರ ನಿರ್ಮಾಣದ ಹಿಂದಿರುವ ಅಮೋಘವಾದ ವಾಸ್ತು ಕೌಶಲವನ್ನು ಎತ್ತಿ ತೋರುತ್ತದೆ. ಇಷ್ಟು ಎತ್ತರದ ಗೋಪುರದ ತುದಿಯಲ್ಲಿರುವ 80 ಟನ್ ತೂಕದ, ಒಂದೇ ಕಲ್ಲಿನಿಂದ ಕೆತ್ತಿದ ಗೋಲಾಕಾರದ ಕಲ್ಲು (ಗುಂಬಜ್) ತಂಜಾವೂರು ದೇವಾಲಯದ ಪ್ರಮುಖ ಆಕರ್ಷಣೆಗಳಲ್ಲೊಂದು. ಈ ಭಾರೀ ಕಲ್ಲನ್ನು ಗೋಪುರದ ತುದಿಗೆ ಏರಿಸಲು ಅಂದು, ಪುರಾತನ ಈಜಿಪ್ಷಿಯನರ ತಂತ್ರವನ್ನು ಬಳಸಿದ್ದಾರಂತೆ. ತಂಜಾವೂರಿನ ಉತ್ತರಕ್ಕೆ 4 ಮೈಲು ದೂರದಲ್ಲಿರುವ "ವಯಲೂರು" ಎಂಬ ಹಳ್ಳಿಯಿಂದ ಈ ಗೋಪುರದ ತುದಿಯವರೆಗೆ ಇಳಿಜಾರಾದ ರಸ್ತೆಯನ್ನು ನಿರ್ಮಿಸಿ, ಈ ಕಲ್ಲನ್ನು ಉರುಳಿಸುತ್ತಾ ಈ ಗೋಪುರದ ತುದಿಗೊಯ್ದು ಸ್ಥಾಪಿಸಿದರು. ನಂತರ ಈ ರಸ್ತೆಯನ್ನು ಕೆಡಹಿ ತೆಗೆಯಲಾಯಿತು. ಈ ಮೇರುಕೃತಿ, ಹಿಂದಿನ ಕಾಲದ ರೂವಾರಿಗಳ ಸಾಹಸದ ಪ್ರತೀಕವಾಗಿದೆ; ಅವರ ಕಲಾನೈಪುಣ್ಯದ ದ್ಯೋತಕವಾಗಿದೆ; ಇಂದಿನ ವೈಜ್ಞಾನಿಕ ಯುಗದಲ್ಲಿ ಈ ಅದ್ಭುತವನ್ನು ಕಂಡು ನಾವು ವಿಸ್ಮಯದಿಂದ ಹುಬ್ಬೇರಿಸುವಂತಾಗಿದೆ. ಗೋಪುರದ ತುದಿಯಲ್ಲಿ 12 1/2 ಅಡಿ ಎತ್ತರದ ಕಳಸವಿದೆ. ಇದನ್ನು ತಾಮ್ರದಿಂದ ಮಾಡಿದ್ದು ಚಿನ್ನದ ತಗಡಿನಿಂದ ಹೊದೆಯಲಾಗಿದೆ. ಈ ಕಳಸವು ಚೋಳರಾಜನ ಕೊಡುಗೆಯಂತೆ.

ಬೃಹದೀಶ್ವರನ ಗರ್ಭಗುಡಿಯ ಹೊರಗೆ ಎದುರುಗಡೆ ಎತ್ತರವಾದ ಕಟ್ಟೆಯ ಮೇಲೆ ಇರುವ "ನಂದಿ"ಯ ವಿಗ್ರಹವು 19 1/2 ಅಡಿ ಉದ್ದ, 8 1/4 ಅಡಿ ಅಗಲ, ಹಾಗೂ 12 ಅಡಿ ಎತ್ತರವಿದ್ದು 20 ಟನ್ ಭಾರವಿದೆ. ಇದನ್ನು ಒಂದೇ ಕಲ್ಲಿನಲ್ಲಿ ಕೆತ್ತಿದ್ದಾರೆ. ಈ ಕಲ್ಲನ್ನು ತಿರುಚಿರಪಳ್ಳಿ ಜಿಲ್ಲೆಯ, ಪೆರಂಬಲೂರು ತಾಲೂಕಿನಲ್ಲಿರುವ "ಪಚ್ಚಮಲೈ"ಯಿಂದ ತರಲಾಗಿದೆ. ಕಟ್ಟೆಯ ಮೇಲೆ ಕಂಭಗಳ ಮೇಲೆ ಕೆತ್ತಿರುವ ನಾಯಕರ ವಿಗ್ರಹಗಳಿಂದಾಗಿ, ಈ ಕಟ್ಟೆಯನ್ನು ಮಾತ್ರ ನಾಯಕ ದೊರೆಗಳು ಕಟ್ಟಿರಬಹುದೆಂದು ಊಹಿಸಲಾಗುತ್ತಿದೆ. ತಂಜಾವೂರಿನಲ್ಲಿರುವ ನಂದಿಯ ವಿಗ್ರಹವು ಗಾತ್ರದಲ್ಲಿ ಭಾರತದಲ್ಲಿ "ನಾಲ್ಕನೇ ಸ್ಥಾನ" ಗಳಿಸಿದೆ.

ದೇವಾಲಯದ ಪ್ರಾಂಗಣದಲ್ಲಿ ಹಲವು ಗುಡಿಗಳಿವೆ. ಇವುಗಳಲ್ಲೊಂದಾದ "ಮುರುಗನ ಗುಡಿ"ಯು ಸುಂದರವಾದ ಕಲಾಕೃತಿಗಳಿಂದ, ಕೆತ್ತನೆಯ ಕಂಭಗಳಿಂದ ಶೋಭಿಸುತ್ತಿದ್ದು, ಶಿಲ್ಪಿಗಳ ಅಪೂರ್ವ ಕೈಚಳಕಕ್ಕೆ ಮಾದರಿಯಾಗಿದೆ. ಒಂದೇ ಕಲ್ಲಿನಲ್ಲಿ ಕೆತ್ತಿರುವ ಮುರುಗ, ಅವನ ನವಿಲು ಬಹಳ ಸುಂದರವಾಗಿದೆ. ಸರಿಸಾಟಿಯಿಲ್ಲದ ಅಮೋಘವಾದ ಶಿಲ್ಪಕಲೆಯಿಂದ ಕೂಡಿದ ಈ ಗುಡಿಯಲ್ಲಿರುವ ಮುರುಗನನ್ನು 'ಅರುಣಗಿರಿನಾಥ' ಎಂಬ ಕವಿ ಹಾಡಿ ಹೊಗಳಿದ್ದಾರೆ. ಈ ಗುಡಿಯ ಹಿಂಭಾಗದ ಗೋಡೆಯಲ್ಲಿರುವ ಸೂಜಿಯ ಮೊನೆಯಷ್ಟು ಸೂಕ್ಷ್ಮವಾಗಿ ಕಲ್ಲಿನಲ್ಲಿ ಕೊರೆದಿರುವ ರಂಧ್ರಗಳು ಶಿಲ್ಪಿಯ ಕಲಾನೈಪುಣ್ಯತೆಗೆ ಸಾಕ್ಷಿಯಾಗಿವೆ. ಈ ಗುಡಿಯ ಮೇಲಿರುವ ಗೋಪುರವು 55 ಅಡಿ ಎತ್ತರವಿದ್ದು ಸುಂದರ ಕೆತ್ತನೆಗಳನ್ನೊಳಗೊಂಡಿದೆ.

ದೇವಾಲಯದ ಪ್ರಾಂಗಣದಲ್ಲಿರುವ ಇನ್ನೊಂದು ಗುಡಿ "ನಟರಾಜ"ನದು. ಈ ಗುಡಿಯೊಳಗೆ ಬೆಳಗುತ್ತಿರುವ ಪಂಚಲೋಹದ ನಟರಾಜನ ಮೂರ್ತಿಗೆ "ಅದಾವಲ್ಲನ್" (ಶ್ರೇಷ್ಠ ನೃತ್ಯಗಾರ) ಎಂಬ ಹೆಸರನ್ನು ನಟರಾಜನ [illegible]



ಅಪಾರ ಭಕ್ತಿಯಿದ್ದ ಒಂದನೇ ರಾಜ ರಾಜ ಚೋಳ ನೀಡಿದನಂತೆ. ನೈಋತ್ಯ ದಿಕ್ಕಿನ ಕೊನೆಯಲ್ಲಿರುವ "ಮಹಾಗಣಪತಿ"ಯ ಗುಡಿಯನ್ನು 1803ರಲ್ಲಿ ಮರಾಠರದೊರೆ ಎರಡನೇ ಸರ್ಫೋಜಿ ಕಟ್ಟಿಸಿದನಂತೆ. ಗುಡಿಯೊಳಗಿರುವ ಗಣಪತಿಯ ವಿಗ್ರಹವು ಭವ್ಯವಾಗಿದೆ. "ಪೊಯಾಂಕುಡಿ"ಯಲ್ಲಿ ದೊಡ್ಡ ಸುಂದರವಾದ ಉಮಾಮಹೇಶ್ವರಿಯ ಮೂರ್ತಿಯಿದೆ. ಪ್ರಾಂಗಣದ ಪಶ್ಚಿಮದಲ್ಲಿ, ಬೃಹತ್ ಲಿಂಗದ ಸ್ಥಾಪನೆಯಲ್ಲಿ ಸಹಾಯ ನೀಡಿದ ಸಂತ "ಕರುವೂರರ್"ನ ಗುಡಿಯಿದೆ. ಈ ಸಂತನ ತಾಮ್ರದ ವಿಗ್ರಹವು ಸುಂದರವಾಗಿದೆ. ಚೋಳರ ಕಾಲದ ಈ ಸಂತ, ತಂಜಾವೂರಿನ ಮಹಿಮೆಯನ್ನು ಹಾಡಿ ಹೊಗಳಿದ್ದಾರೆ. ಅಪೂರ್ವವಾದ ಬೃಹದೀಶ್ವರ ದೇವಾಲಯದಿಂದ ಪ್ರಸಿದ್ಧವಾಗಿರುವ, ಕಲೆ ಸಂಸ್ಕೃತಿಗಳ ತವರೂರಾದ ತಂಜಾವೂರು, ಕರ್ನಾಟಕ ಸಂಗೀತದ ವಿದ್ವಾಂಸ ತ್ಯಾಗರಾಜರಿಗೆ ಜನ್ಮ ನೀಡಿರುವುದೂ ಒಂದು ಗಣನೀಯವಾದ ಅಂಶ. ತಂಜಾವೂರಿನಿಂದ 13 ಕಿ.ಮೀ. ದೂರದಲ್ಲಿರುವ, ತ್ಯಾಗರಾಜರ ಜನ್ಮಸ್ಥಳ 'ತಿರುವೈಯ್ಯಾರು' ವಿನಲ್ಲಿ ಪ್ರತಿವರ್ಷ ಜನವರಿಯಲ್ಲಿ 'ತ್ಯಾಗರಾಜ ಆರಾಧನೆ' ನಡೆಯುತ್ತಿದೆ.

## ಶುಚೀಂದ್ರಂ

ಕನ್ಯಾಕುಮಾರಿಯಿಂದ 13 ಕಿ.ಮೀ. ದೂರದಲ್ಲಿರುವ ಶುಚೀಂದ್ರಂ ಶೈವ ಹಾಗೂ ವೈಷ್ಣವರ ಪವಿತ್ರ ಯಾತ್ರಾಕ್ಷೇತ್ರವಾಗಿದೆ. ಹಿಂದೊಮ್ಮೆ ಶಾಪಗ್ರಸ್ಥನಾಗಿದ್ದ ದೇವೇಂದ್ರನು ಈ ಸ್ಥಳದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ಪೂಜಿಸಿದಾಗ, ಶಾಪ ವಿಮುಕ್ತನಾಗಿ 'ಶುಚಿ'ಯಾದುದರಿಂದ ಈ ಸ್ಥಳಕ್ಕೆ ಶುಚೀಂದ್ರಮ್... ಸುಚೀಂದ್ರಂ' ಎಂಬ ಹೆಸರು ಬಂದಿದೆ. ಈ ದೇವಾಲಯದ ಗರ್ಭಗುಡಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಜತೆಯಾಗಿರುವ ಲಿಂಗದಾಕಾರವನ್ನು ಪೂಜಿಸುತ್ತಾರೆ. ಲಿಂಗದಾಕಾರದ ಈ ಮೂರ್ತಿಯಲ್ಲಿ ಮುಖ, ದಾಡಿ ಬ್ರಹ್ಮನನ್ನೂ, ಅದರಿಂದ ಮೇಲಿರುವ ಚಂದ್ರಪ್ರಭೆ ಶಿವನನ್ನೂ, ಎಲ್ಲಕ್ಕೂ ಮೇಲಿರುವ ಆದಿಶೇಷ ವಿಷ್ಣುವನ್ನೂ ಪ್ರತಿನಿಧಿಸುತ್ತದೆ. ಹೀಗೆ ತ್ರಿಮೂರ್ತಿಗಳನ್ನು ಒಂದೇ ಕಡೆ, ಒಂದೇ ಮೂರ್ತಿಯಲ್ಲಿ, ಒಂದೇ ಹಾರದೊಂದಿಗೆ ಪೂಜಿಸುವುದು ಬೇರೆಲ್ಲೂ ಕಾಣಸಿಗದ ವೈಶಿಷ್ಟ್ಯವಾಗಿದೆ.

ಹೆಚ್ಚಿನೆಲ್ಲ ದೇವಾಲಯಗಳಲ್ಲಿ ನವಗ್ರಹಗಳ ಮಂಟಪ ಕೆಳಗಿದ್ದರೆ, ಇಲ್ಲಿ ಗರ್ಭಗುಡಿಯೆದುರಿನ ಮೇಲ್ಛಾವಣಿಯಲ್ಲಿ ಕೆತ್ತಿರುವ ನವಗ್ರಹಗಳನ್ನು ಪೂಜಿಸುತ್ತಾರೆ. ದೇವಾಲಯದಲ್ಲಿರುವ 'ಚಿತ್ತಸಭಾ'ದ ಗುಡಿಯಲ್ಲಿ ಒಂದೇ ಕಲ್ಲಿನಲ್ಲಿ ಕೆತ್ತಿರುವ ವಿಗ್ರಹವು ವಿಷ್ಣುವಿನ ಮುಖ, ಬ್ರಹ್ಮನ ನಾಲ್ಕು ಕೈಗಳೊಂದಿಗೆ ಶಿವನ ತಾಂಡವ ನೃತ್ಯ ಭಂಗಿಯಲ್ಲಿ ನಿಂತಿದೆ. ಇಲ್ಲಿ "ಕೊನ್ನಾಡಿ ಮಂಟಪ"ದಲ್ಲಿ ಋಷಿ ಅತ್ರಿ ಮುನಿಯ ಪತ್ನಿ ಪತಿವ್ರತೆ ಅನಸೂಯೆಯು ತ್ರಿಮೂರ್ತಿಗಳನ್ನು ಮಕ್ಕಳನ್ನಾಗಿಸಿ ತೊಟ್ಟಿಲಲ್ಲಿ ತೂಗಿದಳೆಂಬ ಕತೆಯ, ತೊಟ್ಟಿಲನ್ನು ಕಟ್ಟಿದ್ದ ಮರದ ಅವಶೇಷ ಇನ್ನೂ ಇದೆ. ಇಲ್ಲಿರುವ ನಂದಿಯನ್ನು ಶಂಖದ ಹುಡಿಯಿಂದ ಮಾಡಲಾಗಿದ್ದು, ಇದು ಬಹಳ ಸುಂದರವಾಗಿದೆ. ರಾಮೇಶ್ವರದ ಮಾದರಿಯಲ್ಲಿರುವ 1117 ಕಂಭಗಳಿರುವ ವಿಶಾಲವಾದ ಚಾವಡಿಯಲ್ಲಿ ಸಾಲಾಗಿ ನಿಂತ ಕಂಭಗಳಲ್ಲಿ ದೀಪ ಹಿಡಿದ ದೀಪಕನ್ನಿಕೆಯರ ಸುಂದರ ವಿಗ್ರಹಗಳಿವೆ. ವಿಶೇಷ ಸಮಾರಂಭಗಳಲ್ಲಿ ಈ ದೀಪಗಳನ್ನು ಬೆಳಗಿದಾಗ, ತೋರುವ ದೃಶ್ಯ ಅತ್ಯಂತ ಸುಂದರವಾಗಿರುತ್ತದೆ.

ಕ್ರಿ.ಶ. 9ನೇ ಶತಮಾನದ ಕೆತ್ತನೆಗಳನ್ನು ಹೊಂದಿರುವ ಈ ದೇವಾಲಯದಲ್ಲಿರುವ ಎರಡು ಕಂಭಗಳ ರಚನೆ ಅದ್ಭುತವೇ ಸರಿ. ಒಂದೇ ಕಲ್ಲಲ್ಲಿ ಕೆತ್ತಿದ ಪ್ರತಿಯೊಂದು ಕಂಭದಲ್ಲೂ ಮತ್ತೆ 14 ಕಂಭಗಳು ಇದ್ದು, ಇವುಗಳನ್ನು ತಟ್ಟಿದಾಗ ಸಂಗೀತದ ವಿವಿದ ವಾದ್ಯಗಳ ಸ್ವರಗಳು ಕೇಳಿ ಬರುತ್ತವೆ. ಒಂದೇ ಕಲ್ಲಿನಲ್ಲಿ ಕೆತ್ತಿದ ರಾಜನ ವಿಗ್ರಹವೊಂದರ ನಿರ್ಮಾಣದಲ್ಲಿರುವ ಕೌಶಲ್ಯವೆಂದರೆ ಆ ವಿಗ್ರಹದ ಒಂದು ಕಿವಿಯೊಳಗೆ ತೆಳ್ಳಗಿನ ಕಡ್ಡಿಯೊಂದನ್ನು ತೂರಿದರೆ ಇನ್ನೊಂದು ಕಿವಿಯಿಂದ ಅದು ಹೊರ ಬರುತ್ತದೆ. ಇವುಗಳಲ್ಲದೆ ಇಲ್ಲಿ 18 ಅಡಿ ಎತ್ತರದ ಭವ್ಯವಾದ ಸುಂದರವಾದ ಹನುಮಂತನ ವಿಗ್ರಹವಿದೆ. ಶುಚೀಂದ್ರಂನಲ್ಲಿ ಕೊಡುವ ಪ್ರಸಾದ, ಒದ್ದೆ ಮರಳು, ಇಲ್ಲಿನ ಒಂದು ವಿಶೇಷವೇ ಸರಿ. ಅಲ್ಲದೆ, ತಮಿಳ್ನಾಡಿನ ಈ ದೇವಾಲಯದಲ್ಲಿ ಕೇರಳದ ಅರ್ಚಕರು ಪೂಜೆ ಮಾಡುತ್ತಾರೆ. ಮತ್ತು ಪ್ರತಿ ದಿನವೂ ಅರ್ಚಕರು ಬದಲಾಗುತ್ತಿರುತ್ತಾರೆ ಎನ್ನುವುದೂ ಒಂದು ಗಣನೀಯವಾದ ವಿಷಯ.

(ಮುಂದಿನ ಸಂಚಿಕೆಯಲ್ಲಿ)

ಶುಚೀಂದ್ರಂ



# ನವ ದಂಪತಿಗಳು



ವಧೂವರರು : ಸಾವಿತ್ರಿ – ವಾಸುದೇವ
ಮದುವೆಯ ದಿನ ಹಾಗೂ ಸ್ಥಳ : 15.12.1991
ಗಿರಿಜಾ ಕಲ್ಯಾಣ ಮಂಟಪ,
ತ್ಯಾಗರಾಜನಗರ, ಬೆಂಗಳೂರು
ವಧುವಿನ ತಾಯಿ, ತಂದೆ : ಶ್ರೀಮತಿ ಗಿರಿಜಾ,
ಶ್ರೀ ರಾಮಕೃಷ್ಣ ರಾವ್
ವರನ ತಾಯಿ, ತಂದೆ : ಶ್ರೀಮತಿ ರುಕ್ಮಿಣಿ,
ಶ್ರೀ ಕೃಷ್ಣ ಶೇಷಗಿರಿ ಶೇಟ್



ವಧೂವರರು : ಸುಮ – ಕೇಶವಕುಮಾರ್
ಮದುವೆಯ ದಿನ ಹಾಗೂ ಸ್ಥಳ : 1.12.1991
'ಶ್ರೀ ಶೃಂಗೇರಿ ಶಂಕರ ಮಠ', ಹಾಸನ
ವಧುವಿನ ತಾಯಿ, ತಂದೆ : ಶ್ರೀಮತಿ ಫಣಿವೇಣಿ,
ಶ್ರೀ ಎಂ.ಎ.ಎಲ್. ಮೂರ್ತಿ
ವರನ ತಂದೆ : ಶ್ರೀ ಕೆ.ಕೆ. ಶ್ರೀನಿವಾಸ ಮೂರ್ತಿ



ವಧೂವರರು : ಭಾರತಿ–ನಾಗೇಶ್
ಮದುವೆಯ ದಿನ ಹಾಗೂ ಸ್ಥಳ : 11.12.1991
ಶ್ರೀ ವಿದ್ಯಾ ಭಾರತಿ ಕಲ್ಯಾಣ
ಮಂದಿರ, ಮೈಸೂರು – 4.
ವಧುವಿನ ತಾಯಿ ತಂದೆ : ಶ್ರೀಮತಿ ಶಾರದಾಂಬ,
ಶ್ರೀ ಕೆ.ಹೆಚ್. ಎಸ್. ಮೂರ್ತಿ
ವರನ ತಾಯಿ ತಂದೆ : ಶ್ರೀಮತಿ ಹೆಚ್.ಎಸ್.
ನಾಗರತ್ನ, ಶ್ರೀ ಕೆ.ಎಸ್.ಸತ್ಯನಾರಾಯಣ



ವಧೂವರರು : ವಾಣಿಶ್ರೀ–ದ್ವಾರಕಾನಾಥ್
ಮದುವೆಯ ದಿನ ಹಾಗೂ ಸ್ಥಳ : 1–12–1991
ಶ್ರೀ ಲಕ್ಷ್ಮೀಕಾಂತ ಕಲ್ಯಾಣ ಮಂಟಪ,
ಪದ್ಮನಾಭ ನಗರ, ಬೆಂಗಳೂರು – 70
ವಧುವಿನ ತಾಯಿ ತಂದೆ : ಶ್ರೀಮತಿ ನಾಗರತ್ನ,
ಶ್ರೀ ಬಿ.ಕೆ. ಚಂದ್ರಶೇಖರ್
ವರನ ತಾಯಿ ತಂದೆ : ಶ್ರೀಮತಿ ಪ್ರೇಮಳ,
ಶ್ರೀ ಪ್ರಹ್ಲಾದ ರಾವ್

ಈ ನವದಂಪತಿಗಳಿಗೆ 'ವನಿತಾ' ಪ್ರಥಮ ವಾರ್ಷಿಕೋತ್ಸವದ ಹಾರ್ದಿಕ ಶುಭಾಶಯಗಳನ್ನೂ, ದೀರ್ಘಕಾಲ ಸುಖದಾಂಪತ್ಯ ಜೀವನವನ್ನೂ ಹಾರೈಸುತ್ತದೆ.

# ಡೈಮಂಡ್ ನೆಕ್ಲೆಸ್




ಧನಶ್ರೀ ಕಿಟಾರನೆ ಕಿರುಚಿದಳು. ಅವಳ ಕೈ ಥರಥರನೆ ಕಂಪಿಸುತ್ತಿತ್ತು. ಕಂಗಳು ಭಯದಿಂದ ಅಗಲವಾಗಿದ್ದವು. ಕೆನ್ನೆಗಳು ಬಿಳಿ ದಾಸವಾಳ ಹೂವಿನಂತೆ ಬಿಳುಪೇರಿದ್ದವು. ಈಸೀ ಚೇರಿನಲ್ಲಿ ಕುಳಿತು ಪೇಪರ್ ಓದುತ್ತಿದ್ದ ಶ್ರೀಜಿತ್ ಬೆಚ್ಚಿಬಿದ್ದು. ಅವಳತ್ತ ನೋಡಿದ. ಅವಳ ಭುಜಗಳನ್ನು ಬಳಸಿ ಹಿಡಿದು, "ಧನಾ, ಪ್ಲೀಸ್... ಏನಾಯ್ತು ?" ಎಂದು ಗಾಬರಿಯಿಂದ ಕೇಳಿದ. ಹೇಳಬೇಕೆಂದುಕೊಂಡವಳ ತುಟಿಗಳು ಚಲಿಸಿದವೇ ವಿನಃ ಸ್ವರವೇಳಲಿಲ್ಲ. ಅವಳು ಮಾತನಾಡುವ ಯತ್ನಬಿಟ್ಟು ತನ್ನ ಕೈಯಲ್ಲಿದ್ದ ಖಾಲಿ ಪೆಟ್ಟಿಗೆಯನ್ನು ಅವನತ್ತ ಚಾಚಿದಳು. ಸುಂದರವಾದ ಕೆತ್ತನೆ ಕೆಲಸದಿಂದ ಕೂಡಿದ, ಆಭರಣದ ಪುಟ್ಟ ಪೆಟ್ಟಿಗೆಯದು. ಶ್ರೀಜಿತ್‌ಗೆ ಚೆನ್ನಾಗಿ ಗೊತ್ತಿದೆ, ಧನಶ್ರೀ ತನ್ನ ವಜ್ರದ ನೆಕ್ಲೆಸ್ ಇಡುತ್ತಿದ್ದ ಪೆಟ್ಟಿಗೆ– ಅದೇ ! ಆದರೆ ಈಗ ನೆಕ್ಲೆಸ್ ಏನಾಯ್ತು ?

"ಪ್ಲೀಸ್ ರಿಲಾಕ್ಸ್ ಧನಾ. ಮರೆತು ಬೇರೆಲ್ಲಾದರೂ ಇಟ್ಟಿರುವಿಯೇನೋ ಯೋಚಿಸು."

"ಇಲ್ಲ ಶ್ರೀ. ನನಗೆ ಚೆನ್ನಾಗಿ ನೆನಪಿದೆ. ಕಳೆದ ಸೋಮವಾರ ವೈದೇಹಿಯ ಮದುವೆಗೆ ಹೋಗಿ ಹಿಂದಿರುಗಿದ ನಂತರ ಇದೇ ಬಾಕ್ಸ್‌ನಲ್ಲಿ ಹಾಕಿ ಲಾಕರ್‌ನಲ್ಲಿಟ್ಟಿದ್ದೆ."

ಶ್ರೀಜಿತ್ ಪತ್ನಿಯ ಕೈಹಿಡಿದು ಕುರ್ಚಿಯಲ್ಲಿ ಕುಳ್ಳಿರಿಸಿದ. ನೆಕ್ಲೆಸ್ ಸ್ಥಳಾಂತರಗೊಂಡಿದೆಯೇ ಎಂಬ ಬಗ್ಗೆ ತಾನೇ ಪರಿಶೀಲನೆ ನಡೆಸಿದ. ಆದರೆ ಪ್ರಯೋಜನವಾಗಲಿಲ್ಲ.

"ಧನಾ, ಈಗ ಕೈಕಾಲು ಬಿಟ್ಟರೆ ಉಪಯೋಗವಿಲ್ಲ. ಒಂದು ಕೆಲಸಮಾಡು. ನಿನ್ನಲ್ಲಿ ಇನ್ನೊಂದು ಕೆಂಪಿನ ನೆಕ್ಲೆಸ್ ಇದೆಯಲ್ಲಾ, ಅದನ್ನು ಹಾಕಿಕೊಂಡು ಪಾರ್ಟಿಗೆ ಸಿದ್ಧಳಾಗು. ಮುಂದೆ ಏನು ಮಾಡಬೇಕೆಂದು ನಿಧಾನವಾಗಿ ಯೋಚಿಸೋಣ."

"ನಿಧಾನವಾಗಿಯೆ ? ಶ್ರೀ, ಅದು ನನ್ನ ತವರಿನಿಂದ– ಬಂದ ಆಸ್ತಿ ! ಹಾಗಂತ ನಿಮಗೆ ಕಾಳಜಿ ಇಲ್ಲದಿರಬಹುದು, · ಆದರೆ..."

"ಪ್ಲೀಸ್ ಸ್ಟಾಪ್ ಇಟ್ ಧನಾ ! ನಿನ್ನಪ್ಪನ ಆಸ್ತಿಯೇನು, ನನ್ನಪ್ಪನ ಗಂಟೇನು ! ವಜ್ರದ ಬೆಲೆಯಲ್ಲಿ ವ್ಯತ್ಯಾಸವಿಲ್ಲವಲ್ಲಾ. ಯಾವುದೇ ಸಂದರ್ಭದಲ್ಲೂ ವಿವೇಕರಹಿತ ವರ್ತನೆ ಉಚಿತವಲ್ಲ. ಉದ್ವೇಗದಿಂದ ಯಾವ ಪ್ರಯೋಜನವೂ ಇಲ್ಲ."

ಧನಶ್ರೀ ಮೇಲೆದ್ದಳು. ಅಸ್ತವ್ಯಸ್ತಗೊಂಡ ಮನಸ್ಸನ್ನು ಹತೋಟಿಗೆ ತಂದುಕೊಂಡಳು. ಮತ್ತೆ ಹೆರಳುಹಾಕಿ ಹೂ ಮುಡಿದುಕೊಂಡಳು. ಮುದುರಿಹೋದ ಸಿಲ್ಕ್ ಸೀರೆಯ ನೆರಿಗೆಗಳನ್ನು ಸರಿಪಡಿಸಿಕೊಂಡಳು. ಲಾಕರ್ ತೆರೆದು ಕೆಂಪಿನ ನೆಕ್ಲೆಸ್ ಧರಿಸಿದಳು. ಅಷ್ಟರಲ್ಲಿ ಶ್ರೀಜಿತ್ ಸ್ಕೂಟರ್ ಸ್ಟಾರ್ಟ್ ಮಾಡಿದ್ದ. ಅವರಿಬ್ಬರೂ ಮಿಸೆಸ್ ಚೇತನಾಳ ಮನೆಗೆ ರಿಸೆಪ್ಷನ್ ಪಾರ್ಟಿಗೆ ಹೋಗಬೇಕಾಗಿತ್ತು. ದಾರಿಯುದ್ದಕ್ಕೂ ಧನಶ್ರೀಯ ಮನಸ್ಸು ಮೊರೆಯುವ ಸಾಗರವಾಗಿತ್ತು. ಬೇರಾವ ವಸ್ತುವೂ ಒಂದಿಂಚೂ ಕದಲದೆ, ಕೇವಲ ಡೈಮಂಡ್ ನೆಕ್ಲೆಸ್ ಕಾಣೆಯಾಗಿದೆಯೆಂದರೆ ಏನರ್ಥ ? ಮನೆಯಲ್ಲಿರುವ ನಾಲ್ಕು ಜನರಲ್ಲಿ ಒಬ್ಬ ಅಪರಾಧಿಯಿರಬಹುದೆ ? ಅಥವಾ ಮನೆಗೆಲಸದ ನಂಜಮ್ಮನ ಕೈಚಳಕವಿರಬಹುದೆ? ಧನಶ್ರೀ ತಲೆಕೊಡಹಿಕೊಂಡಳು. ಇವರಾರ ಬಗ್ಗೆಯೂ ತಾನು ಸಂಶಯಿಸುವುದು ವಿಹಿತವಲ್ಲವೆನಿಸಿತು.

ಅಷ್ಟರಲ್ಲಿ ಸ್ಕೂಟರ್ ನಿಂತಿತು. ಧನಶ್ರೀ ಕೆಳಗಿದಳು. ತಲೆಗೂದಲನ್ನು ಸರಿಪಡಿಸಿಕೊಂಡ ನಂತರ ನಿಧಾನವಾಗಿ ಹೆಜ್ಜೆ ಹಾಕಿದಳು. ಸ್ಕೂಟರ್ ಲಾಕ್ ಮಾಡಿ, ಕೀ ಬಂಚನ್ನು ಕೈಯಲ್ಲಿ ಕುಣಿಸುತ್ತಾ ಮಡದಿಯನ್ನು ಹಿಂಬಾಲಿಸಿದ ಶ್ರೀಜಿತ್. ಆಗಲೇ ಛತ್ರದಲ್ಲಿ ಜನ ತುಂಬಿ ತುಳುಕುತ್ತಿದ್ದರು. ಸುಂದರವಾಗಿ ಅಲಂಕರಿಸಿಕೊಂಡ ಮದುಮಗಳು ಸ್ನೇಹಾ, ಗಂಡನೊಡನೆ ವಯ್ಯಾರವಾಗಿ ನಗುತ್ತಾ ನಿಂತಿದ್ದಳು. ಧನಶ್ರೀ ಅವಳನ್ನು ಸಮೀಪಿಸಿ "ಹಲೋ" ಎಂದಳು. ತಕ್ಷಣ ಹಾವು ತುಳಿದವಳಂತೆ ಬೆಚ್ಚಿ ಹೆಜ್ಜೆ ಹಿಂದಿಟ್ಟಳು. ಕಾರಣ, ಸ್ನೇಹಾಳ ಕತ್ತಿನಲ್ಲಿ ಫಳಫಳನೆ ಹೊಳೆಯುತ್ತಿದ್ದ ನೆಕ್ಲೆಸ್ ಧನಶ್ರೀಯದಾಗಿತ್ತು ! ಗಂಡನ ಕಿವಿಯಲ್ಲಿ ಕಂಪಿಸುವ ದನಿಯಿಂದ ಪಿಸುಗುಟ್ಟಿದಳು. ಧನಶ್ರೀ. ಆತ ಅತ್ಯಾಶ್ಚರ್ಯದಿಂದ-ಸ್ನೇಹಾಳ ಕುತ್ತಿಗೆಯನ್ನು ದಿಟ್ಟಿಸಿದ. ಆಕಾರ ಮತ್ತು ವಿನ್ಯಾಸಗಳಲ್ಲಿ ಅದು ತನ್ನ ಮಡದಿಯ ನೆಕ್ಲೆಸ್ಸನ್ನು ಹೋಲುತ್ತಿದೆಯೆಂಬುದು ನಿಜ. ಆದರೆ ಅದೇ ಇದೆಂದು ಹೇಗೆ ಹೇಳುವುದು ?

"ಸ್ವಲ್ಪ ಸುಮ್ಮನಿರ್ತಿಯಾ ಧನಾ ನೀನು ? ನಿನಗೆಲ್ಲೋ ಹಳದಿರೋಗ ಮೆತ್ತಿಕೊಂಡಿದೆ" ಎಂದು ಗದರಿದ ಶ್ರೀಜಿತ್. ಆದರೆ ಧನಶ್ರೀಗೆ ತನ್ನ ನೆಕ್ಲೆಸ್ ಮೇಲಿನ ನಿರ್ದಿಷ್ಟ ಗುರುತು ಚೆನ್ನಾಗಿ ನೆನಪಿತ್ತು. ತನ್ನ ಕಣ್ಣುಗಳು ಖಂಡಿತಾ ತನಗೆ ಮೋಸಮಾಡಲಾರವು. ಆದರೆ ನೆಕ್ಲೆಸ್ ಹೀಗೆ ಇದ್ದಕ್ಕಿದ್ದಂತೆ ಸ್ಥಾನಪಲ್ಲಟಗೊಂಡದ್ದರ ರಹಸ್ಯವನ್ನು ಮಾತ್ರ ಬಿಡಿಸಲಾಗಲಿಲ್ಲ. ಮುಂದೇನು ಮಾಡಬೇಕು ?

ಮನೆಗೆ ಹಿಂದಿರುಗಿದ ನಂತರ ತನ್ನ ಕೊರಳಲ್ಲಿದ್ದ ಆಭರಣವನ್ನು ಇಡಲೆಂದು ಲಾಕರ್‌ನ್ನು ತೆರೆದಾಗ, ಅವಳು ಭಯಾಶ್ಚರ್ಯದಿಂದ ಕಣ್ಣರಳಿಸಿದಳು ! ವಜ್ರದ ಬೆಂಡೋಲೆ ಮತ್ತು ಉಂಗುರಗಳೂ ಕಾಣೆಯಾಗಿದ್ದವು ! ಎರಡು ಗಂಟೆ ಮೊದಲು ಅವಳು ಮನೆಬಿಟ್ಟಾಗ, ಆ ಎರಡು ಆಭರಣಗಳೂ ಲಾಕರ್‌ನೊಳಗಿದ್ದವು. ಈಗ ಇಲ್ಲವೆಂದರೆ ಏನರ್ಥ ?

ಮೇಲಾಗಿ ಬೇರಾವ ವಸ್ತುಗಳಿಗೂ ಹಾನಿಯಾಗಿಲ್ಲ. ಧನಶ್ರೀ ಸರಸರನೆ ಹೊರಗೆ ಬಂದಳು. ಪಕ್ಕದ ಮನೆಯ ಮಹಿಳೆಯನ್ನು ವಿಚಾರಿಸಿದಳು. "ಆಂಟಿ

ಸ್ವಲ್ಪ ಮೊದಲು ನನ್ನ ಅತ್ತೆಯಾಗಲೀ ಮಾವ ನಾಗಲೀ ಬಂದಿದ್ದರೆ ? "

"ನಿಮ್ಮ ಅತ್ತೆ ಬಂದಿದ್ದರು. ಅದೇಕೋ ಗಾಬರಿಯಿಂದ, ಅವಸರವಸರವಾಗಿ ಹೋದಂತಿತ್ತು."

ಧನಶ್ರೀ ಹಿಂದಕ್ಕೆ ಬಂದಳು. ಅವಳಿಗೀಗ ಯಾವ ಸಂದೇಹವೂ ಉಳಿಯಲಿಲ್ಲ. ಅವಳ ಅತ್ತೆ ಕಮಲಾಕ್ಷಿ ಪ್ರಾಥಮಿಕ ಶಾಲೆಯೊಂದರಲ್ಲಿ ಶಿಕ್ಷಕಿ. ಈಗ ಸಾಯಂಕಾಲ ಮೂರು ಗಂಟೆ. ಈ ಅವೇಳೆಯಲ್ಲಿ ಮನೆಗೆ ಬಂದು ಹೋಗಿದ್ದಾರೆಂದರೆ, ಏನರ್ಥ ? ಗಂಡನಿಗೆ ವಿಷಯ ತಿಳಿಸಿದಾಗ ಆತ ಹೇಳಿದ. "ಅಮ್ಮ ಅಂತವಳಲ್ಲ. ಆಕೆ ಬೇರೇನಾದರೂ ಕೆಲಸಕ್ಕೆ ಬಂದಿರಬಹುದು. ನೀನು ಸುಮ್ಮನೆ ದುಡುಕಬೇಡ."

"ನಿಮಗೆ ನಿಮ್ಮ ತಾಯಿಯ ಮೇಲೆ ವಿಶ್ವಾಸ ವಿರಬಹುದು. ಆದರೆ ನನಗಿಲ್ಲ, ತಿಳಿಯಿತೇನು ? ನಿಮ್ಮ ತಂಗಿ ಶ್ರೀಲಕ್ಷ್ಮಿಗೆ, ವಜ್ರದ ಹಾರ ಮಾಡಿಸಬೇಕೆಂದು ಹೇಳುತ್ತಿರಲಿಲ್ಲವೆ? ಎಷ್ಟಾದರೂ ಸೊಸೆಗಿಂತ ಮಗಳು ಹೆಚ್ಚಲ್ಲವೇ !"

"ಛೇ. ನಿನ್ನ ಸಣ್ಣ ಬುದ್ಧಿಯೇ !" ಶ್ರೀಜಿತ್ ತಲೆ ಚಚ್ಚಿಕೊಂಡ.

ಧನಶ್ರೀ ಅತ್ತೆ ಬರುವುದನ್ನೇ ಕಾಯತೊಡಗಿದಳು. ಕ್ಷಣಕ್ಷಣಕ್ಕೂ ಅವಳ ಉದ್ವೇಗ ಏರುತ್ತಿತ್ತು. ಸರಿಯಾಗಿ ಐದು ಗಂಟೆಗೆ ಕಮಲಾಕ್ಷಿ ಬಂದಳು. ಆಯಾಸದಿಂದ ಅವಳ ಮುಖ ಕಳೆಗುಂದಿತ್ತು. ಒಳಗೆ ಬರುತ್ತಾ ಕೇಳಿದಳು, "ಕಾಫಿ ಮಾಡಿದ್ದಿಯೇನಮ್ಮಾ ಧನಾ ?"

"ಕಾಫಿ ಆಮೇಲೆ, ಒಳ್ಳೇ ಮಾತಿನಲ್ಲಿ ನನ್ನ ಉಂಗುರ, ನೆಕ್ಲೆಸ್ ಕೊಡಿ. ಇಲ್ಲವಾದರೆ ಪೋಲೀಸ್ ಕಂಪ್ಲೇಂಟ್ ಕೊಡಬೇಕಾಗುತ್ತೆ."

"ನನಗೇಕಮ್ಮ ನೆಕ್ಲೆಸ್ ? ಈಗತಾನೇ ಬರುತ್ತಿದ್ದೇನೆ ! ನಿನ್ನ ಉಂಗುರ ಕಂಡೇನೇ ನಾನು ? ಛೇ... ಇಂತಹಾ ಮಾತು ನಿನ್ನ ಬಾಯಿಂದ ಬರಬಾರದಿತ್ತು !" ನೋವಿನಿಂದ, ಅವಮಾನದಿಂದ ನುಡಿದು, ಕಾಫಿ ಮಾಡಲೆಂದು ಒಳಗೆದ್ದು ಹೋದಳು ಕಮಲಾಕ್ಷಿ.

"ನಿಮ್ಮ ಬಾಯಿಬಿಡಿಸುವ ವಿಧಾನ ನನಗೆ ಗೊತ್ತಿದೆ" ಎಂದು ಕಠಿಣವಾಗಿ ನುಡಿದು, ಹೊರಗೆ ನಡೆದಳು ಧನಶ್ರೀ. ಶ್ರೀಜಿತ್ ದಿಗ್ಭ್ರಾಂತನಾಗಿ ನೋಡುತ್ತಾ ನಿಂತ. ನೇರವಾಗಿ ಪೋಲೀಸ್ ಠಾಣೆಗೆ ಬಂದಳು ಧನಶ್ರೀ. ಸಬ್ ಇನ್‌ಸ್ಪೆಕ್ಟರ್ ಗುರುಮೂರ್ತಿಯನ್ನು ಭೇಟಿಯಾಗಿ ಕಂಪ್ಲೇಂಟ್ ಬರೆದುಕೊಟ್ಟಳು.

"ನಿಮಗೆ ಯಾರ ಮೇಲಾದರೂ ಸಂಶಯ ವಿದೆಯಾ ?" ಅವರು ಕೇಳಿದರು. ಸ್ವಲ್ಪವೂ ಅನುಮಾನಿಸದೆ ಅತ್ತೆಯ ಹೆಸರು ಹೇಳಿದಳು ಧನಶ್ರೀ. ಅನಂತರ ನೆನಪು ಮಾಡಿಕೊಂಡು, ಸ್ನೇಹಾಳ ಕತ್ತಿನಲ್ಲಿ ತನ್ನ ನೆಕ್ಲೆಸ್‌ನ್ನು ಕಂಡ ಸಂಗತಿಯನ್ನೂ ಹೇಳಿದಳು. ತಾನು ಸಹಾಯ ಮಾಡುವುದಾಗಿ ಭರವಸೆ ಕೊಟ್ಟರು ಇನ್‌ಸ್ಪೆಕ್ಟರ್ ಗುರುಮೂರ್ತಿ.

ಮರುದಿನ ಎಲ್ಲರೂ ಕೆಲಸಕ್ಕೆ ಹೊರಟು ಹೋದ ಮೇಲೆ ತನ್ನ ತಾಯಿಮನೆಗೆ ಬಂದಳು ಧನಶ್ರೀ. ಇಲ್ಲಿವರೆಗೆ ನಡೆದ ವಿದ್ಯಮಾನವನ್ನು ತನ್ನ ತಂದೆತಾಯಿಗೆ ತಿಳಿಸುವುದು ಅವಳ ಉದ್ದೇಶವಾಗಿತ್ತು. ಎಲ್ಲಾ ಕೇಳಿಸಿಕೊಂಡ ನಂತರ ಅವಳ ತಾಯಿ ಹೇಳಿದರು.

"ನಿನ್ನ ಗಂಡ ಮತ್ತು ಅತ್ತೆ ಸೇರಿಕೊಂಡೇ ಈ ಕೆಲಸ ಏಕೆ ಮಾಡಿರಬಾರದು ? ಇತ್ತೀಚೆಗೆ ಶ್ರೀಜಿತ್‌ಗೆ ವ್ಯಾಪಾರದಲ್ಲಿ ನಷ್ಟವಾಗಿದೆ ಎಂದು ನೀನು ಹೇಳುತ್ತಿದ್ದೆ ?"

"ಇರಬಹುದೇನೋ. ಅದಕ್ಕೇ ಅವರು ಬಹಳ ಸಮಾಧಾನವಾಗಿದ್ದರು !" ಧನಶ್ರೀ ಹೇಳಿದಳು.

"ನೋಡೋಣ. ವಿಷಯ ಗೊತ್ತಾದೀತು" ಅವಳ ತಾಯಿ ಹೇಳಿದರು. ಯೋಚಿಸುತ್ತಾ ತನ್ನ ಮನೆಗೆ ಹಿಂದಿರುಗಿದಳು ಧನಶ್ರೀ. ಉಡುಪು ಬದಲಾಯಿಸಲೆಂದು ಬೀರುವಿನ ಬಾಗಿಲು ತೆರೆದಾಗ, ಅವಳ ಕಣ್ಣುಗಳು ಸ್ತಬ್ದವಾದವು. ಕಾರಣ, ಹ್ಯಾಂಗರಿನಲ್ಲಿ ತೂಗು ಹಾಕಿದ್ದ ಆರು ಸಿಲ್ಕ್ ಸೀರೆಗಳು ಕಾಣೆಯಾಗಿದ್ದವು. ಮಾತ್ರವಲ್ಲ ಅಲ್ಲೊಂದು ಚೀಟಿಯಲ್ಲಿ "ಎಚ್ಚರ ! ನನ್ನನ್ನು ಹಿಡಿಯಲು ಯತ್ನಿಸಿದರೆ, ನಿನ್ನ ವಿನಾಶ ಖಂಡಿತ !" ಎಂದು ಬರೆದಿತ್ತು. ಆ ಅಕ್ಷರಗಳು ಕಮಲಾಕ್ಷಿಯದಾಗಿರಲಿಲ್ಲ. ಅತ್ತೆಯ ಮೇಲೆ ಆರೋಪ ಹೊರಿಸಿ ತಾನು ತಪ್ಪು ಮಾಡಿದೆನೆಂದು ಈಗವಳಿಗನಿಸಿತು. ತಕ್ಷಣ ಮೇಲೆದ್ದು ಪೋಲೀಸ್ ಸ್ಟೇಶನ್‌ಗೆ ಬಂದಳು.

ಇನ್‌ಸ್ಪೆಕ್ಟರ್ ಈಗ ತಡಮಾಡಲಿಲ್ಲ. ಧನಶ್ರೀಯ ನ್ನೊಡಗೂಡಿ ಸ್ನೇಹಾಳ ಮನೆಗೆ ಬಂದರು. ಆದರೆ ಸಮವಸ್ತ್ರದಲ್ಲಲ್ಲ. ಧನಶ್ರೀ ಹೇಳಿದಳು. "ಸ್ನೇಹಾ ಇವರು ನನ್ನ ಕಸಿನ್. ಶ್ರೀಕಾಂತ. ಇವರು ಒಂದು ಡೈಮಂಡ್ ನೆಕ್ಲೆಸ್ ಮಾಡಿಸಬೇಕಂತೆ. ನೀವು ಮೊನ್ನೆ ಆರತಕ್ಷತೆ ದಿನ ಧರಿಸಿದ ನೆಕ್ಲೆಸ್ ನನಗೆ ತುಂಬಾ ಇಷ್ಟವಾಯ್ತು. ನಾವೊಮ್ಮೆ ಅದನ್ನು ನೋಡಬಹುದೆ ?"

ಇನ್‌ಸ್ಪೆಕ್ಟರ್ ಸ್ನೇಹಾಳ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಆದರೆ ಅವಳ ಮುಖದಲ್ಲಿ ಯಾವುದೇ ರೀತಿಯ ತಪ್ಪಿತಸ್ಥ ಭಾವವಿರಲಿಲ್ಲ. ಬದಲಿಗೆ ಅವಳು ಬಹಳ ಉತ್ಸಾಹದಿಂದ ಒಳಗೆ ಹೋಗಿ ನೆಕ್ಲೆಸ್ ತಂದು ಧನಶ್ರೀಯ ಕೈಯಲ್ಲಿಟ್ಟಳು. ಇನ್‌ಸ್ಪೆಕ್ಟರ್ ಧನಶ್ರೀಯ ಮುಖ ನೋಡಿದರು. ತನ್ನದೇ ಈ ನೆಕ್ಲೆಸ್ ಎಂಬಂತೆ ತಲೆದೂಗಿದಳು ಧನಶ್ರೀ.

"ಎಲ್ಲಿ ಮಾಡಿಸಿದಿರಿ ?" ಇನ್‌ಸ್ಪೆಕ್ಟರ್ ಕೇಳಿದರು.

"ಇದನ್ನು ನಾವು ಮಾಡಿಸಲಿಲ್ಲ. ರತನ್ ಜ್ಯೂವೆಲ್ ಮಾರ್ಟ್‌ನಿಂದ ಕೊಂಡುಕೊಂಡೆವು"

"ಸರಿ, ಅಲ್ಲೇ ವಿಚಾರಿಸಿಕೊಳ್ಳುತ್ತೇವೆ" ಎಂದು ನುಡಿದು ಮೇಲೆದ್ದರು– ಗುರುಮೂರ್ತಿ.

"ಕಾಫಿ ಕುಡಿದು ಹೋಗಿ" ಎಂದು ಸ್ನೇಹಾ ಒತ್ತಾಯಿಸಿದರೂ ನಿಲ್ಲಲಿಲ್ಲ.

"ನೀವಿನ್ನು ಮನೆಗೆ ಹೋಗಿ" ಹೊರಗೆ ಬಂದನಂತರ ಗುರುಮೂರ್ತಿ ಹೇಳಿದರು. ಆದರೆ ಧನಶ್ರೀಗೀಗ ಕುತೂಹಲ ಮೂಡಿತ್ತು. ಮನೆಗೆ ಮರಳುವ ಮನಸ್ಸಾಗಲಿಲ್ಲ. ಇಬ್ಬರೂ ಶೇಟ್ ರತನ್‌ಲಾಲ್‌ನ ಅಂಗಡಿಗೆ ಬಂದರು. ತನ್ನ ವಿಸಿಟಿಂಗ್ ಕಾರ್ಡನ್ನು ತೋರಿಸಿದ ಇನ್ಸ್‌ಪೆಕ್ಟರ್ ಗುರುಮೂರ್ತಿ. ತಕ್ಷಣ ರತನ್‌ಲಾಲ್ ಭಯಭಕ್ತಿಯಿಂದ ಕೈ ಮುಗಿದು,

"ಅಪ್ಪಣೆಯಾಗಲಿ" ಎಂದ.

"ನೀವು ಕೆಲ ದಿನಗಳ ಹಿಂದೆ ಮಿಸೆಸ್ ಚೇತನಾರ ಮಗಳು ಸ್ನೇಹಾಗೆ ಒಂದು ವಜ್ರದ ನೆಕ್ಲೆಸ್ ಕೊಟ್ಟಿರಿ. ಅದನ್ನು ನೀವೇ ತಯಾರಿಸಿದಿರಾ ?"

"ಯಾವುದು ? ಹಾಂ... ಗೊತ್ತಾಯ್ತು... ಅದೇ... ? ನಾವು ಮಾಡಿದ್ದಲ್ಲ. ಯಾರೋ ಒಬ್ಬರು ಹಣದ ಅಡಚಣೆಯೆಂದು ಹೇಳಿ ಅದನ್ನು ನಮಗೆ ಮಾರಾಟ ಮಾಡಿದ್ದರು."

"ಮಾರಿದ್ದರೆ ? ಯಾವಾಗ ? ಯಾರು ?"

"ಇಂದಿಗೆ ಸರಿಯಾಗಿ ಎಂಟು ದಿನಗಳ ಹಿಂದೆ. ಅವರ ಪರಿಚಯ ನನಗಿಲ್ಲ. ಹೆಸರೂ ಕೇಳಲಿಲ್ಲ."

"ಇಲ್ಲವೇ... ? ಛೇ... ಎಂತಹಾ ಮೋಸದ ಕೆಲಸವಾಯ್ತು !"

"ಹಾಂ, ಆದರೆ ಒಂದು ವಿಚಾರ. ಆಕೆ ಹೆಂಗಸು. ಬೆಳ್ಳಗೆ, ಕುಳ್ಳಗೆ, ದಪ್ಪಕ್ಕೆ ಇದ್ದರು. ಬಿಳಿಯ ಮಾರುತಿ ಕಾರಿನಲ್ಲಿ ಬಂದರು ನಂಬರ್ KA. 09..."

"ಯುರೇಕಾ !" ತಕ್ಷಣ ಕಿರುಚಿದಳು ಧನಶ್ರೀ. ಇನ್‌ಸ್ಪೆಕ್ಟರ್ ಪ್ರಶ್ನಾರ್ಥಕವಾಗಿ ಆಕೆಯ ಮುಖವನ್ನು ನೋಡಿದರು.

"ಬನ್ನಿ ಇನ್‌ಸ್ಪೆಕ್ಟರ್, ಎಲ್ಲಾ ಹೇಳುತ್ತೇನೆ" ಅವರನ್ನು ಪಕ್ಕಕ್ಕೆ ಕೂಗಿದಳು.

ನಡೆದ ಸಂಗತಿ ಇಷ್ಟೇ. ಧನಶ್ರೀಯ ಮನೆಯಲ್ಲಿ ಅವಳ ಹೊರತಾಗಿ ಇನ್ನೆಲ್ಲರೂ, ಹೊರಗೆ ದುಡಿಯುವವರೇ. ಡೋರ್‌ಕೀ ಇದ್ದದ್ದು ಕೇವಲ ಎರಡು. ಆದ್ದರಿಂದ ಅವಳು ಹೊರಗೆ ಹೋಗಬೇಕಾದ ಸಂದರ್ಭದಲ್ಲಿ ಡೋರ್‌ಕೀಯನ್ನು ನೆರೆಮನೆಯ ಮಹಿಳೆಯ ಕೈಗೆ ನೀಡುತ್ತಿದ್ದಳು. ಆ ಹೆಂಗಸು ಇಂತಹಾ ಸಂದರ್ಭಗಳನ್ನೆಲ್ಲಾ ಚೆನ್ನಾಗಿ ಉಪಯೋಗಿಸಿಕೊಂಡಿದ್ದಳು ! ಧನಶ್ರೀ ಕೇಳಿದಾಗ, ಬೇಕೆಂದೇ ಕಮಲಾಕ್ಷಿಯ ಬಗ್ಗೆ ಸುಳ್ಳು ಹೇಳಿ, ಸಂಶಯ ಬರುವಂತೆ ಮಾಡಿದ್ದಳು !

*****

— ಲೀಲಾಮಣ್ಣಾಲ

## ವನಿತಾ ಪದ ಸಂಪದ 50ರ ಫಲಿತಾಂಶ

ಈ ಬಾರಿಯ ಸ್ಪರ್ಧೆಯಲ್ಲಿ 4 ಜನ ಗೆದ್ದಿದ್ದು, ವಿಜೇತರಿಗೆ ಬಹುಮಾನದ ಹಣವನ್ನು ಸಮವಾಗಿ ಹಂಚಲಾಗುವುದು. ಗೆದ್ದ ಅಭ್ಯರ್ಥಿಗಳ ಹೆಸರನ್ನು ಈ ಕೆಳಗೆ ನೀಡಲಾಗಿದೆ.

1. ಆಶಾ ಎಂ.ಕೆ. ಭದ್ರಾವತಿ
2. ಶ್ರೀಮತಿ ಪದ್ಮಾ ನರಹರಿ ಭಟ್ಟ, ಬಳ್ಳಾರಿ
3. ಶ್ರೀಮತಿ ಗೀತಾ ದೇವರಾಜ್, ಕುಂದಳ್ಳಿ
4. ವಿನೂತ ಕೋರಿ, ಬೂದಗುಂಪಾ

| | | | | | | | | | | |
|---|---|---|---|---|---|---|---|---|---|---|
| 1 ದೀ | ಪಾ | 2 ವ | ಳಿ | ■ | ■ | ■ | 3 ನ | 4 ವ | ರಾ | 5 ತ್ರಿ |
| ನಾ | ■ | ಯು | ■ | 6 ಬಿ | ಡ | 7 ವ | ■ | ರ | ■ | ಕೂ |
| 8 ರ | 9 ಜ | ಸ್ತು | ■ | ಳಿ | ■ | ಸ | ■ | 10 ಹ | 11 ಮಾ | ಲಿ |
| ■ | ಟ | ■ | 12 ಮಂ | ಗ | ■ | 13 ತಿ | 14 ಲು | ■ | ಮು | ■ |
| 15 ಫ | ಲ | ಪ್ರ | ದ | ■ | ■ | ■ | 16 ಹಾ | ಹಾ | ರ | 17 [illegible] |
| ಲಿ | ■ | ■ | 18 ಮಾ | ತ್ರ | ■ | 19 ಅ | ಟ | ■ | ■ | ರ |
| 20 ತ | 21 ಶ್ರೀ | ಮಾ | ರು | ■ | ■ | ■ | 22 ಸೇ | ಮ | 23 ಕಾ | ತಿ |
| ■ | ಕೃ | ■ | 24 ತ | 25 ಮ | ■ | 26 ಪಾ | ತ್ರ | ■ | ಯು | ■ |
| 27 ಗ | ಜೆ | 28 ತ | ■ | ಮು | ■ | ಮ | ■ | 29 ಮ | ಕ | 30 ರ |
| ಮ | ■ | ಷ್ಟ | ■ | 31 ಜ | ಠ | ರ | ■ | ಲಿ | ■ | ಜಿ |
| 32 ಕ | ಪಾ | ಲಿ | ಸಿ | ■ | ■ | ■ | 33 ಜ | ನ | ಮ | ತ |

# ಮಹಾರಾಣಿ ಕಾಲೇಜಿನ ಶತಮಾನೋತ್ಸವ ಸಮಾರಂಭ 1992



ಪ್ರಿನ್ಸಿಪಾಲರಾದ ಶ್ರೀ ಶ್ರೀಧರರಾಜೇ ಅರಸ್‌ರವರಿಗೆ ಸನ್ಮಾನ ಮಾಡುತ್ತಿ[illegible] [illegible] ಯೋಜನಾ ಸಚಿವರಾದ ಶ್ರೀಮತಿ ನಾಗರತ್ನಮ್ಮ



ಉದ್ಘಾಟನೆಗೆ ಆಗಮಿಸುತ್ತಿರುವ ಪ್ರಮೋದಾದೇವಿ ಶ್ರೀಕಂಠ[illegible] ಒಡೆಯರ್‌ರವರು.

*1881*ರಲ್ಲಿ ಅಂದಿನ ಮಹಾರಾಜರಾದ ಚಾಮರಾಜ ಒಡೆಯರ್‌ರವರಿಂದ ಸ್ಥಾಪಿತವಾದ, ರಾಜ್ಯದ ಮೊತ್ತ ಮೊದಲ ಹೆಣ್ಣುಮಕ್ಕಳ ಶಾಲೆಯೆಂಬ ಖ್ಯಾತಿಯನ್ನು ಪಡೆದಿರುವ ಮೈಸೂರಿನ ಮಹಾರಾಣಿ ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜಿನ ಶತಮಾನೋತ್ಸವ ಸಮಾರಂಭವು ಅಕ್ಟೋಬರ್ ಒಂದರಿಂದ ಮೂರು ದಿನಗಳ ಕಾಲ ಅತ್ಯಂತ ವಿಜೃಂಭಣೆಯಿಂದ ಸಂಭ್ರಮ ದಿಂದ ನೆರವೇರಿತು.

ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಅವಶ್ಯಕತೆಯನ್ನು ಆಗಿನ ಸಾಂಪ್ರದಾಯಿಕ, ಸಾಮಾಜಿಕ ಪರಿಸರದಲ್ಲೂ ಮನಗಂಡ ಮಹಾರಾಣಿ ಕೆಂಪನಂಜಮ್ಮಣ್ಣಿ ಮತ್ತು ಅಂಜಲ್ ನರಸಿಂಹ ಅಯ್ಯಂಗಾರ್‌ರವರು ರಾಜ್ಯದಲ್ಲೇ ಮೊದಲನೆಯದಾದ ಹೆಣ್ಣುಮಕ್ಕಳ ಶಾಲೆಯನ್ನು 1881ರಲ್ಲಿ ಮೈಸೂರಿನಲ್ಲಿ ಸ್ಥಾಪಿಸಿದರು. ಹೆಣ್ಣು ಮಕ್ಕಳ ಶಾಲೆಯಾದುದರಿಂದಲೂ ಮತ್ತು ರಾಣಿಯವರ ಆಸಕ್ತಿಯಿಂದ ಈ ವಿದ್ಯಾಸಂಸ್ಥೆ ಸ್ಥಾಪಿತವಾದುದರಿಂದಲೂ ಇದಕ್ಕೆ 'ಮಹಾರಾಣಿಯವರ ಹೆಣ್ಣು ಮಕ್ಕಳ ಶಾಲೆ' ಎಂದೇ ನಾಮಕರಣವಾಯಿತು.

ಪ್ರಾರಂಭದಲ್ಲಿ 29 ವಿದ್ಯಾರ್ಥಿನಿಯರು ಹಾಗೂ 5 ಶಿಕ್ಷಕರನ್ನು ಹೊಂದಿದ್ದ ಈ ಶಾಲೆ ಮೈಸೂರು ಅರಮನೆಯ ಕೋಟೆ ದೇವಸ್ಥಾನದ ಆವರಣದಲ್ಲಿತ್ತು. ಬಾಲಕಿಯರ ಸಂಖ್ಯೆ ಹೆಚ್ಚಾದ ಕಾರಣ ಶಾಲೆಯನ್ನು ಜಗನ್ಮೋಹನ ಅರಮನೆಯ ಆವರಣಕ್ಕೆ ಸ್ಥಳಾಂತರಿಸಲಾಯಿತು. ಅನಂತರ ಈ ಶಾಲೆಯು ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಮುಖ್ಯ ಕೇಂದ್ರವಾಗಿ ಬೆಳೆಯ ತೊಡಗಿದಾಗ ಸರ್ಕಾರದ ಗಮನ ಹರಿದು ಮಹಾರಾಜರೊಡನೆ ಚರ್ಚಿಸಿದ ನಂತರ 1891 'ಏಪ್ರಿಲ್ 1ರಂದು ಈ ಶಾಲೆಯನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮಹಾರಾಣಿ ಪ್ರೌಢಶಾಲೆಯನ್ನು ಕಾಲೇಜಾಗಿ ಪರಿವರ್ತಿಸಿ ಅದನ್ನು ಮದರಾಸು ವಿಶ್ವವಿದ್ಯಾನಿಲಯಕ್ಕೆ (1902–1908) ಒಳಪಡಿಸಲಾಯಿತು. 1920ರಲ್ಲಿ ಪೂರ್ಣ ಪ್ರಮಾಣದ ಕಾಲೇಜಾಗಿ ಬೆಳೆದು ಮಹಾರಾಣಿಯವರ ಕಾಲೇಜೆಂದು ಹೆಸರಾಯಿತು. ನಂತರ ಕಾಲೇಜನ್ನು ಸ್ಥಳಾಂತರಿಸಲಾಯಿತು. ಹೀಗೆ ಬೆಳೆದು ಬಂದು 1980–81ರಲ್ಲಿ ಪದವಿ ಪೂರ್ವ ಕಾಲೇಜೆಂಬ ಮೇಲ್ದರ್ಜೆಗೆ ಏರಿರುವ ಈ ವಿದ್ಯಾಸಂಸ್ಥೆ, ಪದವಿ ಪೂರ್ವ ವಿಭಾಗದಲ್ಲಿ 22 ಜನ ಉಪನ್ಯಾಸಕರನ್ನೂ,




'ಶೂರ್ಪನಖಾ ಗರ್ವಭಂಗ' ಯಕ್ಷಗಾನ ಕಾರ್ಯಕ್ರಮ.



550 ವಿದ್ಯಾರ್ಥಿನಿಯರನ್ನೂ ಹಾಗೂ ಪ್ರೌಢಶಾಲಾ ವಿಭಾಗದಲ್ಲಿ 49 ಜನ ಶಿಕ್ಷಕ ಶಿಕ್ಷಕಿಯರನ್ನೂ, 1000 ವಿದ್ಯಾರ್ಥಿನಿಯರನ್ನೂ ಒಳಗೊಂಡು ನಾರಾಯಣ ಶಾಸ್ತ್ರಿ ರಸ್ತೆಯ ವಿಶಾಲವಾದ ಕಟ್ಟಡದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದೆ.

ಪೂರ್ವಭಾವೀ ಶತಮಾನೋತ್ಸವ ಸಮಾರಂಭವು ದಿನಾಂಕ 7–9–92ರಂದು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ಪ್ರಮೋದಾದೇವಿ ಒಡೆಯರ್‌ರವರು ದೀಪ ಬೆಳಗುವುದರ ಮೂಲಕ ಉದ್ಘಾಟಿಸಲ್ಪಟ್ಟಿತ್ತು. ಈ ಸಮಾರಂಭದ ಅಂಗವಾಗಿ ಸಂಗೀತ, ಚಿತ್ರಕಲೆ ಹಾಗೂ ನೃತ್ಯ ಮೊದಲಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಹಳೆಯ ವಿದ್ಯಾರ್ಥಿನಿಯರಾದ ಶ್ರೀಮತಿ ಎ.ಎಸ್.ಪದ್ಮ ಮತ್ತು ಡಾ. ಎಂ.ಬಿ.ಪದ್ಮರವರ ವೀಣಾವಾದನವು ಸಂಗೀತ ಪ್ರೇಮಿಗಳಿಗೆ ರಸದೌತಣದಂತಿತ್ತು.

ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ಶ್ರೀ ಎಸ್. ಮಂಚಯ್ಯನವರು ತಾ. 17–9–1992ರಂದು ವಿಜ್ಞಾನ ಹಾಗೂ ಮಾನವಿಕ (ಹ್ಯುಮ್ಯಾನಿಟೀಸ್) ಪ್ರದರ್ಶನವನ್ನು ಉದ್ಘಾಟಿಸಿದರು. ಕೇಂದ್ರ ಆಹಾರ, ಸಂಶೋಧನಾಲಯದವರು ಆಹಾರ ಪದಾರ್ಥಗಳನ್ನು ಹೇಗೆ ಪುಷ್ಕರಿಸಿ, ಸಂಗ್ರಹಿಸಬೇಕೆನ್ನುವ ವಿಚಾರವಾಗಿ ವಿದ್ಯಾರ್ಥಿಗಳಿಗೆ ಮಾಹಿತಿಯನ್ನು ನೀಡಿದರು. ವಿವಿಧ ರಾಷ್ಟ್ರಗಳಿಗೆ ಸೇರಿದ ನಾಣ್ಯಗಳು ಹಾಗೂ ಅಂಚೆ ಚೀಟಿಗಳ ಪ್ರದರ್ಶನ ಮತ್ತು ಕರಕುಶಲ ವಸ್ತುಗಳ ವಿಭಾಗದಲ್ಲಿ ಅಕ್ಕಿ ಕಾಳುಗಳಿಂದ ಕಲಾತ್ಮಕವಾಗಿ ಜೋಡಿಸಲ್ಪಟ್ಟ ಲಕ್ಷ್ಮಿ ಗಣೇಶ ಮೊದಲಾದ ದೇವರ ಚಿತ್ರಗಳು; ಭಗವದ್ಗೀತೆಯ ಶ್ಲೋಕಗಳು, ಸೋಪು, ಪುರಿಯಿಂದ ತಯಾರಿಸಿದ ಹಾರ ಹಾಗೂ ದಸರಾ ಹಬ್ಬದ ಗೊಂಬೆಗಳ ಜೋಡಣೆಯನ್ನು ಆಕರ್ಷಕ ರೀತಿಯಲ್ಲಿ ಪ್ರದರ್ಶಿಸಲಾಗಿತ್ತು. ಮೂರು ದಿನಗಳ ಕಾಲ ನಡೆದ ಈ ಪ್ರದರ್ಶನವನ್ನು ಸುಮಾರು 5,000 ವಿದ್ಯಾರ್ಥಿಗಳು, [illegible] ಮತ್ತು ಸಾರ್ವಜನಿಕರು ವೀಕ್ಷಿಸಿದರು.

[illegible] 10–[illegible]ರಂದು [illegible] ರಾಜ್ಯಪಾಲರಾದ ಶ್ರೀ ಖುರ್ಷಿದ್ ಆಲಂಖಾನ್‌ರವರು ವಿಧ್ಯುಕ್ತವಾಗಿ ನೆರವೇರಿಸಿ ಮಾತನಾಡುತ್ತಾ ಇಂಥಹ ಸಂದರ್ಭ ಯಾವುದೇ ಸಂಸ್ಥೆಯ ಇತಿಹಾಸದಲ್ಲಿ ಒಂದು ಮೈಲುಗಲ್ಲು. ಆದರೆ ರಾಜಮನೆತನದವರು ಯಾವ ಉದ್ದೇಶದಿಂದ, ಶ್ರದ್ಧಾಸಕ್ತಿಯಿಂದ, ಪ್ರೀತಿಯಿಂದ, ಏನೆಲ್ಲಾ ಸಾಧಿಸಬೇಕು ಎನ್ನುವ ಕನಸಿನಿಂದ ಕಟ್ಟಿ ಬೆಳೆಸಿದ ಈ ವಿದ್ಯಾಸಂಸ್ಥೆಯ 100 ವರ್ಷಗಳನ್ನು ಸಂಬಂಧಪಟ್ಟವರೆಲ್ಲರೂ "ಎಷ್ಟು ಅರ್ಥಪೂರ್ಣವಾಗಿ, ಫಲಪ್ರದವಾಗಿ ಕಳೆದಿದ್ದೇವೆ?" ಎಂದು ನಿಮ್ಮನ್ನು ನೀವೇ ಪ್ರಶ್ನಿಸಿಕೊಂಡು, ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಯ ದಿಕ್ಕಿನತ್ತ ಸಾಗುವ ಪ್ರಯತ್ನವನ್ನು ಮಾಡಬೇಕು ಎನ್ನುವ ಕರೆಯನ್ನಿತ್ತರು.

ಅಧ್ಯಕ್ಷತೆಯನ್ನು ವಹಿಸಿದ್ದ ಆದಿ ಚುಂಚನಗಿರಿ ಮಠಾಧೀಶ್ವರರಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ವಿದ್ಯಾರ್ಥಿಗಳಿಗೆ "ಕಾಲೇಜು ಎಂದರೆ ಕಾಲು ಏಜು ಅಂದರೆ ಸುಮಾರು 25 ವರ್ಷಗಳು. ಈ ವಯಸ್ಸಿನಲ್ಲಿ ವಿದ್ಯಾರ್ಥಿಗಳು ಏನನ್ನು ಕಲಿಯುತ್ತಾರೋ ಅದೇ ಮುಂದಿನ ಜೀವನಕ್ಕೆ ಬುನಾದಿಯಾಗುತ್ತದೆ. ಆದರೆ ಕಾಲೇಜು ಏನಾದರೂ ಖಾಲಿ






ಉದ್ಘಾಟನೆಯನ್ನು ನೆರವೇರಿಸುತ್ತಿರುವ ಶ್ರೀ ಖುರ್ಷಿದ್ ಆಲಂಖಾನ್, ಮುಕ್ತರ ಉನ್ನೀಸಾ ಬೇಗಂ, ಶ್ರೀ ಶ್ರೀಧರ ರಾಜೇ ಅರಸ್.



ಶತಮಾನೋತ್ಸವ ಸಮಾರಂಭಕ್ಕೆ ಆಗಮಿಸುತ್ತಿರುವ ಆದಿ ಚುಂಚನಗಿರಿ ಮಠಾಧೀಶ್ವರರಾದ ಶ್ರೀ ಬಾಲಗಂಗಾಧರ ನಾಥ ಸ್ವಾಮಿಯವರು

ಏಜಾದರೆ ಮುಂದೆ ಕಣ್ಣೀರಲ್ಲಿ ಕೈ ತೊಳೆಯಬೇಕಾಗುತ್ತದೆ. ಆದ್ದರಿಂದ ವಿದ್ಯಾರ್ಥಿಗಳು, ಸುಖ, ನಿದ್ದೆ ಎರಡನ್ನೂ ತ್ಯಜಿಸಿ, ಜ್ಞಾನವನ್ನು ವೃದ್ಧಿಗೊಳಿಸುವುದರತ್ತ ಗಮನ ನೀಡಬೇಕು'' ಎಂದು ಆಶೀರ್ವಚನವನ್ನು ನೀಡಿದರು.

ಸಂಸದೀಯ ವ್ಯವಹಾರದ ಸಚಿವರಾದ ಶ್ರೀ ಎಂ. ವೀರಪ್ಪ ಮೊಯಿಲಿಯವರು ಮುಖ್ಯ ಅತಿಥಿಗಳಾಗಿ ಆಗಮಿಸಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಾ ಈ ಮಹಾರಾಣಿ ಸಂಸ್ಥೆಯು ಇಡೀ ಮೈಸೂರು ಸಂಸ್ಥಾನದ ಶೈಕ್ಷಣಿಕ ವ್ಯವಸ್ಥೆಯ ತಾಯಿ ಬೇರು, ನಾವು ಸಾಕ್ಷರತೆಯನ್ನು ಸಾಧಿಸದಿದ್ದರೆ ರಾಷ್ಟ್ರದ ಜನಸಮುದಾಯವನ್ನು ಬಾಧಿಸುತ್ತಿರುವ ಅಜ್ಞಾನ, ಬಡತನ ಮೊದಲಾದ ಪಿಡುಗನ್ನು ಹೋಗಿಸಲು ಸಾಧ್ಯವಿಲ್ಲ. ಕಾರ್ಖಾನೆ, ಗಿರಣಿಗಳಿಂದ ವಸ್ತುಗಳನ್ನು ಹೊರ ಹಾಕಿದಂತೆ ಶಾಲಾ, ಕಾಲೇಜುಗಳಿಂದ ವಿದ್ಯಾರ್ಥಿಗಳನ್ನು ಹೊರ ಹಾಕುವುದರಿಂದ ಏನನ್ನೂ ಸಾಧಿಸಿದಂತಾಗುವುದಿಲ್ಲ. ರಾಷ್ಟ್ರವನ್ನು ಸಂಪನ್ಮೂಲ ವಾಗಿ ಮಾಡುವಂಥ, ಮಾನವೀಯ ಸಂಪನ್ಮೂಲದ ಸ್ಪರ್ಧೆಗೆ ವಿದ್ಯಾರ್ಥಿಗಳನ್ನು ತಯಾರು ಮಾಡಬೇಕಾದರೆ ಅದಕ್ಕೆ ಪೂರಕವಾದ ಮೌಲ್ವಿಕವಾದಂಥ ವಿದ್ಯೆಯನ್ನು (Quality Education) ನೀಡಬೇಕು ಎಂದು ನುಡಿದರು.

ನಂತರ ಶತಮಾನೋತ್ಸವ ಸಮಾರಂಭದ ಮನ ರಂಜನೆ ಕಾರ್ಯಕ್ರಮಗಳು ಪ್ರೌಢಶಾಲಾ ವಿದ್ಯಾರ್ಥಿನಿ ಯರ ಸ್ವಾಗತ ನೃತ್ಯದೊಂದಿಗೆ ಪ್ರಾರಂಭವಾಯಿತು. "ಸ್ವಾಗತಂ ಶುಭ ಸ್ವಾಗತಂ'' ಎನ್ನುವ ಸ್ವಾಗತ ನೃತ್ಯದ ಹಿಮ್ಮೇಳನದ ಗಾಯನವು ಈ ಸಂದರ್ಭ ಕ್ಕಾಗಿಯೇ ರಚಿಸಿದ್ದೇನೋ ಎಂಬಂತೆ ಅರ್ಥಪೂರ್ಣ ವಾಗಿತ್ತು. ಈ ವರ್ಣರಂಜಿತ, ವೈವಿಧ್ಯಮಯವಾದ ಕಾರ್ಯಕ್ರಮದಲ್ಲಿ ವಿದ್ಯಾರ್ಥಿನಿಯರು ಪಠ್ಯೇತರ ಚಟುವಟಿಕೆಗಳಲ್ಲಿ ತಮಗಿರುವ ನೃತ್ಯ ಹಾಗೂ ಸಂಗೀತದ ಪ್ರತಿಭೆಯನ್ನು

(ಅ) ಸ್ವಾಗತ ನೃತ್ಯ – 1982ರಲ್ಲಿ ನಡೆದ ಏಷ್ಯನ್ ಕ್ರೀಡಾಕೂಟದ ಸುದರ್ಭದಲ್ಲಿ ಆಹ್ವಾನಿತರನ್ನು ಸ್ವಾಗತಿಸುವುದಕ್ಕಾಗಿಯೇ ಪಂಡಿತ ರವಿಶಂಕರ್‌ರವರ ಸಂಗೀತ ನಿರ್ದೇಶನದಲ್ಲಿ ಈ ಸ್ವಾಗತ ಗೀತೆಯನ್ನು ಹಾಡಲಾಗಿತ್ತು.

ಆ) ಸ್ಯಾರಿ ನೃತ್ಯ – ಕೆಂಪು, ಹಳದಿ, ಹಸಿರು ಹೀಗೆ ಅನೇಕ ವರ್ಣಗಳಿಂದ ಅಲಂಕೃತರಾದ ವಿದ್ಯಾರ್ಥಿನಿಯರು "ಬಣ್ಣ ನನ್ನ ಒಲವಿನ ಬಣ್ಣ, ನನ್ನ ಬದುಕಿನ ಬಣ್ಣ'' ಎನ್ನುವ ಹಾಡಿಗೆ ಸರಿಯಾಗಿ ನರ್ತಿಸುತ್ತ ಇದರ ಮೂಲಕವಾಗಿ ಈ ಏಳು ಬಣ್ಣಗಳು ಸೇರಿ ಬಿಳಿಯ ಬಣ್ಣವಾಗಿರುವ ಹಾಗೆ ಈ ವಿದ್ಯಾರ್ಥಿನಿ ಯರೆಲ್ಲ ಸೇರಿ ಒಂದು ಶಾಲೆಯಾಗಿದೆ ಎಂಬುದನ್ನು ಸೂಚಿಸಿದರು. ಮತ್ತು

ಇ) ಪ್ರಾಂತೀಯ ನೃತ್ಯ – ವೇಷ ಭೂಷಣ, ಭಾಷೆಗಳು ಬೇರೆ ಬೇರೆಯಾಗಿದ್ದರೂ ನಾವೆಲ್ಲರೂ ಭಾರತೀಯರೆನ್ನುವ ಭಾವೈಕ್ಯತೆಯನ್ನು ಪಿಲ್ಲಲ್ಲಾರ ಪಾಪಲ್ಲಾರ, ರೇಪಟಿ ಭಾರತ ಪಾರುಲ್ಲಾರ (ತೆಲುಗು); 'ಏ ಮಾತೀರೇ ಮೋರೋ ಮಾತೆ (ಒಡಿಸ್ಸಿ) "ಎನ್ನ ತಾಯಿ ಭಾರತಮೆ' (ತಮಿಳು); "ಆಕಾಶಗಂಗ ಸೂರ್ಯ ಚಂದ್ರ ತಾರ'' (ಗುಜರಾತಿ), ಚೆಲುವಿನ ಮುದ್ದಿನ ಮಕ್ಕಳೆ'' (ಕನ್ನಡ) ಮತ್ತು ಸಿಂದ್ ದೇಶಕೆ ನಿವಾಸಿ ಸಬಿ ಜನ್ ಏಕ್ ಹೈ'' (ಹಿಂದಿ) ಈ ಕಾರ್ಯಕ್ರಮಗಳ ಮೂಲಕ ಸಾರಿದರು.



ಪ್ರಾಂಶುಪಾಲರಾದ ಶ್ರೀಧರರಾಜೇ ಅರಸ್

ವಿದ್ಯಾಸಂಸ್ಥೆಯ ಸಂಸ್ಥಾಪಕಿಯಾದ ಕೆಂಪನಂಜಮ್ಮಣ್ಣಿ ಯವರು



ದಾಂಡಿಯಾ ಡಿಸ್ಕೋದ "ಜೂಮೇಂಗೆ ಹಮ್, ನಾಚೇಂಗೆ ಹಮ್, ಗಾಯೇಂಗೆ ಹಮ್'' ಎನ್ನುವ ಕೋಲಾಟವಂತೂ ವಯಸ್ಸಿನ ಭೇದ ಭಾವವಿಲ್ಲದೆ ಪ್ರೇಕ್ಷಕರನ್ನು ಕ್ಷಣ ಕಾಲವಾದರೂ ತಮ್ಮ ಇರವನ್ನು ಮರೆತು ಸಂತೋಷವಾಗಿರುವಂತೆ ಮಾಡುವುದರಲ್ಲಿ ಯಶಸ್ವಿಯಾಯಿತು. ಕವ್ವಾಲಿ (ಉತ್ತರ ಪ್ರದೇಶದಲ್ಲಿ ಹೆಸರುವಾಸಿಯಾದ ಕಲೆ) ರಾಜಸ್ಥಾನಿ ಸಮೂಹ ನೃತ್ಯ; ಅಸ್ಸಾಮಿ ಸೂಪಡಿ; ಅನೇಕ ರಾಜ್ಯಗಳಿಗೆ ಸೇರಿದ ವಧುಗಳ ಸಾಂಪ್ರದಾಯಿಕ ವೇಷಭೂಷಣಗಳ ಪ್ರದರ್ಶನ, ಪಾಶ್ಚಾತ್ಯ ನೃತ್ಯ ಡಿಸ್ಕೋ ಮೊದಲಾದ ಆಕರ್ಷಕ ಕಾರ್ಯಕ್ರಮಗಳು "ವೈವಿಧ್ಯತೆಯಲ್ಲಿ ಏಕತೆ'' ಎನ್ನುವ ತತ್ವವನ್ನು ಸಾರಿ ಹೇಳುತ್ತಿತ್ತು. ಅದೇ ರೀತಿಯಲ್ಲಿ ನಮ್ಮ ಸುಸ್ಕೃತಿಯ ಪ್ರತೀಕವಾದ ಭರತನಾಟ್ಯ ಅಭಿನಯವನ್ನು ವಿದ್ಯಾರ್ಥಿನಿಯರು ಶಾಸ್ತ್ರೀಯವಾಗಿ, ಹಾವಭಾವ ಪೂರ್ಣವಾಗಿ, ಬಹಳ ಸೊಗಸಾಗಿ ಪ್ರದರ್ಶಿಸಿದರು.

'ತ್ಯಾಗಿ' ಎಂಬ ನಾಟಕ ಮತ್ತು "ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ'' ಎನ್ನುವ ತತ್ವದ ಮೂಲಕ ಆರಕ್ಕೆ ಹಿಗ್ಗದೆ ಮೂರಕ್ಕೆ ಕುಗ್ಗದೆ ಜೀವನದಲ್ಲಿ ನೋವು, ನಲಿವು ಎರಡನ್ನೂ ಸರಿಸಮಾನವಾಗಿ ಸ್ವೀಕರಿಸಬೇಕೆನ್ನುವ ಮನೋಧರ್ಮವನ್ನು ಬೆಳೆಸಿಕೊಳ್ಳ ಬೇಕೆಂದು ಸಾರುವ ಗೌತಮ ಬುದ್ಧನ ಕಥೆಯ ಸಂಗೀತ ರೂಪಕವನ್ನು ಮತ್ತು "ಶೂರ್ಪನಖಾ ಗರ್ವಭಂಗ'' ಎನ್ನುವ ಯಕ್ಷಗಾನ ಪ್ರದರ್ಶನದ ಮೂಲಕ ವಿದ್ಯಾರ್ಥಿನಿಯರ ಕಲೆಯನ್ನು ಪರಿಚಯಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದರು.

ನಗುವಿಲ್ಲದ ಜೀವನವನ್ನು ಊಹಿಸಿಕೊಳ್ಳಲು ಸಾಧ್ಯವೇ? ನಮ್ಮ ಜೀವನದ ಅವಿಭಾಜ್ಯ ಅಂಗವಾದ ನಗುವಿನ ಮಹತ್ವವನ್ನು ವಿದ್ಯಾರ್ಥಿಗಳು "ಥೋಡಾ ಥೋಡಾ ಹಸ್ನಾ ಝುರೂರ ಚಾಯೇಗಾ'' ಎನ್ನುವ ಭಾಂಗ್ಡಾ ನೃತ್ಯ ಮತ್ತು ಹಾಡಿನ ಮೂಲಕ ತಿಳಿಸಿ ಕೊಟ್ಟರು. ಹಾಗೆಯೇ ಜೀವನದಲ್ಲಿ ಮನುಷ್ಯನಿಗೆ ತಾಳ್ಮೆಯ ಮಹತ್ವವನ್ನು ತೋರಿಸುವ "ಕೇಳಿದ್ದು ಸುಳ್ಳಾಗಬಹುದು, ನೋಡಿದ್ದು ಸುಳ್ಳಾಗಬಹುದು, ನಿಧಾನಿಸಿ ಯೋಚಿಸಿದಾಗ ನಿಜವು ತಿಳಿವುದು''

ಎನ್ನುವ ನೃತ್ಯರೂಪಕದ ಪ್ರದರ್ಶನವು ನೀತಿಭೋದಕವೂ ಹಾಗೂ ತಿಳುವಳಿಕೆಯಿಂದ ಕೂಡಿದ್ದಾಗಿತ್ತು.

ಈ ಶತಮಾನೋತ್ಸವ ಸಮಾರಂಭವನ್ನು ಯಶಸ್ವಿಯಾಗಿ ನಡೆಸಿದ ಕೀರ್ತಿಯು ಕಾಲೇಜಿನ ಪ್ರಾಂಶುಪಾಲರಾದ ಹಾಗೂ ಶತಮಾನೋತ್ಸವ ಸಮಿತಿಯ ಕಾರ್ಯದರ್ಶಿಗಳೂ ಆದ ಶ್ರೀಮಾನ್ ಶ್ರೀಧರರಾಜೇ ಅರಸ್‌ರವರಿಗೆ ಸಂಪೂರ್ಣವಾಗಿ ಸಲ್ಲಬೇಕು.

ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶವೆಂದರೆ ಹಳೆಯ ವಿದ್ಯಾರ್ಥಿನಿಯರು ತಾವು ಓದಿದ ಶಾಲೆಯೆಂಬ ಅಭಿಮಾನದಿಂದ, ಬೇರೆ ಬೇರೆ ಸ್ಥಳಗಳಿಂದ ಈ ಶತಮಾನೋತ್ಸವ ಸಮಾರಂಭದ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಕ್ಕಾಗಿಯೇ ಆಗಮಿಸಿದ್ದರು. ಅನೇಕ ಪ್ರತಿಭಾನ್ವಿತರು ಹಾಗೂ ಸಮಾಜ ಸೇವಕಿಯರನ್ನು ಕೊಡುಗೆಯಾಗಿ ನೀಡಿದ ಕೀರ್ತಿ ಈ ಶಾಲೆಗೆ ಸಲ್ಲುತ್ತದೆ. ಅವರುಗಳಲ್ಲಿ ಪ್ರಮುಖರೆಂದರೆ ಶ್ರೀಮತಿ ಜಯಲಕ್ಷ್ಮಮ್ಮಣ್ಣಿ; ಶಿಸ್ತಿಗೆ ಹೆಸರುವಾಸಿಯಾಗಿದ್ದ ಇವರು ಶಿಕ್ಷಣ ತಜ್ಞರು, ಮಹಾರಾಣಿ ಕಾಲೇಜಿನ ಮಾಜಿ ಪ್ರಿನ್ಸಿಪಾಲರು ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀಮತಿ ಸುರಮಾಬಾಯಿ: ಶಿಕ್ಷಣ ತಜ್ಞೆಯೂ, ಸಮಾಜ ಸೇವಕಿಯೂ ಆಗಿರುವ ಇವರು ಹೆಣ್ಣು ಮಕ್ಕಳಿಗೆಂದೇ ಮೈಸೂರಿನ ಕೃಷ್ಣಮೂರ್ತಿ ಪುರಂನಲ್ಲಿ 'ಭಗಿನಿ ಸೇವಾ ಸಮಾಜ' ಎಂಬ ಸುಪ್ರಸಿದ್ಧವಾದ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿ ಈಗಲೂ ಅನೇಕ ವಿದ್ಯಾರ್ಥಿನಿಯರಿಗೆ ವಿದ್ಯಾದಾನ ಮಾಡುತ್ತಿದ್ದಾರೆ.

ಶ್ರೀಮತಿ ಪುಟ್ಟತಾಯಮ್ಮ: ಕಲಾಪ್ರೇಮಿಯೂ, ಸಂಗೀತ ನಾಟಕಗಳಲ್ಲಿ ಉತ್ತಮ ಅಭಿರುಚಿ ಹಾಗೂ ಆಸಕ್ತಿಯನ್ನು ಹೊಂದಿರುವ ಇವರು ಮೈಸೂರು ಆಕಾಶವಾಣಿಯ ಉಪ ನಿರ್ದೇಶಕರಾಗಿ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀಮತಿ ಮುಕ್ತರ ಉನ್ನೀಸಾ ಬೇಗಂ : ತಾವು ಓದಿದ ಶಾಲೆಯ ಬಗ್ಗೆ ಅಪಾರವಾದ ಪ್ರೀತಿ ಹಾಗೂ ಅಭಿಮಾನವನ್ನು ಹೊಂದಿರುವ, ರಾಜಕೀಯ ಧುರೀಣರಾದ ಇವರು ಈಗ ವಿಧಾನ ಪರಿಷತ್ ಸದಸ್ಯರಾಗಿದ್ದಾರೆ. ಜಾತಿಯಲ್ಲಿ ಮುಸಲ್ಮಾನರಾಗಿದ್ದರೂ 'ಕನ್ನಡ ನಾಡಿನವಳು' ಎಂದು ತಮ್ಮನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಇವರು 'ರಾಯಲ್ ಎಜುಕೇಷನ್ ಸೊಸೈಟಿ' ಎಂಬ ಜಾತ್ಯತೀತ ಶಾಲೆಯನ್ನು ಸ್ಥಾಪಿಸಿ ಇದರಲ್ಲಿ ಎಲ್ಲಾ ಕೋಮಿನವರೂ ವಿದ್ಯೆಯನ್ನು ಕಲಿಯುವ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ.

ಕುಮಾರಿ ವಾರಿಜಾ ನಲಿಗೆ : ಭರತ ನಾಟ್ಯದ ವಿದ್ವಾನ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಗಳಿಸಿರುವ, ಶ್ರೀಮತಿ ವಸುಂಧರಾ ದೊರೆಸ್ವಾಮಿಯವರ ಶಿಷ್ಯೆಯಾಗಿರುವ ಇವರ ಭರತನಾಟ್ಯ ಪ್ರದರ್ಶನವು (ಡಿ.ವಿ.ಜಿ.ಯವರ ಅಂತಃಪುರ ಗೀತೆಯಿಂದ ಆಯ್ದ ಕವಿತೆ "ಏನಿದೋ ಮಹಾನಂದ' ಮತ್ತು ತಿಲ್ಲಾನ) ಕಾರ್ಯಕ್ರಮಕ್ಕೆ ವಿಶೇಷವಾದ ಮೆರುಗನ್ನು ತಂದು ಕೊಟ್ಟಿತು.

ಶತಮಾನೋತ್ಸವ ಸಮಾರಂಭದ ಮುಕ್ತಾಯ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ರಾಜ್ಯ ಸರ್ಕಾರದ ಯೋಜನೆ ಮತ್ತು ಹಣಕಾಸಿನ ಸಚಿವರಾದ ಶ್ರೀಮತಿ ಕೆ.ಎಸ್. ನಾಗರತ್ನಮ್ಮನವರು ಮಾತನಾಡುತ್ತಾ "ಹಿಂದಿನ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ಹಾಡು, ಹಸೆ, ರಂಗೋಲಿ, ಮನೆಗೆಲಸವನ್ನು ಕಲಿಸಿ ಗಂಡನ ಮನೆಗೆ ಕಳಿಸಿದರೆ ಸಾಕು ಎನ್ನುವ ಮನೋಭಾವನೆಯಿತ್ತು. ಆದರೆ ಈಗ ಪರಿಸ್ಥಿತಿಯು ಬದಲಾಗಿ ಗಂಡು ಹೆಣ್ಣು ಎನ್ನುವ ಭೇದವಿಲ್ಲದೆ ವಿದ್ಯೆಯನ್ನು ಕಲಿಸಬೇಕು. ವಿದ್ಯೆಯನ್ನು ಕಲಿಯದಿದ್ದವರು ಪಶುವಿಗೆ ಸಮಾನ ಎನ್ನುತ್ತಾರೆ. ಬರೀ ಸರ್ಕಾರವೊಂದರಿಂದ ಈ ಕೆಲಸ ಸಾಧ್ಯವಿಲ್ಲದ ಕಾರಣ ಖಾಸಗೀ ವಲಯದವರು ಶಾಲೆಗಳನ್ನು ತೆರೆಯಲು ಬಯಸಿ ಮುಂದೆ ಬಂದರೆ ಸರ್ಕಾರ ಪೂರ್ಣ ರೀತಿಯ ಪ್ರೋತ್ಸಾಹವನ್ನು ನೀಡಲು ಸಿದ್ಧ" ಎಂದು ನುಡಿದರು.

ಹಳೆಯ ವಿದ್ಯಾರ್ಥಿನಿಯಾದ ಹಾಗೂ ಶತಮಾನ ಸಮಾರಂಭದ ಗೌರವಾಧ್ಯಕ್ಷರಾಗಿರುವ ಶ್ರೀಮತಿ ಮುಕ್ತರುನ್ನೀಸಾ ಬೇಗಂರವರು ಇಂದು ತಾವಿರುವ ಸ್ಥಿತಿಗೆ, ತಮ್ಮ ಸರ್ವತೋಮುಖ ಬೆಳವಣಿಗೆಗೆ ಈ ಶಾಲೆ ಹಾಗೂ ತಮ್ಮ ಉಪಾಧ್ಯಾಯರುಗಳೇ ಕಾರಣರೆಂದು ತಿಳಿಸಿದರು. ವಿದ್ಯಾರ್ಥಿಗಳು ಜೀವನದಲ್ಲಿ ಮುಂದೆ ಬರಬೇಕಾದರೆ ಹೆಚ್ಚು ಮರ್ಯಾದೆಯನ್ನು ಅಧ್ಯಾಪಕರಿಗೆ ನೀಡಬೇಕು ಮತ್ತು ಕಷ್ಟಪಟ್ಟು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕೆಂದು ಹೇಳಿದ ಹಿತ ವಚನದೊಂದಿಗೆ ಈ ಶತಮಾನೋತ್ಸವ ಸಮಾರಂಭದ ಕಾರ್ಯಕ್ರಮಗಳು ಮುಕ್ತಾಯಗೊಂಡವು.

– **ಕುಮಾರಿ ಅನುರಾಧ**
ಮೈಸೂರು



ವಿದ್ಯಾಸಂಸ್ಥೆಯ ಸ್ಥಾಪನೆಗೆ ಕಾರಣಕರ್ತರಾಗಿರುವ ಶ್ರೀ ಅಂಬಿಲ್ ನರಸಿಂಹ ಅಯ್ಯಂಗಾರ್‌ರವರು.



ಶತಮಾನೋತ್ಸವ ಸಮಾರಂಭವನ್ನು ಆಚರಿಸುವದರ ಜೊತೆಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಕ್ಕೆ ತರಲಿದ್ದೇವೆ.

1) ಸಮಾರಂಭದ ಜ್ಞಾಪಕಾರ್ಥವಾಗಿ ಸುಸಜ್ಜಿತ ರಂಗಮಂದಿರವನ್ನು ಕಟ್ಟಿಸುವುದು.

2) ಶತಮಾನೋತ್ಸವ ಸ್ಮರಣಸಂಚಿಕೆಯನ್ನು ಪ್ರಕಟಿಸುವುದು.

3) ದತ್ತಿ ನಿಧಿ ಸ್ಥಾಪನೆ, ಪ್ರತಿಭಾನ್ವಿತ ಮತ್ತು ಬಡ ವಿದ್ಯಾರ್ಥಿನಿಯರಿಗೆ ಸಹಾಯ ಮಾಡುವುದು.

4) ಕಾಲೇಜಿನ ಪುರಾತನ ಗೋಪುರಕ್ಕೆ ಹೊಸ ಗಡಿಯಾರವನ್ನು ಅಳವಡಿಸುವುದು.



# ಹುಟ್ಟಿದಹಬ್ಬ



ಸುಷ್ಮಾ : 13.12.1991
ತಾಯಿ : ವಿಜಯಾ ಜೆ.ಶೆಟ್ಟಿ, ಬನ್ನೂರು



ಕಾರ್ತಿಕ್ : 9.12.1991
ತಾಯಿ : ಶೋಭಾ ದೇವದಾಸ್, ಶಿವಮೊಗ್ಗ



ಕಾವ್ಯ : 24.12.1991
ತಾಯಿ : ಪದ್ಮಜಾ, ಬೆಂಗಳೂರು – 50



[illegible] : 2[illegible].12.1991
ತಾಯಿ : [illegible]



ಸ್ಫೂರ್ತಿ : 16.12.1991
ತಾಯಿ : ರಾಧಾ ಡಿ. ಕುಡ್ವ, ಪುತ್ತೂರು (ದ.ಕ.)



ಕಿರಣ : 18–12–1991
ತಾಯಿ : ಗಾಯತ್ರಿ ಮಡಿವಾಳರ, ಮುನವಳ್ಳಿ (ಬೆಳಗಾಂ ಜಿಲ್ಲೆ)



[illegible] : 16.12.1991 ತಾಯಿ : [illegible]



ಈ ಬಾರಿ ಮುರಳಿ ಅಮೆರಿಕದಿಂದ ರಜದ ಮೇಲೆ ಬಂದಾಗ ನನ್ನನ್ನು ಕಾಣಲು ಇಲ್ಲಿಗೆ ಬಂದಿದ್ದ.

"ಅಮ್ಮಾ ನಿನಗಿಲ್ಲಿ ಬೇಸರವಾಗುವುದಿಲ್ಲವೇ? ನನ್ನೊಂದಿಗೆ ಬಂದುಬಿಡು" ಎಂದ. ಆದರೆ ನಾನು "ಈ ಶಾಂತಿಧಾಮದಲ್ಲಿ ನಾನು ನನ್ನ ಜೀವನದ ಅತ್ಯಂತ ಸುಂದರ, ಸಂತೃಪ್ತ ಭಾಗವನ್ನು ಕಳೆದಿದ್ದೇನೆ, ಮುರಳಿ. ನನ್ನ ಪ್ರೇಮ ದೃಷ್ಟಿ ಇದೀಗ ನನ್ನ ಸಂಸಾರವೆಂಬ ಸಣ್ಣ ವರ್ತುಲದಿಂದ ವಿಶ್ವ ಪ್ರೇಮಕ್ಕೆ ವಿಸ್ತಾರಗೊಂಡಿದೆ. ನಿನ್ನಂತಹ ಇನ್ನೂ ಅನೇಕರನ್ನು ಬೆಳೆಸುವ, ಉಳಿಸುವ ಹಿರಿಯ ಕಾರ್ಯದಲ್ಲಿ ನನ್ನನ್ನು ತೊಡಗಿಸಿಕೊಂಡಿದ್ದೇನೆ. ಎಂತಲೇ ತುಂಬಾ ಸುಖಿಯಾಗಿದ್ದೇನೆ" ಎಂದಾಗ, ಅವನಿಗೂ ಸಮಾಧಾನವಾಗಿತ್ತು.

"ಮುರಳಿ, ನೀನೀ ಬಾರಿ ಹಿಂತಿರುಗುವಷ್ಟರಲ್ಲಿ ಮದುವೆಯಾಗಬೇಕು ಎಂದು ನನ್ನಾಸೆ" ನಾನೆಂದೆ.

"ಆಗಲಿ ಅಮ್ಮ ಆದರೆ ನಾನೊಂದು ಹುಡುಗಿಯನ್ನು ನೋಡಿದ್ದೇನೆ. ನೀನೊಪ್ಪಿದರೆ..."

"ಹುಡುಗಿ ಯಾರು ಮುರಳಿ? ನಿನಗೆ ಅನುರೂಪಳಾಗಿರುವಳೇ? ಭಾರತೀಯಳೋ ಅಥವಾ ಅಮೆರಿಕನ್ನಳೋ?"

"ಭಾರತದಲ್ಲಿ ಇಲ್ಲದ ಅನರ್ಘ್ಯರತ್ನ ವಿದೇಶದಲ್ಲಿದೆ ಎಂದರೆ ನಾನು ಒಪ್ಪಲಾರೆ ಅಮ್ಮ. ಮೊನ್ನೆ ಮುಂಬಯಿಯ ಅನಾಥಾಶ್ರಮವೊಂದಕ್ಕೆ ನನ್ನ ಗೆಳೆಯನೊಂದಿಗೆ ಯಾವುದೋ ಕೆಲಸದ ಮೇಲೆ ಹೋಗಿದ್ದೆ. ಅಲ್ಲಿ ಮೀರಾ ಎನ್ನುವ ಒಬ್ಬ ಅನಾಥ ಹುಡುಗಿಯನ್ನು ಕಂಡೆ. ಹುಡುಗಿ ಮುದ್ದಾಗಿದ್ದಾಳೆ. ಆದರೆ ಕಾಲು ಪೋಲಿಯೋದಿಂದಾಗಿ ಸ್ವಲ್ಪ ತಿರುಚಿಕೊಂಡಿದೆ. ಎಳೆದೆಳೆದು ಹಾಕುತ್ತಾಳೆ. ಇಂತಹ ಸಣ್ಣ–ಪುಟ್ಟ ತೊಂದರೆಗಳನ್ನು ಶಸ್ತ್ರಚಿಕಿತ್ಸೆಯಿಂದ ಸರಿಪಡಿಸಲು ಅಮೆರಿಕದಲ್ಲಿ ಬಹಳ ಅನುಕೂಲಗಳಿವೆ. ನೀನು ಒಪ್ಪಿದರೆ, ನಾನು ಮೀರಾಳನ್ನು ಮದುವೆಯಾಗಿ ಅಮೆರಿಕೆಗೆ ಕರೆದೊಯ್ಯುವೆ. ಅಲ್ಲಿ ಅವಳ ಕಾಲನ್ನು ಶಸ್ತ್ರಚಿಕಿತ್ಸೆಗೆ ಒಳಪಡಿಸಿ ಸರಿಯಾಗಿಸುತ್ತೇನೆ"

"ಮುರಳಿ, ನಿನ್ನ ಈ ಜೀವನದೃಷ್ಟಿ ನನಗೆ ತುಂಬಾ ಸಂತೋಷ ತಂದಿದೆ. ನಿನ್ನಂತಹ ಯುವ ವಿದ್ಯಾವಂತರು ಈ ರೀತಿಯ ನಿರ್ಧಾರಗಳನ್ನು ತೆಗೆದುಕೊಂಡರೆ ಭಾರತ ಬದುಕೀತು. ನಿನ್ನ ಆಯ್ಕೆಗೆ ನನ್ನ ಸಂಪೂರ್ಣ ಸಮ್ಮತಿಯಿದೆ. ಈ ತಿಂಗಳಲ್ಲೇ ಒಂದು ಶುಭಲಗ್ನ ಹುಡುಕಿ ನಿನ್ನ ಮದುವೆ ನಡೆಸೋಣ"

"ಅಮ್ಮಾ ನನ್ನ ಮದುವೆಗಾದರೂ ನೀನು ಬಂದು ನಡೆಸಿಕೊಡುತ್ತೀ ತಾನೆ?"

"ಏಕಿಲ್ಲ ಮುರಳಿ? ನೀನು ನನ್ನ ಮಗನಲ್ಲವೇ? ಮೊದಲಾದರೆ ನೀನೊಬ್ಬನೇ ಇದ್ದೆ. ಇದೀಗ ತುಂಬಾ ಮಕ್ಕಳಿದ್ದಾರೆ. ಎಂತಲೇ ನೀನಿಲ್ಲದ ಕೊರತೆ ನೀಗಿದೆ. ನಿನಗೂ ಅಮ್ಮ ಒಬ್ಬಂಟಿಯಾಗಿದ್ದಾಳೆ ಎಂಬ ಆತಂಕವಿಲ್ಲ ಅಲ್ಲವೇ?"

ಮುರಳಿ ನನ್ನನ್ನು ತಬ್ಬಿ ಮುದ್ದಿಟ್ಟು ಹೇಳಿದ "ಅಮ್ಮಾ ನಿನ್ನಂತಹ ತಾಯಿಯನ್ನು ಪಡೆದಿದ್ದೇನೆ ಎಂದು ನನಗೆಷ್ಟು ಹೆಮ್ಮೆ ಗೊತ್ತಾ? ಎಲ್ಲಾ ತಾಯಿಯರೂ ನಿನ್ನಂತೆಯೇ ಇರಬಾರದೇ?"

ನಾನೆಂದೆ "ಎಲ್ಲಾ ಮಕ್ಕಳೂ ನಿನ್ನಂತಾದರೆ ತಾಯಂದಿರೂ ಒಳ್ಳೆಯವರೇ ಆಗುವುದಿಲ್ಲವೇ ಮುರಳಿ? ಹಾಗೆ ನೋಡಿದರೆ ಸನ್ನಡತೆಯ ಮಕ್ಕಳನ್ನು ಸನ್ಮಾರ್ಗದಲ್ಲಿ ನಡೆಸುವ ತಾಯಿಗಿಂತ, ದುರ್ನಡತೆಯ ಮಕ್ಕಳನ್ನು ತಿದ್ದಿ ನಡೆಸುವ ತಾಯಿಯ ಪಾತ್ರ ಹಿರಿದು. ಈ ನಿಟ್ಟಿನಲ್ಲಿ ನಾನು ಸುದೈವಿ. ನಿನ್ನನ್ನು ರೂಪಿಸುವುದರಲ್ಲಿ ನನ್ನ ಪಾತ್ರ ಚಿಕ್ಕದೇ. ಅದಿರಲಿ, ನಿನ್ನ ಮದುವೆಯ ತಾರೀಖು ನಿಶ್ಚಯಿಸುವ ಮುನ್ನ, ನನ್ನ ಗೆಳತಿ ಪೂರ್ಣಿಳಿಗೊಂದು ಪತ್ರ ಬರೆಯಬೇಕು. ಅವಳಿಲ್ಲದೆ ಹೋಗಿದ್ದರೆ ನಾನು, ನೀನು ಇಬ್ಬರೂ ಇಂದು ಈ ಸ್ಥಿತಿಯಲ್ಲಿರುತ್ತಿರಲಿಲ್ಲ"

ಮುರಳಿಗೆ ಅಚ್ಚರಿಯಾಗಿರಬಹುದು, ಇಷ್ಟು ದಿನ ತಾಯಿಯ ಬಾಯಲ್ಲಿ ನುಸುಳದ ಗೆಳತಿ ಇಂದೆಲ್ಲಿ ಬಂದಳು ಎಂದು. ಅವನಿಗೇನು ಗೊತ್ತು ಈ ಸ್ಮೃತಿಯ ಸ್ಮೃತಿ ದೇಗುಲದಲ್ಲಿ ಪೂರ್ಣಿಳ ಮೂರ್ತಿ ಇಪ್ಪತ್ತೂರು ವರ್ಷಗಳಿಂದಲೂ ಅಚ್ಚೊತ್ತಿ ಉಳಿದಿತ್ತೆಂದು!

ಧಾರಾವಾಹಿ

# ಸಪ್ತಸ್ವರ

—ಗೀತಾ ಸೀತಾರಾಮ್



**ಪೂರ್ಣ:** "ಅಜ್ಜಿ, ಅಜ್ಜಂಗೆ ಟೀ ಮಾಡಿಕೊಡಬೇಕಂತೆ. ನಾನು ಸ್ಮಿತಾನ ನೋಡಿಕೊಳ್ತೀನಿ, ನೀವಿಲ್ಲಿ ಮಲಗಿಸಿ" ಸುನೀಲ್ ಹೇಳಿದ. "ಇನ್ನು ಹತ್ತು ನಿಮಿಷದಲ್ಲಿ ಕೊಡುತ್ತೇನೆ ಎಂದು ಅಜ್ಜನಿಗೆ ಹೇಳು ಮರಿ" ಎಂದೆ. ಸುನೀಲ್ ಯಾವಾಗಲೂ ಹೀಗೆ. ನಾನು ಸ್ಮಿತಾಳನ್ನು ಎತ್ತಿಕೊಂಡರೆ ಸಾಕು, ಏನಾದರೂ ನೆವ ಹೂಡಿ ನನ್ನನ್ನು ಎಬ್ಬಿಸಲು ನೋಡುತ್ತಾನೆ. ಎಂತಲೇ ಸಂಗೀತಾ ನನಗೆ ಸಾರಿ ಸಾರಿ ಹೇಳಿದ್ದಳು. "ಅಮ್ಮಾ ನೀನು ಸುನೀಲ್‌ನ ನಂಬಿ ಸ್ಮಿತಾನ ಬಿಟ್ಟು ಎಲ್ಲೂ ಹೋಗಬೇಡ. ಒಂದೊಂದು ಸಲ ಮುದ್ದು ಮಾಡ್ತೀನಂತ ಮಗು ಕೆನ್ನೆ ಕಚ್ಚಿ ಬಿಡ್ತಾನೆ"

ಜವಾಬ್ದಾರಿ ಹೆಚ್ಚೆಂದು ತಿಳಿದಿದ್ದರೂ, ಮಗಳು ನಿಶ್ಚಿಂತೆಯಿಂದ ಹೋಗಿಬರಲಿ ಎಂದು ಬ್ಯಾಂಕಿಗೆ ಒಂದು ತಿಂಗಳು ರಜೆ ಹಾಕಿ, ಮಕ್ಕಳನ್ನು ನೋಡಿಕೊಳ್ಳಲು ಒಪ್ಪಿದ್ದೆ. ನನಗಂತೂ ಚಿಕ್ಕ ವಯಸ್ಸಿಗೇ ಸಂಸಾರದ ನೊಗ ಬೆನ್ನಿಗೆ ಬಿತ್ತು. ಬೇಕೆಂದಲ್ಲಿ ಹೋಗಿಬರಲು ಅವಕಾಶವಾಗಲಿಲ್ಲ. ಸಂಗೀತಳ ಪತಿ ರಘುನಾಥ ಅವಳೊಡನೆಯೇ ಓದಿದವ. ಇದೀಗ ಇಬ್ಬರೂ ದೆಹಲಿಯ ಪ್ರಮುಖ ಪತ್ರಿಕೋದ್ಯಮಿಗಳಾಗಿದ್ದಾರೆ. ಅವರಿಬ್ಬರೂ ಹಣ ಕೂಡಿಸಿಕೊಂಡು ತಮ್ಮ ಉದ್ಯೋಗಕ್ಕೆ ಅನುಕೂಲವಾಗುವುದೆಂಬ ದೃಷ್ಟಿಯಿಂದ 'ವರ್ಲ್ಡ್‌ಟೂರ್' ಹೋಗಬೇಕೆಂದು ಆಸೆ ಪಟ್ಟಾಗ, ನನ್ನಿಂದ ಸಾಧ್ಯವಾಗದ್ದು ಮಗಳಾದರೂ ಮಾಡಲಿ ಎಂಬ ಆಶೆಯಿಂದ, ಅವಳ ಮಕ್ಕಳನ್ನೂ ತಿಂಗಳ ಮಟ್ಟಿಗೆ ನೋಡಿಕೊಳ್ಳಲು ಸಂತೋಷದಿಂದಲೇ ಒಪ್ಪಿದ್ದೆ. ಜೊತೆಗೆ ಸುನಿಲನ ಮುಗ್ಧ ಮಾತುಗಳು, ಸ್ಮಿತಾಳ ಆಟ–ಪಾಟಗಳನ್ನು ಹೆಚ್ಚು ಕಾಣುವ–ನೋಡುವ ಚಪಲವೂ ಇತ್ತು.

ಮಗುವನ್ನು ಮಲಗಿಸಲು ತೊಡೆ ತೂಗುತ್ತಿದ್ದ ನನಗೆ, ಇಪ್ಪತ್ತೈದು ವರ್ಷಗಳಿಂದೀಚೆಗೆ ನನ್ನ ಬದುಕಿನಲ್ಲಾದ ಏರು–ಪೇರು ಚಿತ್ರ ಪಟದಂತೆ ಮುಂದೆ ಬಂತು. ಒಂದು ಸಂಸಾರದ ಅಳಿವಿಗೂ–ಉಳಿವಿಗೂ ಹೆಣ್ಣೇ ಕಾರಣ ಎಂಬ ಮಾತು ನನ್ನ ಬಾಳಿನಲ್ಲಿ ಸತ್ಯವಾಗಿತ್ತು. ಬದುಕಿನ ಕಹಿಯನ್ನು ಸಿಹಿಯಾಗಿಸಿಕೊಳ್ಳುವುದೂ ಸಿಹಿಯನ್ನು ಕಹಿಯಾಗಿಸಿಕೊಳ್ಳದೇ ಇರುವುದೂ ಹೆಣ್ಣಿನಿಂದ ಮಾತ್ರ ಸಾಧ್ಯ ಎಂಬುದು ನನ್ನ ಬಾಳ್ದಾರಿಯ ಪ್ರತಿ ಕವಲಿನಲ್ಲೂ ಗೋಚರವಾದ ಸತ್ಯ.

ಶ್ರೀಹರಿ ನನ್ನೊಬ್ಬರ ಸೊತ್ತು ಮಾತ್ರ ಎಂದುಕೊಂಡಿದ್ದ ನಾನು, ಅವರು ಸ್ಮೃತಿಯನ್ನು ಕಂಡು ಚಂಚಲರಾದಾಗ, ತಪ್ಪಿ ನಡೆದಾಗ, ನಾನು ಅವರನ್ನು ಕ್ಷಮಿಸದೆ ಹೋಗಿದ್ದರೆ, ಅಂದು ನನ್ನ ಸಂಸಾರ ನುಚ್ಚುನೂರಾಗುತ್ತಿತ್ತು. ನನ್ನ ಮಕ್ಕಳು ಬೀದಿ ಪಾಲಾಗುತ್ತಿದ್ದರು.

ನಾವು ಪ್ರೀತಿಯಿಂದ ಊಟ–ಬಟ್ಟೆ–ವಿದ್ಯೆ ಕೊಟ್ಟು ಬೆಳೆಸಿದ ಮೈದುನ ಮನೆ ಬಿಟ್ಟು ಓಡಿ ಹೋಗಿ ಸಿನಿಮಾ ತಾರೆಯೊಬ್ಬಳನ್ನು ಮದುವೆಯಾದಾಗ ನಾನು, ನನ್ನವರ ಜರ್ಝರಿತ ಮನಸ್ಸಿಗೆ ಸಮಾಧಾನ ನೀಡದೆ ಹೋಗಿದ್ದರೆ ಅವರು ಹುಚ್ಚರಾಗುತ್ತಿದ್ದರು.

ತಾನು ಪ್ರೀತಿಸುತ್ತಿದ್ದ ಸಹಪಾಠಿ ರಘುನಾಥನನ್ನು ಮದುವೆಯಾಗುವೆನೆಂದು ನನ್ನ ಮಗಳು ಸಂಗೀತಾ ಹಠ ಹಿಡಿದಾಗ, ದೊಡ್ಡ ಮನೆತನದ ವರನ್ನು ಆರಿಸುವ ಕನಸು ಕಂಡಿದ್ದ ಶ್ರೀಹರಿ ಅದಕ್ಕೆ ಅಡ್ಡಿಯಾಗಿದ್ದರು. ತಂದೆಯ ಮಾತನ್ನು ಮೀರಲಾರದೆ, ಪ್ರೇಮದ ಸೆಳೆತದಿಂದ ದೂರವಾಗಲಾರದೆ ಮಾನಸಿಕ ಹೋರಾಟ ನಡೆಸುತ್ತಿದ್ದ ಸಂಗೀತಾಳಿಗೆ ಸ್ಥೈರ್ಯ ತುಂಬಿ, ಮದುವೆಯ ಮಧ್ಯಸ್ಥಿಕೆ ವಹಿಸಿ ಅವಳ ಕಡೆಗೇ ಜಯ ಕೊಡಲು ನಾನೆಷ್ಟು ತಾಳ್ಮೆಯಿಂದ, ಜಾಣ್ಮೆಯಿಂದ ಕೆಲಸ ಮಾಡಿದೆ ಎಂದು ನನಗಲ್ಲವೇ ಗೊತ್ತು?

ಅಂದು ನಾನು ಹಾಗೆ ಕುಟುಂಬದ ಚುಕ್ಕಾಣಿಯನ್ನು ನನ್ನ ಕೈಯಲ್ಲಿ ತೆಗೆದುಕೊಳ್ಳದೆ ಹೋಗಿದ್ದರೆ ಸಂಗೀತಾ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳು. ಇಲ್ಲವೇ ಶ್ರೀಹರಿ ಮನ ಒಡೆದು ಖಾಯಿಲೆ ತಂದುಕೊಳ್ಳುತ್ತಿದ್ದರು.

ಎಂ.ಇ. ಮಾಡಿದ ನನ್ನ ಮಗ ಸುಹಾಸನಿಗೆ ಸ್ವಂತ ಇಂಡಸ್ಟ್ರಿಯೊಂದನ್ನು ನಡೆಸುವ ಆಸಕ್ತಿ. ಅವನಿಗೆ ಆ ಎದೆಗಾರಿಕೆ, ಸಾಮರ್ಥ್ಯ, ವಾಕ್ಚಾತುರ್ಯ ಎಲ್ಲವೂ ಇದೆ ಎಂಬುದು ನನಗೆ ವೇದ್ಯ. ಆದರೆ ಮಗ ಸರ್ಕಾರಿ ಕೆಲಸ ಮಾಡಲಿ ಎಂದು ಶ್ರೀಹರಿಯ ಹಠ.

ಸಿಕ್ಕ ಒಳ್ಳೆಯ ಸರ್ಕಾರಿ ನೌಕರಿಗೆ ರಾಜೀನಾಮೆಯಿತ್ತು ಸುಹಾಸ ಬಂದು ನಿಂತಾಗ, ಶ್ರೀಹರಿ ನರಹರಿಯ ಅವತಾರ ತಳೆದಿದ್ದರು.

"ಇದೋ ಕೆಲಸ ಬಿಟ್ಟು ಬಂದು ನಿಂತ್ರೆ, ಸ್ವಂತ ಉದ್ಯಮಕ್ಕೆ ನಾನು ಹಣ ಕೊಡ್ತೀನಿ ಅಂತ ತಿಳ್ಕೊಂಡಿದ್ದಾನೆ. ನನ್ನಿಂದ ಒಂದು ದಮ್ಡಿ ಹುಟ್ಟೋಲ್ಲ. ಏನು ಮಾಡ್ತಾನೋ ಮಾಡಿಕೊಳ್ಳಲಿ ನಿನ್ನ ಮುದ್ದು ಕುಮಾರ. ಇದೋ ಹಣವೆಲ್ಲ ಸಂಗೀತಾ ಮದುವೆಗೆ, ಇವನ ಓದಿಗೆ ಮುಂಜಿಗೆ ಖರ್ಚು ಮಾಡಿದ್ದೀನಿ. ಈ ವಯಸ್ಸಿನಲ್ಲಿ ನಾನು ಸಾಲ–ಸೋಲ ಮಾಡ್ಲಾರೆ" ಎಂದು ಹಾರಾಡಿದ್ದರು.

ಪರಿಸ್ಥಿತಿ ಬಿಗಡಾಯಿಸಿದರೆ ನಷ್ಟ ನನಗೇ. ಇತ್ತ ಬೆಳೆದ ಮಗನನ್ನು ಎದುರು ಹಾಕಿಕೊಳ್ಳಬಾರದು. ಅವನು ಬದುಕಿನ ಗುರಿ ತಲಪಬೇಕು. ಅತ್ತ ಪತಿಗೆ ಬೇಸರವಾಗಬಾರದು. ಅವರು ಮನೋರೋಗಕ್ಕೆ ತುತ್ತಾಗಬಾರದು. ನಾನೆಂದೆ – 'ನೋಡಿ, ನೀವು ಒಪ್ಪಿದ್ರೆ ನನ್ನ ತವರಿನ ಭೂಮಿಯನ್ನು ಅಪ್ಪ ಸ್ವಲ್ಪ ನನ್ನ ಹೆಸರಿಗೆ ಬರೆದಿದ್ದಾರೆ. ಅದನ್ನ ಮಾರ್ತೀನಿ. ಜೊತೆಗೆ ನನ್ನ ತಾಯಿ ಮನೆಯಲ್ಲಿ ಹಾಕಿರೋ ಈ ಮೂರೆಳೆ ಸರ ಮಾರಿ ಅವನಿಗೆ ಕೊಡ್ತೀನಿ. ಚಿಕ್ಕದಾಗಿ ಇಂಡಸ್ಟ್ರಿ ಶುರು ಮಾಡಲಿ. ನಾಳೆ ಅಭಿವೃದ್ಧಿಯಾದರೆ
ನೀವೂ ಸ್ವಲ್ಪ ಸಹಾಯ ಮಾಡಬಹುದು. ಅವನಿ
ಇನ್ನೊಬ್ಬರ ಕೈ ಕೆಳಗೆ ಕೆಲಸ ಮಾಡೋಕ್ಕೆ ಇಷ್ಟವಿಲ್ಲಾಂ
ಮೇಲೆ ನಾವು ತಾನೆ ಸಹಕರಿಸಬೇಕು.'

'ಏನಾದ್ರೂ ಮಾಡ್ಕೊಳ್ಳೇ, ನೀನುಂಟು ನಿ
ಮಗ ಉಂಟು'

ನಾನೂ ಧೈರ್ಯ ಮಾಡಿ ಹೇಳಿದಂತೆ ಮಾ
ಸುಹಾಸನಿಗೆ ಹಣ ಒದಗಿಸಿಕೊಟ್ಟೆ. ಒಡವೆ–ವಸ್ತ್ರ
ಆಸೆ ನನಗೇನೂ ತೀವ್ರವಾಗಿರಲಿಲ್ಲ. ಅದಕ್ಕಿಂ
ಮಗನ ಆಕಾಂಕ್ಷೆ–ಭವಿಷ್ಯ ಮುಖ್ಯ ಎನಿಸಿತ್ತು ನನ

ನನ್ನೆಣಿಕೆಯಂತೆ ಸುಹಾಸ ತನ್ನ ಸಾಮರ್ಥ್ಯದಿಂ
ಎರಡೇ ವರ್ಷಗಳಲ್ಲಿ ಉದ್ಯಮವನ್ನು ಪ್ರಗತಿ ಪ
ಕ್ಕೇರಿಸಿ, ನನ್ನ ಐವತ್ತನೆಯ ಹುಟ್ಟು ಹಬ್ಬಕ್ಕೆ ಎರಡ
ಚಿನ್ನದ ಸರ ಮಾಡಿಸಿ ತಂದು ಕೊಟ್ಟಾಗ ನನ್ನಂತೆಯ
ಶ್ರೀಹರಿಯ ಕಣ್ಣೂ ತುಂಬಿ ಬಂದಿತ್ತು. ಮುಂ
ಅವರು ತಾವಾಗಿಯೇ ತಮ್ಮ ಪಿ.ಎಫ್. ಹಣದ
ಅರ್ಧ ಮಗನ ಉದ್ಯಮಕ್ಕೆ ಬಂಡವಾಳವಾಗಿ ಕೊಟ್ಟಾ
ನಾನು ಅತ್ಯಂತ ಸಂತಸಪಟ್ಟಿದ್ದೆ. ಮಗನ ಉದ್ಯ
ಅಭಿವೃದ್ಧಿಯಾದದ್ದಕ್ಕೆ ಮಾತ್ರವಲ್ಲ, ನನ್ನ ಪ್ರಸಂಗಾ
ಧಾನದಿಂದ ನನ್ನ ಸಂಸಾರ ಒಡೆಯದೆ ಉಳಿದದ್ದಕ್ಕಾಗಿ

ಸ್ಮೃತಿ ಆಗಾಗ ಹೇಳುವಳು 'ವುಮನ್ ಈಸ್
ಲೈಫ್ ರೀಡ್ ವಿಚ್ ಬೆನ್ಡ್ಸ್ ಟು ಎವ್ರಿ ಬ್ರೀಜ್, ಬ
ಬ್ರೇಕ್ಸ್ ನಾಟ್ ವಿತ್ ದ ಟೆಂಪೆಸ್ಟ್'

ಅವಳು ಎಲ್ಲೋ ಓದಿ ಆಗಾಗ ನೆನಪ
ಮಾಡಿಕೊಳ್ಳುತ್ತಿದ್ದ ಈ ಮಾತು ಎಷ್ಟು ಸತ್ಯ! 'ಹೆಣ್ಣ
ಗಾಳಿಗೆ ಬಾಗುವ ಹುಲ್ಲುಗರಿಯೇ ವಿನಃ ಬಿರುಗಾಳಿ
ಮುರಿದು ಬೀಳುವ ಮರವಲ್ಲ.' ನನ್ನ ಬದುಕಿನ
ಎದ್ದ ಬಿರುಗಾಳಿಗೇನು ಕಡಿಮೆಯಿತ್ತೆ? ಆದರೆ ನಾನು
ಮುರಿದು ಬೀಳುವ ಮರವಾಗಲಿಲ್ಲ; ಬಾಗು
ಹುಲ್ಲುಗರಿಯೇ ಆಗಿದ್ದೇನೆ!

ಸುಹಾಸನಿಗೆ ಮದುವೆ ಮಾಡಲು ಇದು ತ
ವಯಸ್ಸು. ಅವನ ಮನಸ್ಸಿನಲ್ಲಿ ಯಾವುದಾದರು
ಹೆಣ್ಣಿದೆಯೋ ಎಂದು ತಿಳಿಯಲು ಮೊನ್ನೆ ಸುಮ್ಮ
ಅವನ ಬಳಿ ಮದುವೆಯ ಪ್ರಸ್ತಾಪ ಮಾಡಿ
ಅವನು ಸಂಗೀತಳಂತೆ ಪ್ರೇಮ ಪಾಶಕ್ಕೆ ಸಿಲುಕಿ
ಎಂದು ಖಚಿತವಾದಾಗ ನನ್ನ ಮನಸ್ಸಿಗೆ ಬಂದ
ಶ್ರುತಿಯ ಮಗಳು ಆಶಾ. ಇದೀಗ ಆಶಾ ಎಂಜಿನಿಯ
ರಿಂಗ್‌ಗೆ ಸೇರಿದ್ದಾಳೆ. ಆಶಾಳದ್ದು ತಂದೆಯಂತೆಯ
ಗೌರವರ್ಣ; ಎತ್ತರದ ನಿಲುವು. ತಾಯಿಯಂತೆಯ
ತಿದ್ದಿದ ಮುಖ; ಸಹನಶೀಲ ಸ್ವಭಾವ. ಅವಳು ನಮ
ಮನೆಗೆ ಬಂದಾಗ ಸುಹಾಸನ ಕಣ್ಣು ಅವಳ
ಹೋದಲ್ಲೆಲ್ಲಾ ಸುಳಿದಾಡುವುದು, ಆಶಾಳ ಕೆ
ಕೆಂಪು ಕೆಂಪಾಗುವುದನ್ನು ನಾನು ಕಾಣದೆ ಇಲ್ಲ.
ವಿಷಯದಲ್ಲಿ ನನ್ನದೂ, ಅವನದೂ ಒಂದ
ಮನಸ್ಸಾಗಿರುವಾಗ, ಇನ್ನು ಶ್ರೀಹರಿಯನ್ನು ಒಪ್ಪಿಸು
ದೊಂದೇ.

ಶ್ರೀಹರಿ ಈಗ ಮೊದಲಿನಂತೆ ಹಠ ಸಾಧಿಸುವುದಿಲ್ಲ
ನನ್ನ ಒಲವು–ನಿಲುವುಗಳಿಗೆ ಬೆಲೆ ಕೊಡುವಷ್ಟು
ಹೃದಯ ವೈಶಾಲ್ಯ ಅವರಲ್ಲಿ ಕಾಲಕ್ರಮದಲ್ಲಿ ಮೂ
ಬಂದಿದೆ. ಆದ್ದರಿಂದ ಅವರು ಆಶಾಳ ಜಾತಿಯ ಬ
ಆಕ್ಷೇಪವೆತ್ತಲಾರರು.

ತನ್ನ ಅಂತರ್ಜಾತೀಯ ವಿವಾಹದಿಂದಾಗಿ, ಶ್ರುತಿ
ಆಶಾಳಿಗೊಂದು ಗಂಡು ಹುಡುಕುವುದು ಕಷ್ಟವ
ಆಗಬಹುದು. ಜೀವನವಿಡೀ ತುಂಬಾ ಕಷ್ಟಪಟ್ಟ

ಇಲ್ಲಿಯವರೆಗೆ..

ಶ್ರುತಿ ಜೇಮ್ಸ್‌ನನ್ನು ವಿವಾಹವಾದಳು. ಜೊತೆಗೆ ಗಂಡಿನ ಸಹವಾಸವನ್ನೂ, ಮದುವೆಯನ್ನೂ ಧಿಕ್ಕರಿಸುತ್ತಿದ್ದ ಕವಿತಾ ಮದುವೆಗೆ ಸಿದ್ಧಳಾಗಿದ್ದು ಒಂದು ಪವಾಡವೇ ಆಗಿತ್ತು. ರಜನಿ–ವಿಶ್ವಾಸರ ವಿವಾಹ ಗೆಳತಿಯರ ಗುಂಪಿನಲ್ಲಿ ಹೊಸ ಉಲ್ಲಾಸ ಮೂಡಿಸಿತ್ತು. ಮೂರು ತಿಂಗಳ ಮಗು ಮುರಳಿಯೊಡನೆ ಪೂರ್ಣಾಳ ಮನೆ ಬಿಟ್ಟ ಸ್ಮೃತಿ ಮುಂಬಯಿಯಲ್ಲಿ ಕೆಲಸಕ್ಕೆ ಸೇರಿದಳು. ವೈಧವ್ಯ ಹಾಗೂ ಯೌವನದ ಕಾರಣ ಆಕೆ ಅಲ್ಲಿಯೂ ಕಷ್ಟ ಪಡಬೇಕಾಯಿತು. ಮುರಳಿ ಒಂದು ಹಂತಕ್ಕೆ ಬಂದ ಮೇಲೆ ಸ್ಮೃತಿ ಈ ಮೊದಲೇ ನಿಶ್ಚಯಿಸಿದಂತೆ ಅಬು ಪರ್ವತದ ಬ್ರಹ್ಮಕುಮಾರಿ ಸಮಾಜಕ್ಕೆ ಸೇರಿದಳು.

–ಇನ್ನು ಮೇಲೆ...

ಶ್ರುತಿ. ಅವಳಿಗೆ ಇದೊಂದಾದರೂ ಹೊವೆತ್ತಿದಂತಾದರೆ ಒಳ್ಳೆಯದು. ನನ್ನ ಜಾತಿ– ಅಂತಸ್ತುಗಳಿಂದಾಗಿ, ಶ್ರುತಿ ತಾನಾಗಿ ನನ್ನ ಬಳಿ, ಹೆಣ್ಣು ಕೊಡುವೆನೆಂದು ಬರಲಾರಳು.

ನಿರ್ಮಲವಾದ ನೀರಿಗೆ ಬಣ್ಣ – ವಾಸನೆ ಯಾವುದೂ ಇಲ್ಲ. ಹಾಗೆಯೇ ಸ್ವಚ್ಛವಾದ ಮನಸ್ಸಿಗೆ ಅಂತಸ್ತು–ಜಾತಿ ಯಾವುದೂ ಇರುವುದಿಲ್ಲ. ಸ್ನೇಹದಲ್ಲಿ ತೆರೆ–ಮರೆ ಏಕೆ? ನಾನೇ ಶ್ರುತಿಯ ಬಳಿ ಈ ಬಗ್ಗೆ ಪ್ರಸ್ತಾಪಿಸುತ್ತೇನೆ. ಯೋಚನೆ ಎಲ್ಲೆಲ್ಲೋ ಹರಿದು ನನ್ನವರಿಗೆ ಚಹಾ ಮಾಡಿಕೊಡುವುದನ್ನೇ ಮರೆತಿದ್ದೆ ನಾನು!

ತೊಡೆಯ ಮೇಲೆ ನಿದ್ರಿಸುತ್ತಿದ್ದ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಚಹಾ ಮಾಡಿ ನನ್ನವರಿಗೆ ಕೊಟ್ಟು ಬಂದು ಸುನೀಲ್‌ನಿಗೆಂದು ಹೆಣೆಯುತ್ತಿದ್ದ ಸ್ವೆಟರ್ ಕೈಗೆತ್ತಿಕೊಂಡೆ. ಅಷ್ಟರಲ್ಲಿ ಸುನೀಲ್ ಎರಡು ಪತ್ರಗಳನ್ನು ಹಿಡಿದು ಓಡಿ ಬಂದ.

ಒಂದು ಲಕೋಟೆಯನ್ನು ಒಡೆದೆ. ನನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ. ಅದು ಕವಿತಾಳ ಮದುವೆಯ ಕರೆಯೋಲೆ. ಅಚ್ಚರಿಯನ್ನು ತಾಳಲಾರದೆ ನನ್ನವರ ಬಳಿ ಓಡಿದೆ.

'ಇಲ್ನೋಡ್ರೀ! ನಂ ಕವಿತಾ ಈಗ ಮದುವೆಯಾಗ್ತಿದ್ದಾಳಂತೆ! ಆತ ದೆಹಲಿಯ ಬ್ಯಾಂಕೊಂದರಲ್ಲಿ ಎಕನಾಮಿಸ್ಟ್ ಅಂತೆ. ಎಕನಾಮಿಕ್ಸ್‌ನಲ್ಲಿ ಡಾಕ್ಟರೇಟ್ ಅಂತೆ. ಎಲ್ಲಿ ಪರಿಚಯವಾಯ್ತೋ, ಎಲ್ಲಿ ಪ್ರೇಮ ಬೆಳೀತೋ ಅಂತೂ ಅವ್ಳು ಮದುವೆಯಾಗ್ತಿರೋದು ಅತಿಶಯವಾದ ವಿಚಾರ ಅಲ್ವಾ?'

'ಆಗ್ಬೇಕಾದ ವಯಸ್ನಲ್ಲಿ ಆಗೋಲ್ಲಾಂತ ಹಠ ಮಾಡ್ತಿದ್ಲು ಅಂತ ನೀನೇ ಹೇಳ್ತಿದ್ದೆ. ಈಗ ಹೇಗ್ಬಂತು ಇಷ್ಟೊಳ್ಳೆ ಬುದ್ಧಿ?'

'ಯಾಕ್ಬಂತೂಂತ ನನಗೆ ಗೊತ್ತೂರೀ. ನಾನು ಇಪ್ಪತ್ತು ವರ್ಷಗಳ ಹಿಂದೆ ಅವಳ ತಲೇಲಿ ನೆಟ್ಟ ಬೀಜ ನಿಧಾನವಾಗಿ ಬೆಳೆದು ಈಗ ಫಲ ಬಿಟ್ಟಿದೆ. 'ಹೆಣ್ಣು ಮದುವೆಯಾಗದಿದ್ದರೆ ಅವಳ ಬದುಕಿನಲ್ಲಿ ಪೂರ್ಣತ್ವ ಇರುವುದಿಲ್ಲ' ಎಂದು ನಾನವಳಿಗೆ ಬೋಧಿಸಿದ್ದು ಖಂಡಿತಾ ವ್ಯರ್ಥವಾಗುವುದಿಲ್ಲ.'

'ಅಂತೂ ಅಷ್ಟು ಛಲಗಾತಿಯಾಗಿದ್ದೂ ನಿಮ್ಮನ್ನು ಅವಳು ಅನುಕರಣೆ ಮಾಡಿಯೇ ಬಿಟ್ಟಳು.'

'ಹಾಗೇನಿಲ್ಲ ಶ್ರೀಹರಿ. ಪ್ರತಿಯೊಬ್ಬಳ ಜೀವನವೂ ಒಂದು ಬಿಡಿಸಲಾಗದ ರಹಸ್ಯ. ಅನುಕರಣೆ ಮಾಡಲಾಗದ ನಿಗೂಢ ತತ್ವ. ಕವಿತಾ ನಮ್ಮೆಲ್ಲರ ಬದುಕಿನ ಒಳಿತು ಕೆಡುಕುಗಳನ್ನೆಲ್ಲಾ ವೀಕ್ಷಕಿಯಂತೆ ನೋಡಿರಬಹುದು. ಅನುಭವ ಪಡೆದಿರಬಹುದು. ಬಾಳಿನ ಸುಖ–ದುಃಖದ ಪರಿಚಯ ಪಾಠ ಅವಳಿಗಾಗಿರಬಹುದು. ಆದರೆ ಪಾಠ ಓದುವುದಕ್ಕೂ ಪ್ರಯೋಗ ನಡೆಸುವುದಕ್ಕೂ ಇರುವ ವ್ಯತ್ಯಾಸವನ್ನು ಅವಳೀಗ ತನ್ನ ಬದುಕಿನ ಪ್ರಯೋಗಶಾಲೆಯಲ್ಲಿ ತಿಳಿದುಕೊಳ್ತಾಳೆ. ಮತ್ತೊಬ್ಬರ ಬದುಕಿನಿಂದ ನೋಡಿ ಅನುಕರಣೆ ಮಾಡೋದು ಬೇಕಾದಷ್ಟಿದೆ ನಿಜ. ಆದರೆ ಅನುಭವದ ಅಡಿಪಾಯದ ಮೇಲೆ ನಮ್ಮ ಬದುಕನ್ನು ರೂಪಿಸಿಕೊಳ್ಳಬೇಕಾದ ಶಿಲ್ಪಿಗಳು ಎಂದಿದ್ದರೂ ನಾವೇ ತಾನೇ?'

'ಅಮ್ಮಾ ಪೂರ್ಣ, ಶಾರದಾದೇವಿ ಶಿಷ್ಯರಿಗೆ ಬೋಧಿಸೋ ಹಾಗೆ ನನಗ್ಯಾಕೆ ತಾಯಿ ತತ್ವಶಾಸ್ತ್ರದ ಪಾಠ ಶುರು ಮಾಡ್ಬಿಟ್ಟೆ? ನಿನಗೆ ಕವಿತಾಳ ಮದುವೆಯಿಂದ ತುಂಬಾ ಸಂತೋಷವಾಗಿದೆ ಅಂತ ನನಗೆ ತಿಳೀತು ಬಿಡು. ಮದುವೆಗೆ ಖಂಡಿತಾ ಹೋಗಿಬರೋಣ. ಅದೇನದು? ನಿನ್ನ ಕೈಲಿ ಇನ್ನೊಂದು ಕಾಗದ ಇದೆಯಲ್ಲ?'

ಕವಿತಾಳ ಮದುವೆಯ ಸಂಭ್ರಮದ ಗುಂಗಿನಲ್ಲಿ ನಾನು ಇನ್ನೊಂದು ಪತ್ರದ ಇರುವಿಕೆಯನ್ನೇ ಮರೆತಿದ್ದೆ. ಲಗುಬಗೆಯಿಂದ ಪತ್ರ ಬಿಡಿಸಿ ಓದಿದೆ. ಮತ್ತೊಮ್ಮೆ ಓದಿದೆ. ಮಗದೊಮ್ಮೆ ಓದಿದೆ.

'ಅದೆಷ್ಟು ಸಲ ಓದ್ತಿದ್ದೀ ಪೂರ್ಣ? ಪತ್ರ ಯಾರದ್ದು? ನನಗಷ್ಟು ಓದಿ ಹೇಳು. ನನ್ನ ಕನ್ನಡಕ ರೂಮಿನಲ್ಲಿರಿಸಿ ಬಿಟ್ಟಿದ್ದೇನೆ'

ಹುಚ್ಚೆದ್ದ ಮನಸನ್ನು ಸ್ಥಿಮಿತಕ್ಕೆ ತಂದುಕೊಂಡು ಕಾಗದವನ್ನು ಸಶ್ಯಬ್ದವಾಗಿ ಓದಿದೆ.

'ಪ್ರಿಯ ಅಕ್ಕ ಪೂರ್ಣ,

ನನ್ನ ಸಂಕಟದ ಕಾಲದಲ್ಲಿ ನೀನು ತೋರಿದ ಅಕ್ಕರೆ, ಅನುಕಂಪ, ಆದರ, ಆತ್ಮೀಯತೆಯನ್ನು ನಾನು ಆಜನ್ಮ ಮರೆಯಲು ಸಾಧ್ಯವಿಲ್ಲ.

ಪೂರ್ಣ, ಬದುಕು ನನಗೆ ಸಿಹಿಯ ಆಸೆ ತೋರಿಸಿ ಬರೀ ಕಹಿಯನ್ನೇ ಉಣಿಸಿತು. ಆದರೆ ಪೆಟ್ಟು ಬಿದ್ದಷ್ಟೂ ವಿಗ್ರಹ ಸುಂದರವಾಗುವಂತೆ, ಆ ದಿವ್ಯ ಮಾಯಾ ಶಿಲ್ಪಿಯ ಒಂದೊಂದು ಉಳಿಪೆಟ್ಟೂ ನನ್ನ ಅಂತರಂಗವನ್ನು ಮತ್ತಷ್ಟು ಸುಂದರವಾಗಿಸಿದೆ; ದೋಷ ರಹಿತವಾಗಿಸಿದೆ.

ಇಷ್ಟು ಕಹಿಯನ್ನು ನುಂಗಿಯೂ, ನಾನು ಬದುಕನ್ನು ಪ್ರೀತಿಸುತ್ತೇನೆ. ಬಹುಕಾಲ ಬದುಕಲು ಇಚ್ಛಿಸುತ್ತೇನೆ. ಏಕೆನ್ನುವಿಯಾ? ನಾನೀಗ ಅಬು ಪರ್ವತದ ಬ್ರಹ್ಮ ಕುಮಾರಿ ಸಮಾಜದ ಶಾಂತಿಧಾಮದಲ್ಲಿದ್ದೇನೆ. ವಿಶ್ವ ಕುಟುಂಬಿಯಾಗಿದ್ದೇನೆ. ನಾಲ್ಕು ಜನಕ್ಕೆ ಬೇಕಾದವಳಾಗಿದ್ದೇನೆ.

ಇಂದಿನ ಈ ಜೀವನ ನನ್ನ ಬದುಕಿನ ಎಲ್ಲಾ ಹಂತಗಳಿಗಿಂತಲೂ ಹೆಚ್ಚು ಶಾಂತಿಯನ್ನೂ, ಸೌಖ್ಯವನ್ನೂ ನೀಡಿದೆ. ನಾನಿದುವರೆಗೆ ಒಂದು ಸಂಸಾರದ ಹೊಣೆ ಮಾತ್ರ ಹೊತ್ತಿದ್ದೆ. ಆದರೆ ಇದೀಗ ಇಡೀ ಪ್ರಪಂಚವೇ ನನ್ನದು. ಅದರ ಯೋಗಕ್ಷೇಮ ನನ್ನದಾಗಿರುವಾಗ ನಾನು ಬಹುಕಾಲ ಬದುಕಲು ಇಚ್ಛಿಸುವುದರಲ್ಲಿ ತಪ್ಪೇನು?

ನನ್ನಂತೆ ಬದುಕಿನಲ್ಲಿ ನೊಂದವರು, ತಮ್ಮ ಕುಟುಂಬದ ಹೊಣೆಯಿಂದ ಮುಕ್ತರಾದಾಗ, ಇಂತಹ ಸಮಾಜ ಸೇವೆಗೆ ಇಳಿದರೆ, ನನ್ನಂತೆ ಸದಾ ಸುಖಿಗಳಾಗಬಹುದು; ಶಾಂತಿಯಿಂದಿರಬಹುದು. ಜೀವನವನ್ನು ಪ್ರೀತಿಸಬಹುದು ಅಲ್ಲವೇ?

ಪೂರ್ಣಾ, ನನ್ನ ಕಷ್ಟ ಕಾಲದಲ್ಲಿ ಕೈ ಹಿಡಿದವಳು, ಕೈ ಬಿಡದವಳು ನೀನು. ನನ್ನಿಂದಾಗಿ ಬದುಕಿನ ಬಣ್ಣಗಳನ್ನು ಕಂಡವಳು ನೀನು. ನಿನ್ನ ಹೃದಯ ವೈಶಾಲ್ಯತೆಯನ್ನೂ. ಚಾರಿತ್ರ್ಯದ ಪೂರ್ಣತೆಯನ್ನೂ ಪ್ರತಿ ಹೆಜ್ಜೆಯಲ್ಲೂ ವ್ಯಕ್ತ ಪಡಿಸಿದ್ದೀ.

ಇದೀಗ ನಿನ್ನಿಂದ ಒಂದು ಉಪಕೃತಿಯನ್ನು ಬೇಡುತ್ತಿದ್ದೇನೆ. ಇಪ್ಪತ್ತೊಮ್ಮರು ವರ್ಷಗಳ ಈ ದೀರ್ಘ ಮೌನದ ನಂತರ ನಾನು ಬರೆದಿರುವುದು ನಿನಗೆ ಅಚ್ಚರಿಯುಂಟು ಮಾಡಿರಬಹುದು. ಹೌದು ಇದು ಉದ್ದೇಶ ಪೂರ್ವಕವಾಗಿಯೇ.

ನೀನೇ ಆಶ್ರಯವಿತ್ತು, ಆದರಿಸಿ ಈ ಲೋಕಕ್ಕೆ ಕರೆತಂದ ಮುರಳೀಧರ ಇದೀಗ ಮದುವೆಯಾಗಲಿದ್ದಾನೆ. ನೀನಂದು ಹಾಲುಣಿಸಿದ ಕಂದ ಇಂದು ಇಪ್ಪತ್ತೊಮ್ಮರ ಚೆಲುವ. ಮುಂಬಯಿಯ ಪ್ರಖ್ಯಾತ ಸರ್ಜನ್.

ಪೂರ್ಣ, ನನ್ನ ಮಗನ ತೊಟ್ಟಿಲನ್ನು ಕಟ್ಟಿದ ನಿನ್ನ ಅದೇ ಕೈಗಳಿಂದ ಅವನ ಮದುವೆಯ ಮಂಗಳ

ಹೊಸವಸ್ತುಗಳು :

## ಭಾರತದಲ್ಲೇ ಮೊದಲ ಬಾರಿಗೆ ಮಿನುಗುವ ಟೂತ್‌ಪೇಸ್ಟ್

ಮಿನುಗುವ ಟೂತ್‌ಪೇಸ್ಟ್ ಇದೀಗ ಮೊಟ್ಟ ಮೊದಲ ಬಾರಿ ಭಾರತಕ್ಕೆ ಬಂದಿದೆ. ಟೂತ್‌ಪೇಸ್ಟ್ ದರ್ಜೆಯನ್ನೇ ಹೊಸ ಉತ್ತುಂಗಕ್ಕೊಯ್ಯುವ ಆವಿಷ್ಕಾರದ ಪರಿಚಯವಾಗಿದೆ.

ಮಿನುಗುವ ಕೆಂಪು – ಕೋಲ್ಗೇಟ್ ಪಾಮೋಲಿವ್ ತಂದಿರುವ ಹೊಸ ಟೂಥ್‌ಪೇಸ್ಟ್. ಎರಡು ವರ್ಷಗಳ ಹಿಂದೆ ತರಲಾದ ಕೋಲ್ಗೇಟ್ ಜೆಲ್ ಬ್ರಾಂಡ್‌ನ ಹೊಸ ರೂಪವಿದು.

ಮಿನುಗುವ ಕೆಂಪು ಹೊಳೆಯುವ ಕೆಂಪು ತುಣುಕುಗಳಿಂದ ಕೂಡಿದೆ ಮತ್ತು ತೀಕ್ಷ್ಣವಾದ ಸ್ವಾದವನ್ನೂ ಹೊಂದಿದೆ. ಸದ್ಯಕ್ಕೆ ಇದು ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ಲಭಿಸುತ್ತದೆ. 50 ಗ್ರಾಂ ಮತ್ತು 150 ಗ್ರಾಂ ಪ್ಯಾಕ್‌ಗಳಲ್ಲಿದು ಸಿಗುತ್ತದೆ.

ಮಿನುಗುವ ಕೆಂಪು ಮತ್ತು ಸೂಪರ್ ಟ್ರಾನ್ಸ್‌ಪರೆಂಟ್ ನೀಲಿ, ಇವೆರಡರಲ್ಲೂ ಆ್ಯಕ್ಟಿ – ರಿನ್ಸ್ ಫಾರ್ಮ್ಯುಲಾ ಸೇರಿದೆ.

ಈ ಆ್ಯಕ್ಟಿರಿನ್ಸ್ ಫಾರ್ಮ್ಯುಲಾದಿಂದಾಗಿ ಬಾಯಿಯಲ್ಲಿ ಟೂಥ್‌ಪೇಸ್ಟ್ ಬೇಗನೇ ಹರಡುತ್ತದೆ ಮತ್ತು ದೀರ್ಘಕಾಲದವರೆಗೆ ಆಹ್ಲಾದದ ಅನುಬವವನ್ನು ಬಾಯಿಯಲ್ಲಿ ನೆಲೆ ನಿಲ್ಲಿಸುತ್ತದೆ.

ಕೋಲ್ಗೇಟ್ ಪಾಮೋಲಿವ್‌ನ ಭಾರತದ ಹಾಗೂ ಅಮೆರಿಕದ ಸಂಶೋಧನಾ ಪ್ರಯೋಗ ಶಾಲೆಗಳಲ್ಲಿ ಗಾಢ ಅಧ್ಯಯನದ ನಂತರವೇ ಈ ಮಿನುಗನ್ನು ವಿಕಸಿತಗೊಳಿಸಲಾಗಿದೆ. ಆ್ಯಕ್ಟಿ–ರಿನ್ಸ್ ಫಾರ್ಮ್ಯುಲಾವನ್ನು ಅಮೇರಿಕದ ಕೋಲ್ಗೇಟ್ ಪಾಮೋಲಿವ್ ರಿಸರ್ಚ್ ಲೆಬೊರೇಟರಿಯಲ್ಲಿ ವಿಶೇಷವಾಗಿ ವಿಕಾಸಗೊಳಿಸಲಾಗಿದೆ.

ಸೆಪ್ಟೆಂಬರ್ 1991ರಿಂದ ಕೋಲ್ಗೇಟ್ ಜೆಲ್ ದೇಶವಿಡೀ ಲಭಿಸುತ್ತಿದೆ. ಸೂಪರ್ ಟ್ರಾನ್ಸ್‌ಪರೆಂಟ್ ನೀಲಿ ಜೆಲ್‌ನ ಈ ಬ್ರಾಂಡನ್ನು ಗ್ರಾಹಕರು ಮನಸಾರೆ ಮೆಚ್ಚಿದ್ದಾರೆ. ಒಆರ್‌ಟಿ ಸೂಚಕಗಳ ಪ್ರಕಾರ ಅದು ಈಗಾಗಲೇ ಶೇಕಡಾ 7ರಷ್ಟು ಮಾರ್ಕೆಟ್ ಶೇರ್ ತನ್ನದಾಗಿಸಿಕೊಂಡಿದೆ. ಉದ್ಯಮ ಮಟ್ಟದಲ್ಲಿ ಇದೊಂದು ಪ್ರಶಂಸನೀಯ ಸಾಧನೆ.

ಕಾರ್ಯವನ್ನು ನಡೆಸಿಕೊಡಬೇಕೆಂದು ಕೇಳಿಕೊಳ್ಳುತ್ತಿದ್ದೇನೆ. ಅವನಿಗೆ ಮಮತೆಯ ಕರ ನೀಡಲು ನೀನಲ್ಲದೆ ಮತ್ತಾರಿದ್ದಾರೆ? ನಿನ್ನ ಸುಹಾಸನಂತೆಯೇ ಮುರಳಿಯೂ ಒಬ್ಬ ಮಗ ಎಂದುಕೋ.

ಅವನ ಮದುವೆಯ ಕರೆಯೋಲೆಯನ್ನು ನಿನ್ನ ಹಾಗೂ ಭಾವನ ಹೆಸರಿನಲ್ಲಿ ಅಚ್ಚು ಹಾಕಿಸಬೇಕೆಂದಿದ್ದೇನೆ. ಅವನು ಇದೇ ತಿಂಗಳ ಕಡೆಯಲ್ಲಿ ಅಮೆರಿಕಾಕ್ಕೆ ಹಿಂತಿರುಗಲಿದ್ದಾನೆ. ಅಷ್ಟರಲ್ಲಿ ಅವನೇ ಆರಿಸಿಕೊಂಡಿರುವ ಮೀರಾಳೊಂದಿಗೆ ಅವನ ಮದುವೆಯಾಗಬೇಕು.

ನಿನಗೆ–ಭಾವನಿಗೆ ಅನುಕೂಲವಾಗುವ ಲಗ್ನವೊಂದನ್ನು ನೋಡಿಸಿ ಬರೆದರೆ, ಲಗ್ನಪತ್ರಿಕೆ ಅಚ್ಚು ಹಾಕಿಸಲು ಅನುಕೂಲವಾಗುತ್ತೆ. ನಿನ್ನ ಈ ಮಗನ ಮದುವೆಗೆ, ಮಿಕ್ಕ ಗೆಳತಿಯರನ್ನೆಲ್ಲ ಆಹ್ವಾನಿಸುವ ಕೆಲಸವನ್ನೂ ನಿನಗೇ ಒಪ್ಪಿಸಿದ್ದೇನೆ. ಮದುವೆ ಮುಂಬಯಿಯಲ್ಲೇ ನಡೆಯಬೇಕೆಂದು ಮುರಳಿಯ ಅಪೇಕ್ಷೆ. ಸಂಗೀತಾ–ಸುಹಾಸರಿಗೂ ಬರುವಂತೆ ನಾನು ಹೇಳಿದ್ದೇನೆಂದು ಹೇಳು. ನಿನ್ನ ಶೀಘ್ರ ಉತ್ತರವನ್ನು ಎದುರು ನೋಡುತ್ತಿದ್ದೇನೆ.

ವಿಶ್ವಾಸವಿರಲಿ
ಸ್ಮೃತಿ

ಓದುತ್ತಿದ್ದ ನಾನೂ, ಕೇಳುತ್ತಿದ್ದ ಅವರೂ ಒಟ್ಟಿಗೆ ಕಣ್ಣೊರೆಸಿಕೊಂಡೆವು. ಕಲ್ಲಿನಂತೆ ಕುಳಿತ ನನ್ನನ್ನು ಮೆಲುದನಿಯಲ್ಲಿ ಕೇಳಿದರು ಶ್ರೀಹರಿ. 'ಏನು ಬರೆಯಬೇಕೆಂದಿದ್ದೀ?'

'ಈ ತಿಂಗಳಲ್ಲಿ ಒಂದು ಒಳ್ಳೆಯ ಲಗ್ನ ನಿಶ್ಚಯ ಮಾಡಿಸಿ ಬರೆಯುತ್ತೇನೆ. ನಾವಿಬ್ಬರೂ ಹೋಗಿ ಮದುವೆ ನಡೆಸಿಕೊಟ್ಟು ಬರೋಣ'

'ಸುನೀಲ್, ಸ್ಮಿತಾರಿಗೇನು ಮಾಡೋಣ?'

'ಸುಹಾಸ ಹೇಗೂ ಊರು ಬಿಟ್ಟು ಬರುವಂತಿಲ್ಲ. ಅವನ ಜೊತೆಗೆ ಸುನಿಲ್ ನಾಲ್ಕು ದಿನ ಇಲ್ಲಿಯೇ ಇರಲಿ. ಸ್ಮಿತಾಳನ್ನು ಮಾತ್ರ ಕರೆದೊಯ್ಯೋಣ'

'ಹೋಗುವುದು ಎಂದೇ ನಿರ್ಧರಿಸಿಬಿಟ್ಟೆಯಾ?'

'ಒಡಹುಟ್ಟಿದ ಈ ತಂಗಿಗೆ ಅಂದು ನಾನು ಒಳ್ಳೆಯದು ಮಾಡಬೇಕೆಂದು ಮನಸ್ಸಿದ್ದರೂ ಮಾಡಲು ಆಗಲಿಲ್ಲ. ಅವಳಾಗಿ ಅವಳ ಜೀವನ ರೂಪಿಸಿಕೊಂಡಿದ್ದಾಳೆ. ಮಗನನ್ನು ಮುಂದೆ ತಂದಿದ್ದಾಳೆ. ಅವಳ ಈ ಒಂದು ಸಣ್ಣ ಆಸೆಯನ್ನೂ ನಡೆಸಿಕೊಡದಿದ್ದರೆ ನನ್ನನ್ನವಳು 'ಅಕ್ಕಾ' ಎಂದದ್ದಕ್ಕೆ ಏನು ಬೆಲೆ?'

ನನ್ನ ಮಾತು ಕೇಳುತ್ತಿದ್ದ ಶ್ರೀಹರಿ ನಿಧಾನವಾಗಿ ಎದ್ದು ನನ್ನ ಬಳಿ ಬಂದರು. ನನ್ನೆರಡು ಭುಜಗಳನ್ನೂ ತಮ್ಮೆರಡು ಅಂಗೈಗಳಿಂದ ಒತ್ತಿ ಹಿಡಿದು, ನನ್ನ ಕಣ್ಣಲ್ಲಿ ಕಣ್ಣಿಟ್ಟು ಹೇಳಿದರು "ನೀನೊಬ್ಬ ದೇವತೆ ಪೂರ್ಣ, ಯು ಆರ್ ಸಿಂಪ್ಲಿ ಗ್ರೇಟ್''

## ಸ್ವರಸಂಗಮ

**ಕವಿತಾ :**

ಮಂಗಳೂರಿನ ಮಂಗಳಾದೇವಿಯ ಆಲಯದಲ್ಲಿ ನಡೆದಿದೆ ನನ್ನ, ಮೂರ್ತಿಯ ಮದುವೆಯ ಮಂಗಳ ಕಾರ್ಯ. ಸಪ್ತಸ್ವರ ಸಂಗಮದಂತೆ ಗೆಳತಿಯರೆಲ್ಲಾ ಒಂದಾಗಿದ್ದೆವೆ. ಮಂದ್ರಸ್ಥಾಯಿಯಲ್ಲಿ ಮಿಡಿದು, ಮಧ್ಯಸ್ಥಾಯಿಯಲ್ಲಿ ನಿಂತು, ತಾರಸ್ಥಾಯಿಗೆ ಏರಿ, ಬದುಕಿನ ಆರೋಹಣ–ಅವರೋಹಣಗಳಲ್ಲಿ ನಮ್ಮ ದನಿಯ ಗಾತ್ರ, ಪುಷ್ಟಿ, ತೀವ್ರತೆಗಳಿಗೆ ತಕ್ಕಂತೆ ಸ್ಪಂದಿಸಿದ್ದೇವೆ ನಾವು ಎಲ್ಲರೂ.

ಇಂದು, ನಮ್ಮ ಬಾಳಿನ ಕಹಿ–ಸಿಹಿಗಳನ್ನು ಪರಸ್ಪರ ಹಂಚಿಕೊಂಡಿದ್ದೇವೆ. ರಜನಿ–ಶ್ರುತಿಯರು ತಮಗೆ ಬಂದ ಅಡ್ಡಿಗಳನ್ನೆಲ್ಲಾ ಕಿತ್ತೊಗೆದು ನುಗ್ಗಿದ ಝುಂಝಾವಾತಗಳಾಗಿದ್ದರೆ, ಬಿಂದು–ಪೂರ್ಣ–ಸ್ಮೃತಿಯರು ತಮಗೇನೇ ಬಂದರೂ ಜಗ್ಗದೆ, ತಮ್ಮ ತೂಕದಲ್ಲಿ ನಂಬಿಕೆಯಿಟ್ಟು ಪರ್ವತೇಂದ್ರಿಯಗಳಾಗಿದ್ದಾರೆ. ಮೇನಕಾ, ಪೂರ್ವಾಪರ ವಿವೇಚನೆಯಿಲ್ಲದೆ ಭಯಂಕರ ವೇಗದಿಂದ ಧುಮುಕಿದ ಜಲಪಾತವಾದರೆ, ನಾನು, ನನ್ನದೇ ದಾರಿಯನ್ನು ಮಾಡಿಕೊಂಡು ಸಾವಧಾನವಾಗಿ ಹರಿಯುವ ನದಿಯಾಗಿದ್ದೇನೆ.

ನನ್ನನ್ನು ಮದುಮಗಳಂತೆ ಅಲಂಕರಿಸುತ್ತಿದ್ದರು ಸ್ಮೃತಿ, ಪೂರ್ಣ. ನಿಟ್ಟುಸಿರೊಂದನ್ನು ಹೊರಚೆಲ್ಲಿ ಹೇಳಿದೆ "ಸ್ಮೃತಿ, ನಿನ್ನ ಮದುವೆಯ ದಿನ ನಾನು ಹೆದರಿದ್ದೆ. ಹಕ್ಕಿಯಂತೆ ಹಾರುವವಳನ್ನು ಪಂಜರಕ್ಕೆ ಸೇರಿಸುತ್ತಿದ್ದಾರಲ್ಲಾ ಎಂದು. ಇದೀಗ ನಾನು ಪಂಜರದೊಳಗೆ ಸೇರಿಕೊಳ್ಳುತ್ತಿದ್ದೇನೆ. ನೀನು ಮುಕ್ತಳಾಗಿ ಪಂಜರದ ಹೊರಗೆ ಹಾರಿದ್ದೀಯ. ವಿಧಿಯ ವೈಚಿತ್ರ್ಯ ಎಷ್ಟಿದೆ ನೋಡಿದೆಯಾ?''

ಸ್ಮೃತಿ, ನನ್ನ ಹಣೆಗೆ ಮುತ್ತಿಟ್ಟು ಹೇಳಿದಳು. "ಹೆಣ್ಣಿನ ಪೂರ್ಣತ್ವ, ಅವಳ ಬದುಕಿನ ಸಾಫಲ್ಯ ಇರುವುದು ಅವಳು ಗೃಹಿಣಿಯಾದಾಗ ಎಂದು ಪೂರ್ಣ ನಿನಗದೆಷ್ಟು ಬಾರಿ ಹೇಳಿರಲಿಲ್ಲ? ಕವಿತಾ, ತಡವಾಗಿಯಾದರೂ ನಿನ್ನ ಜೀವನದಲ್ಲೂ ಪ್ರೇಮದ ಹಸಿರು ಚಿಗುರಿದ್ದು ನಮಗೆಲ್ಲಾ ತುಂಬಾ ನೆಮ್ಮದಿ ಕೊಟ್ಟಿದೆ. ನೀನೆಂದಂತೆ ನಾನು, ನನ್ನ ಸಂಸಾರ ಎಂಬ ಸಣ್ಣ ಪಂಜರದಿಂದ ವಿಶಾಲ ಪ್ರಪಂಚಕ್ಕೆ ಹಾರಿದ್ದೇನೆ. ವಿರಾಗಿಣಿಯಾಗಲ್ಲ, ವಿಶ್ವ ಕುಟುಂಬಿಯಾಗಿ, ಇದರಿಂದ ನಾನೀಗ ಮಾನಸಿಕವಾಗಿ ಬೆಳೆದಿದ್ದೇನೆ. ನೈತಿಕವಾಗಿ ಉಳಿದಿದ್ದೇನೆ''

ಬಿಳಿಯ ಕೈ ಮಗ್ಗದ ಸೀರೆ–ಬಿಳಿಯ ರವಿಕೆ, ಕತ್ತಿಗೊಂದು ಜಪಮಾಲೆ, ಬರಿಗೈ–ಬರಿ ಹಣೆಯಲ್ಲಿದ್ದರೂ ಸ್ಮೃತಿಯ ಮುಖದಲ್ಲೊಂದು ಅಪೂರ್ವ ತೇಜಸ್ಸಿತ್ತು. ಅವಳ ಧ್ವನಿಯಲ್ಲಿ ಅಲೆಯಿರಲಿಲ್ಲ; ನೆಲೆಯಿತ್ತು. ಒಡಕಿರಲಿಲ್ಲ; ತುಂಬು ಆತ್ಮವಿಶ್ವಾಸವಿತ್ತು. ಅದನ್ನು ಕಂಡು ನನಗೆ ಅವಳ ಬಗ್ಗೆ ತುಂಬಾ ಮೆಚ್ಚುಗೆ ಎನಿಸಿತು.

ರಾತ್ರಿ, ನನ್ನ ಸ್ವಂತ ಮನೆಯ ಕಡೆಗೆ ಕಾರು ನಡೆಸುತ್ತಾ, ಮೂರ್ತಿ ನನ್ನ ಕಿವಿಯಲ್ಲಿ ಪಿಸುಗುಟ್ಟಿದರು. "ಅವರ್ ಲೈಫ್ಸ್ ಜರ್ನಿ ಟು ಗೆದರ್, ಬಿಗಿನ್ಸ್ ಟುಡೇ. ನನಗೇನಾದರೂ ಅಡ್ವೈಸ್ ಕೊಡುವುದಿದೆಯೋ ಕವಿತಾ?''

"ಡ್ರೈವ್ ಸ್ಲೋಲಿ ಮೂರ್ತಿ. ಚಲಿಸುವ ದಾರಿ ಒಳಿತಾಗಿರಲಿ'' ನನ್ನ ಬಾಳ್ವಯಣದ ಗೆಳೆಯನ ತೋಳನ್ನು ಎರಡೂ ಕೈಗಳಿಂದ ಒತ್ತಿ ಹಿಡಿದು ಎಚ್ಚರಿಕೆ ನೀಡಿದೆ. ತಮ್ಮ ಎಡಗೈಯಿಂದ ಬಳಸಿ, ನನ್ನನ್ನು ಎದೆಗೊತ್ತಿಕೊಳ್ಳುತ್ತಾ ಹೇಳಿದರು ಮೂರ್ತಿ "ಆಗಲಿ ಚೆನ್ನ. ನಿನ್ನ ಸಹಕಾರವಿದ್ದರೆ, ಈ ಬಾಳ್ಪಯಣ ಎಷ್ಟು ದೀರ್ಘವಿದ್ದರೂ ಚೆನ್ನ''

ಬಾಳ ಮುಂಜಾವಿನ ಚುಂಚಲವಾದ ಬಿಸಿಲಾಗಲೀ, ಮಧ್ಯಾಹ್ನದ ಸೂರ್ಯಕಿರಣದ ಕಾವು–ತೀಕ್ಷ್ಣತೆಗಳಾಗಲೀ ನಮ್ಮಿಬ್ಬರಲ್ಲೂ ಇಲ್ಲ. ನಿಜ, ಆದರೆ ಮುಸ್ಸಂಜೆಯ ರವಿ ಕಿರಣಗಳು ಹೇಗೆ ತಂಪಾಗಿ, ಶಾಂತ ಭಾವದಿಂದ, ಮನಸ್ಸಿಗೆ ಸೌಖ್ಯವನ್ನೂ, ಆಹ್ಲಾದವನ್ನೂ ನೀಡುವುದೋ ಹಾಗೆ, ಬಾಳಿನ ಸಂಧ್ಯಾಕಾಲದಲ್ಲಿ ಮಿಲನಗೊಳ್ಳಲಿರುವ ನಾವು ಒಲವಿನ ಆನಂದವಾಹಿನಿಯಲ್ಲಿ ಈಜಾಡಲಿದ್ದೇವೆ. ಮಿಂದು ಸಂತೃಪ್ತರಾಗಲಿದ್ದೇವೆ. ಒಂದು ಸ್ವರದಲ್ಲಿ ಇನ್ನೊಂದು ಸ್ವರ ಬೆರೆತು ಸಂಗಮವಾಗುವಂತೆ, ಲೀನವಾಗಲಿದ್ದೇವೆ.

**

## ಕಥೆಗೊಂದು ಚಿ



ಆಯ್ಕೆಯಾದ ಕಥೆಗಳಿಗೆ ಚಿತ್ರ ಹಾಕಿ ಪ್ರಕಟಿಸುವುದು ವಾಡಿಕೆ. ಈಗ ಲೇಖಕಿಯರಿಗೆ, ಇಲ್ಲಿ ಚಿತ್ರವೊಂದನ್ನು ನೀಡಿದ್ದೇವೆ. ಈ ಚಿತ್ರಕ್ಕೆ ಸೂಕ್ತ ಕಥೆಯನ್ನು ಬರೆದು ಕಳಿಸಲು ಈ ಮೂಲಕ ಕೋರುತ್ತಿದ್ದೇವೆ. ಕಥೆ ಎರಡು ಫುಲ್‌ಸ್ಕೇಪ್ ಹಾಳೆಯ ಒಳಗಿರಬೇಕಾದುದು ಅಗತ್ಯ. ಆಯ್ದ ಮೂರು ಕಥೆಗಳನ್ನು ಪ್ರಕಟಿಸಲಾಗುವುದು. ಪ್ರಕಟಿತ ಪ್ರತಿಯೊಂದು ಕಥೆಗೂ 50/– ರೂ. ಸಂಭಾವನೆ ಇದೆ. ಕಥೆಗಳನ್ನು ಹಿಂದಿರುಗಿಸಲಾಗುವುದಿಲ್ಲವಾದುದರಿಂದ ಅಂಚೆ ಚೀಟಿಗಳನ್ನು ಅಂಟಿಸಿ ಕಳಿಸಬಾರದಾಗಿ ಕೋರಲಾಗಿದೆ.

ಕಥೆಗಳು ಬಂದು ತಲುಪುವ ಕೊನೆಯ
ದಿನಾಂಕ
20–12–1992
ಕಥೆ ಕಳಿಸುವ ವಿಳಾಸ
"ವನಿತಾ"
ಕಮಾಂಡರ್ಸ್ ಪ್ಲೇಸ್, (ಮಹಡಿ)
ರಾಜಾರಾಮ ಮೋಹನರಾಯ್ ರಸ್ತೆ,
ಬೆಂಗಳೂರು–560 025.



# “ಅಡಿಗೆ ಮನೆಯಲ್ಲಿ ನನ್ನ ಯಜಮಾನರು”

(ಕಳೆದ ಸಂಚಿಕೆಯಿಂದ)

## ನನ್ನವರ ನಳಪಾಕ

ನನ್ನವರು ‘ಪಾಕಪ್ರವೀಣ’ರೆಂದು ಅವರ ಗೆಳೆಯರೆಲ್ಲರೂ ಆಗಾಗ ಹೇಳುತ್ತಿದ್ದುದನ್ನು ನಾನು ಕೇಳುತ್ತಿದ್ದೆನಾದರೂ, ಅವರ ಮದುವೆಯಾಗಿ ಹತ್ತು ವರ್ಷ ಕಳೆದಿದ್ದರೂ ಅವರ ‘ನಳಪಾಕ’ದ ರುಚಿ ನೋಡುವ ಭಾಗ್ಯ ಮಾತ್ರ ದೊರೆತಿರಲಿಲ್ಲ. ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ನನ್ನವರಿಗೆ ನಾನು ಮನೆಯಲ್ಲಿದ್ದಾಗ ಅಡುಗೆ ಮನೆಯ ಕಡೆಗೆ ಹಣಿಕಿಕ್ಕಲೂ ಆಗದಷ್ಟು ಕೆಲಸ–ಕಾರ್ಯಗಳು. ಶಾಲೆಯ ಕೆಲಸದ ಜೊತೆಗೆ ಬೇರೆ ಬೇರೆ ಸಂಘ–ಸಂಸ್ಥೆಗಳ ಕೆಲಸಗಳನ್ನು ಹಚ್ಚಿಕೊಂಡಿದ್ದಾರೆ. ಆದರೆ ರಜೆ ಬರುತ್ತಲೇ ಬಳ್ಳಾರಿಯ ಬಿಸಿಲಿಗೆ ಹೆದರಿ ನಾನು ಮತ್ತು ಹುಡುಗರು ನನ್ನ ತವರೂರಾದ ಬೆಳಗಾಂವಿಗೆ ಹೋದಾಗ ನನ್ನವರು ಅನಿವಾರ್ಯವಾಗಿ ತಮ್ಮ ‘ನಳಪಾಕ’ದ ಪ್ರಾಕ್ಟೀಸ್‌ಗೆ ತೊಡಗುತ್ತಾರೆ. ನಾನು ತಿರುಗಿ ಬಂದ ನಂತರ ರಜೆಯಲ್ಲಿ ತಾವು ಮಾಡಿದ ಅಡುಗೆಯ ಬಗ್ಗೆ ಆಗಾಗ ಪ್ರಸ್ತಾಪಿಸುತ್ತಾ “ನಿನ್ನ ಸಾರು ಸಪ್ಪಗೆ, ಉಪ್ಪಿಟ್ಟಿಗೆ ಉಪ್ಪಿಲ್ಲ'' ಎಂದೆಲ್ಲ ಲಘುಟೀಕೆ ಮಾಡುತ್ತಲೇ ಇರುತ್ತಾರೆ.



ಗುರುನಾಥ ಇನಾಮದ್ದಾರ

ಆದರೆ ಮೊನ್ನೆ ಮೊನ್ನೆ ನಾನು ಲೆಪ್ರೋಸ್ಕೋಪಿಕ್ ಶಸ್ತ್ರಕ್ರಿಯೆಗೆ ಒಳಗಾದಾಗ ಅವರ ಅಡುಗೆ ರುಚಿ ನೋಡಲು ಸೌಭಾಗ್ಯ ಒದಗಿ ಬಂದಿತು. ಎರಡು ದಿನ ಅನ್ನ ಸಾರು ತುಂಬ ಚೆನ್ನಾಗಿಯೇ ಮಾಡಿದ್ದರು ಪಾಪ. ಆದರೆ ಮೂರನೆ ದಿನ ರವಿವಾರವಾದ್ದರಿಂದ ಏನಾದರೂ ಸಿಹಿ ಮಾಡುತ್ತೇನೆಂದು ಹೇಳಿ ‘ಶಿರಾ’ ಮಾಡಲು ಸಿದ್ಧರಾದರು. ಅದೇ ಸಮಯಕ್ಕೆ ಮನೆಯಲ್ಲಿದ್ದ ಗ್ಯಾಸ್ ಕೂಡ ಮುಗಿದು ಹೋಗಬೇಕೇ? ಆದರೆ ಅವರೇನೂ ಧೃತಿಗೆಡಲಿಲ್ಲ. ಮೂಲೆಯಲ್ಲಿಟ್ಟಿದ್ದ ಸೀಮೆ ಎಣ್ಣೆ ಸ್ಟೋವ್ ರಿಪೇರಿ ಮಾಡಿ, ಎಣ್ಣೆ ಹಾಕಿ ಸಿದ್ಧಪಡಿಸಿಕೊಂಡರು. ಅನಂತರ ರವೆ, ತುಪ್ಪ, ಯಾಲಕ್ಕಿ, ಗೋಡಂಬಿಗಳನ್ನು ಸಿದ್ಧಪಡಿಸಿಕೊಂಡು ‘ಶಿರಾ’ ಮಾಡಲು ಕುಳಿತರು. ರವೆಯನ್ನು ತುಪ್ಪದಲ್ಲಿ ‘ಕಮ್ಮಗೆ’ ಹುರಿದ ವಾಸನೆ ಕೋಣೆಯಲ್ಲಿ ಮಲಗಿದ ನನ್ನ ಮೂಗಿಗೂ ಬಡಿಯಿತು. ಅನಂತರ ದ್ರಾಕ್ಷಿ–ಗೋಡಂಬಿಗಳನ್ನು ಹುರಿದಿಟ್ಟುಕೊಂಡರೇನೋ. ಅವುಗಳ ವಾಸನೆಯನ್ನು ಸವಿದೆ. ಅಷ್ಟರಲ್ಲಿ ಯಾರೋ ಅವರನ್ನು ಕೇಳಿಕೊಂಡು ಬಂದರು. ಅಡುಗೆ ಮನೆಯಲ್ಲಿದ್ದ ನನ್ನವರು ಹೊರಬಂದು ಅವರೊಂದಿಗೆ ಮಾತಿಗೆ ಕುಳಿತರು. ಒಂದು ತಾಸಾದರೂ ಅವರ ಮಾತು ಮುಗಿಯಲೊಲ್ಲದು. ಒಳಗೆ ‘ಶಿರಾ’ದ ಗತಿಯೇನಾಯಿತೋ ಎಂದು ನಾನು ಮಲಗಿದಲ್ಲೇ ಚಡಪಡಿಸಿದೆ. ಆದರೆ ಅವರು ಮಾತ್ರ ಅದನ್ನು ಮರೆತವರಂತೆ ಮಾತಿನಲ್ಲಿ ತಲ್ಲೀನರಾಗಿದ್ದರು. ಅಂತೂ ಕೊನೆಗೊಮ್ಮೆ ಬಂದವರು ಹೊರಟು ಹೋದರು. ಇವರು ಲಗುಬಗೆಯಿಂದ ಮತ್ತೆ ಅಡುಗೆ ಮನೆ ಹೊಕ್ಕರು. ಮುಂದೆ – ಹದಿನೈದು ಇಪ್ಪತ್ತು ನಿಮಿಷ ಅವರಿಂದ ಯಾವ ಮಾತಿಲ್ಲ. ಕೇವಲ ಚಮಚ–ಪಾತ್ರೆ ಸದ್ದು ಮಾತ್ರ ಆಗಾಗ ಕೇಳುತ್ತಿತ್ತು.

“ಶಿರಾ ಆಗೇದ. ನಿನಗ ತಂದುಕೊಡ್ಲೇನು?'' ಅಡುಗೆ ಮನೆಯಿಂದಲೇ ಪತಿರಾಯರು ಕೂಗಿ ಕೇಳಿದರು. ಗಂಡ ಮಾಡಿದ ‘ಶಿರಾ’ದ ರುಚಿಯನ್ನು ಸವಿಯಲು ಕಾತುರಿಸಿ ಕುಳಿತಿದ್ದ ನಾನು ತಕ್ಷಣವೇ “ಕೊಡಿ'' ಎಂದೆ. ಒಂದು ಪ್ಲೇಟ್ ತುಂಬಾ ಶಿರಾ ಹಾಕಿಕೊಂಡು ಬಂದು ನನ್ನೆದುರಿಗಿಟ್ಟರು. ಹಬೆಯಾಡುತ್ತಿದ್ದ ‘ಶಿರಾ’ ನೋಡುತ್ತಲೇ ಬಾಯಲ್ಲಿ ನೀರೂರಿತು. ಅದು ಆರಲು ಕಾಯದೆ ಚಮಚದಿಂದ ಒಂದಿಷ್ಟು ಎತ್ತಿ ಬಾಯಲ್ಲಿಟ್ಟುಕೊಂಡೆ. ‘ಓಹ್,’ ನನ್ನವರ ನಳಪಾಕದ ನಗ್ನ ದರ್ಶನವಾಗಿತ್ತು. ನಾನು ನನ್ನವರನ್ನು ಕರೆದು ಶಿರಾ ತಿನ್ನಲು ಒತ್ತಾಯಿಸಿದೆ. ಅವರು ನನ್ನ ಒತ್ತಾಯಕ್ಕೆ ಮಣಿದು ಒಂದು ಪ್ಲೇಟಿನಲ್ಲಿ ಶಿರಾ ಹಾಕಿಕೊಂಡು ಬಂದು ನನ್ನ ಬಳಿ ಕುಳಿತು ಚಮಚದಿಂದ ಒಂದಿಷ್ಟು ಬಾಯಿಗೆ ಹಾಕಿಕೊಂಡರು. ಮರುಕ್ಷಣವೇ “ಓಹ್, ಶಿರಾಕ್ಕೆ ಸಕ್ಕರೆ ಹಾಕುವುದನ್ನೇ ಮರೆತುಬಿಟ್ಟಿದ್ದೆ'' ಎಂದು ಒಳಗೋಡಿ ಸಕ್ಕರೆ ಡಬ್ಬಿಗಾಗಿ ತಡಕಾಡ ತೊಡಗಿದಾಗ ನನಗೆ ನಗೆ ತಡೆಯಲಾಗಲಿಲ್ಲ.

ನನ್ನ ಅಡುಗೆ ಬಗ್ಗೆ ಟೀಕೆ ಮಾಡುವಾಗಲೆಲ್ಲಾ ಈಗೀಗ ನಾನು ಸಕ್ಕರೆ ಇಲ್ಲದ ಶಿರಾ ನೆನಪಿಸುತ್ತಲೇ ಇರುತ್ತೇನೆ. ಆಗ ಅವರ ಮುಖ ನೋಡುವಂತಿರುತ್ತದೆ.

–ಗಾಯತ್ರಿ ಇನಾಮದಾರ, ಬಳ್ಳಾರಿ

## ಖಾರದ ಸಾರು

ನನ್ನ ಯಜಮಾನರಿಗೆ ಅಡಿಗೆ ಮನೆ ಕೆಲಸ ಎಂದರೆ ಪರಿಚಯವೇ ಇರಲಿಲ್ಲ ಎನ್ನಬಹುದು. ಅವರಿಗೆ ಮಲಗಿದ ಕಡೆಗೆ ಬೆಡ್ ಕಾಫಿ, ಕುಳಿತ ಕಡೆ ತಿಂಡಿ ಊಟ ಸರಬರಾಜು ಆಗುವುದರಿಂದ ಅಡಿಗೆ ಮನೆಯಿಂದ ಮಾರು ದೂರವೇ ಇದ್ದ ಅವರಿಗೆ ಅನಿವಾರ್ಯವಾಗಿ ಅಡಿಗೆ ಮನೆಗೆ ಒಮ್ಮೆ ಪ್ರವೇಶ



ಶ್ರೀಕಂಠಯ್ಯ

ಮಾಡಲೇಬೇಕಾಯಿತು. ಅಲ್ಲಿಯವರೆಗೆ ಅಡಿಗೆ ಮನೆಯಲ್ಲಿ ಸರ್ವಾಧಿಕಾರಿ ಆಗಿದ್ದ ನನಗೆ (ಡಾಕ್ಟರ್ ಬೆಡ್‌ರೆಸ್ಟ್ ಹೇಳಿದ್ದರಿಂದ) ನನ್ನ ಯಜಮಾನರು ನನಗೇ ಅಡಿಗೆ ಮನೆಗೆ ಪ್ರವೇಶ ಮಾಡಬಾರದೆಂದು ನಿಷೇಧಾಜ್ಞೆ ಹೊರಡಿಸಿದರು. ಅಡಿಗೆ ಮನೆಯ ಪಾರುಪತ್ಯವನ್ನು (ತಾತ್ಕಾಲಿಕವಾಗಿ) ತಾವು ಪಡೆದುಕೊಂಡರು. ಅವರ ಅಧಿಕಾರಾವಧಿಯ ಮೊದಲ ದಿನ ಬೆಳಿಗ್ಗೆ ಏಳುವ ಹೊತ್ತಿಗೆ ‘ಸನ್‌ರೈಸ್’ ಸಿದ್ಧವಾಗಿ ನನ್ನ

ಬಳಿ ಬಂತು. ಡ್ಸರಿ ಹಾಲಿಗೆ ಒಂದು ತೊಟ್ಟು ನೀರು ಮಿಶ್ರ ಮಾಡದೆ ತಯಾರಾದ ಕಾಫಿ. ಆಹಾ! ಕಾಫಿ ನಿಜಕ್ಕೂ ತುಂಬಾ ಹದವಾಗಿತ್ತು. (ಇಂಥ ಸೊಗಸಾದ ಕಾಫಿ ಕುಡಿಯಲು ಅವಕಾಶ ಒದಗಿಸಿದ ಕಾಯಿಲೆಗೆ ನಿಜಕ್ಕೂ ನಾನು ಚಿರಋಣಿ.) ನನ್ನ ಯಜಮಾನರಿಗೆ ಎಲ್ಲದರಲ್ಲೂ ಶ್ರದ್ಧೆ ಹೆಚ್ಚು. ಅವರ ಕೆಲಸ ಅಚ್ಚುಕಟ್ಟು. ಹೇಗೋ ಒಂದು ಕೆಲಸವಾದರಾಯಿತು, ಎಂದವರು ಮಾಡುವುದಿಲ್ಲ ಎಂಬುದು ಅವರು ಮಾಡಿದ ಕಾಫಿ ಸವಿದರೇನೇ ನೀವು ಖಂಡಿತ ಒಪ್ಪುತ್ತೀರಿ. ಒಮ್ಮೆ ಅವರ ಕಾಫಿ ರುಚಿ ಸವಿಯಲುನಮ್ಮ ಮನೆಗೆ ಖಂಡಿತ ಬನ್ನಿ.

ಸೊಗಸಾದ ಕಾಫಿ ಹೀರಿ ಸವಿಯಾದ ಊಟದ ಬಗ್ಗೆ ಹಗಲುಕನಸು ಕಾಣುತ್ತಿದ್ದೆ. ಅಡಿಗೆಮನೆಯಲ್ಲಿ ಭರಾಟೆಯಿಂದ ಅಡಿಗೆ ಸಿದ್ಧತೆ ನಡೆದಿತ್ತು. ಓ! ದಡದಡ ಪಾತ್ರೆಗಳ ಸದ್ದು. ಮಧ್ಯದಲ್ಲೇ 'ಲಲಿತ ಅಕ್ಕಿ ಡಬ್ಬಿ ಎಲ್ಲಿಟ್ಟಿದ್ದೀಯ?' 'ಲಲಿತ ಬೇಳೆ ಎಷ್ಟು ಹಾಕಬೇಕು?' 'ಲಲಿತ ಸಾರಿಗೆ ಯಾವ ಪುಡಿ ಹಾಕಬೇಕು?' 'ಇಲ್ಲಿ ನಾಲ್ಕು ಡಬ್ಬಿಗಳಲ್ಲಿ ಪುಡಿ ಇದೆಯಲ್ಲಾ ಮೆಣಸಿನ ಪುಡಿ ಯಾವ ಡಬ್ಬಿಯಲ್ಲಿದೆ ಲಲ್ತ?' 'ಲಲ್ತ, ಲಲ್ತ' ಎಂಬ ಅಷ್ಟೋತ್ತರದ ನಡುವೆ ಅಡಿಗೆ ಸಿದ್ಧವಾಯಿತು.

ಅನ್ನ ಸಾರು ಪಲ್ಯದ ಜೊತೆಗೆ ಹಪ್ಪಳ ಸಂಡಿಗೆ ಸಿದ್ಧವಾಯಿತು.

ನನ್ನ ಹೊಟ್ಟೆ ತಾಳ ಕುಟ್ಟುತ್ತಿದ್ದರಿಂದ ತಟ್ಟೆ ಹಾಕಿಕೊಂಡು ಊಟಕ್ಕೆ ಸಿದ್ಧಳಾದೆ. ಅಂತೂ ನನ್ನ ಯಜಮಾನರ ಅಡಿಗೆ ಪ್ರಯೋಗಕ್ಕೆ ಸಿದ್ಧವಾದ ಗಿನಿಪಿಗ್ ನಾನಾಗಿದ್ದೆ. ಅನ್ನ ಸಾರು ಕಲಸಿ ಬಾಯಿಗಿಟ್ಟೆ. ಏಕೋ ಅದು ಬಾಯಿಂದ ಒಳಗೆ ಹೋಗುವುದಕ್ಕೆ ಬದಲಾಗಿ ಈಚೆಗೆ ಬರಲು ಆತುರ ತೋರಿದವು. ಆದರೂ ಬಲಮಂತದಿಂದ ಔಷಧ ನುಂಗಿದಂತೆ ನುಂಗಿದೆ. (ಅಬ್ಬಾ! ಅದೆಷ್ಟು ಖಾರ! ಅದೇನು ಸಾರೋ ಖಾರದ ನೀರೋ! ಆ ದೇವರೇ ಬಲ್ಲ!) ಕಷ್ಟಪಟ್ಟು ಅಡಿಗೆ ತಯಾರಿಸಿದ ನನ್ನವರ ಬಸವಳಿದ ಮುಖ ಕಂಡು ನನಗೆ 'ಅಯ್ಯೋ ಪಾಪ' ಎನಿಸಿತು. ಹಾಗಾಗಿ ಅವರ ಅಡಿಗೆ ಬಗ್ಗೆ ಯಾವ ಮಾತು ಆಡದೆ, ಮತ್ಯಾವ ಭಾವವನ್ನೂ ಮುಖದಲ್ಲಿ ವ್ಯಕ್ತಪಡಿಸದೆ ಗಟ್ಟಿ ಮನಸ್ಸು ಮಾಡಿ ಸ್ಥಿತಪ್ರಜ್ಞಳಂತೆ ಇದ್ದೆ. "ಲಲ್ತ, ಇನ್ನಷ್ಟು ಸಾರು ಹಾಕೋ! ಮತ್ತಷ್ಟು ಪಲ್ಯ ಹಾಕಿಕೋ'' ಎಂಬ ಅವರ ಇತ್ಯಾದಿ ಉಪಚಾರವನ್ನು ನಯವಾಗಿ ನಿರಾಕರಿಸಿದೆ. ಊಟಕ್ಕೆ ಕುಳಿತ ನನ್ನ ಯಜಮಾನರು ಮೊದಲ ತುತ್ತು ತಿಂದ ಕೂಡಲೇ ಮುಖ ಸೊಟ್ಟಗೆ ಮಾಡಿದರು. "ಲಲಿತ, ನೀನು ಹೇಳಿದ ಮೆಣಸಿನ ಪುಡಿ ಹಾಕಿ ಸಾರು ಮಾಡಿದ್ದರೂ ಇದ್ಯಾಕೆ ಹೀಗೆ ಖಾರವಾಗಿದೆ? ನೀನು ಮಾಡೋ ಸಾರು ಅದೆಷ್ಟು ರುಚಿ, ಅದ್ಯಾಕೆ ನನ್ನದು ಆ ರುಚಿ ಬಂದಿಲ್ಲ?'' ಎಂದು ಕಾರಣ ಕೇಳುತ್ತಾರೆ. ನನ್ನ ಟ್ರೇಡ್ ಸೀಕ್ರೆಟ್ ಅಷ್ಟು ಸುಲಭವಾಗಿ ನಾನು ಬಿಟ್ಟು ಕೊಡೋಕೆ ಸಾಧ್ಯನಾ? ನೀವೇ ಹೇಳಿ.

ನನ್ನ ಯಜಮಾನರಂತು ಅಂದಿನಿಂದ ಆಗಾಗ ಅಡಿಗೆ ಮನೆ ಪ್ರವೇಶ ಮಾಡುತ್ತಿರುತ್ತಾರೆ. ಹೇಗಾದರೂ ಗಂಡಸರಿಗೆ ಬಂದಿರುವ ನಳಪಾಕ, ಬೀಮಪಾಕ ಎಂಬುವ ಬಿರುದು ಬಾವಲಿ ತಮ್ಮಲ್ಲೇ (ಪುರುಷ ವರ್ಗದವರಲ್ಲೇ) ಉಳಿದಿರಲಿ, ಅದು ಸ್ತ್ರೀಯರ ಪಾಲಾಗುವುದು ಬೇಡ ಎಂದು ಪ್ರಯತ್ನಿಸುತ್ತಾರೆ. ಆದರೆ ಈ ಕಲಿಯುಗದಲ್ಲಿ ಅದು ಸಾಧ್ಯವೋ ಅಥವಾ ಮತ್ತೆ ತ್ರೇತಾ, ದ್ವಾಪರ ಯುಗ ಬಂದಾಗಲೇ ಸಾಧ್ಯವೇನೋ! ನೋಡೋಣ ಅವರು ರುಚಿಕಟ್ಟಾದ ಅಡಿಗೆ ತಯಾರು ಮಾಡಿದಾಗ ನಿಮಗೂ ಖಂಡಿತಾ ಆಮಂತ್ರಿಸಿ ಕಳುಹಿಸುತ್ತೇನೆ. ಊಟಕ್ಕೆ ಬರಲು ಸಿದ್ಧವಾಗಿರಿ.

—ಲಲಿತಾ ಶ್ರೀಕಂಠಯ್ಯ
ಭದ್ರಾವತಿ

## ನಳ ಮಹಾರಾಜ

'ಅಡಿಗೆ ಮಾಡೋದು ಹೆಂಗಸ್ರ ಕೆಲ್ಸ' ಎನ್ನುತ್ತಿದ್ದ ನನ್ನವರು, ತಾವು ಬ್ರಹ್ಮಚಾರಿಯಾಗಿದ್ದಾಗ, 5–6 ಜನ ಸ್ನೇಹಿತರು ಸೇರಿ ಮನೆ ಮಾಡಿಕೊಂಡು, ಎಲ್ಲರಿಗೂ ತಾನೇ ಅಮ್ಮನ ಹಾಗೆ ದಿನಕ್ಕೊಂದು ಬಗೆ ಅಡಿಗೆ ಮಾಡಿ ಹಾಕ್ತಿದ್ದೆ ಎಂದು ಹೇಳಿಕೊಳ್ಳುವಾಗ ನಾನೂ, ನನ್ನ ತಮ್ಮನೂ ಅದೆಲ್ಲ ಬುರುಡೆ, ರೈಲು ಎಂದೆಲ್ಲಾ ಗೇಲಿ ಮಾಡುತ್ತಿದ್ದೆವು. ನಾವೆಷ್ಟೇ ಗೇಲಿ ಮಾಡಿದರೂ ಶಾಂತ ಸ್ವಭಾವದ ಅವರು ಮುಗುಳ್ನ ಗುತ್ತಿದ್ದರೇ ವಿನಃ ಉತ್ತರವೂ ಕೊಡುತ್ತಿರಲಿಲ್ಲ. ಒಂದೇ ಒಂದು ದಿನವೂ ಅಡಿಗೆಯೂ ಮಾಡುತ್ತಿರಲಿಲ್ಲ. ಸಂಪ್ರದಾಯ ಮನೆಯವಳಾದ ನನಗೆ (ಸ್ವಲ್ಪ ಅತಿ) ಮಡಿ–ಮೈಲಿಗೆ ಇತ್ತು. ಹೀಗಾಗಿ ತಿಂಗಳ 4 ದಿವಸ ಹೊರಗಾದಾಗ ನನ್ನ ತಮ್ಮನೇ (ಅವನೂ ಬ್ಯಾಂಕ್ ಉದ್ಯೋಗಿ) ಅಡಿಗೆ ಮಾಡಿಟ್ಟರೆ, ನನ್ನವರು ಏನಾದರೂ ಸಹಾಯ ಮಾಡುತ್ತಿದ್ದರೇ ವಿನಃ ತಾವಾಗಿ ಅಡಿಗೆ ಮಾಡುತ್ತಿರಲಿಲ್ಲ. ಆಗೆಲ್ಲಾ ನನಗೊಂದು ರೀತಿ ಹಟ ಬರುತ್ತಿತ್ತು. ಒಂದಲ್ಲ ಒಂದು ದಿನ ಇವರ ಕೈಲಿ ಅಡಿಗೆ ಮಾಡಿಸ್ಲೇಬೇಕು ಎಂದು. "ಅಡಿಗೆ ಮಾಡಿಬಿಟ್ರೆ ನಿಂ ಜಂಬದ ಗೊಂಡೆ ಏನಾದ್ರೂ ಉದುರಿ ಹೋಗು ತ್ತೇನ್ರೀ...'' ಎಂದೆಲ್ಲಾ ಕೇಳುತ್ತಿದ್ದೆ.

ಅದೊಂದು ದಿನ ನಮ್ಮ ಪುರೋಹಿತರಿಂದ ಪತ್ರವೊಂದು ಬಂದಿತ್ತು. "ತಾವು ತಮ್ಮ ಕುಟುಂಬ ಸಮೇತ ವೃದ್ಧ ತಾಯಿಯನ್ನು ಕರಕೊಂಡು ಕಾಶಿ–ಬದರಿಯಾತ್ರೆಗೆ ಹೊರಟಿದ್ದೇವೆ. ಮಂಗಳೂರಿನಿಂದ ರಾತ್ರಿ 8ಕ್ಕೆ ರೈಲು. ಮಧ್ಯಾಹ್ನ ನಿಮ್ಮ ಮನೆಗೆ 8 ಜನ ಬರುತ್ತಿದ್ದೇವೆ '' ಎಂದು. ಮಹಾದೈವಭಕ್ತರೂ, ಧರ್ಮ ನಿಷ್ಠರೂ ಆದ ಅವರೆಲ್ಲಾ ನಮ್ಮ ಮನೆಗೆ ಬರುವುದು ನಮಗೆಲ್ಲಾ ಸಂತಸ ನೀಡಿತ್ತು. ನನ್ನ ಮಡಿ–ಮೈಲಿಗೆ ವಿಚಾರ ಅವರಿಗೆಲ್ಲಾ ತಿಳಿದಿತ್ತು. ಅಲ್ಲಿಂದ ಇಲ್ಲಿ ... ಬರುವ ಅವರು ಯಾವ ಸಂಕೋಚ ... ಬರುತ್ತಿರುವುದು ನನಗೆ ಹೆಮ್ಮೆ ಎನಿಸಿತ್ತು. ಮುಂಚಿನ ದಿನವೇ ಹಾಲು, ಬಾಳೆ ಎಲೆ, ಅವರೆಲ್ಲಾ ತಿನ್ನುವ ತರಕಾರಿ ತರಿಸಿಟ್ಟುಕೊಂಡು, ಮಡಿ ಮೊಸರು ... ಮರುದಿನ ಔತಣದ ಅಡಿಗೆಯೆಂಬಂತೆ ಯಾವುದೆಲ್ಲಾ ಬಗೆ ಮಾಡುವುದೆಂದು ಇವರೆದುರು ಪಾಠ ಒಪ್ಪಿಸಿದೆ. "ನೋಡೂ... ಬಂದವರು ತೃಪ್ತಿಯಿಂದ ಉಂಡು–ಹರಸಿ ಹೋಗಬೇಕು. ಯಾರಿಗೇನು ಇಷ್ಟವೋ ಅದನ್ನೇ ಮಾಡು. ಖರ್ಚಿನ ವಿಷ್ಯ ಚಿಂತೆ ಮಾಡಬೇಡ'' ಎಂದಾಗ ನನ್ನವರ ಬಗ್ಗೆ ಅಭಿಮಾನವಾಯ್ತು. ಆದರೆ ಮರುದಿನ ಬೆಳಗಾಗೆದ್ದು ನಾನು ಹೊರಗಾದಾಗ (ಹೆಂಗಸರಿಗೆ ಇದೊಂದು ಪ್ರಾರಬ್ಧ ಉಂಟಲ್ಲ) ನನ್ನಾಸೆ ಪುಸ್ ಎಂದಿತ್ತು. ಆಘಾತದಿಂದ ಅಳುವೇ ಬಂದಾಗ ನನ್ನವರು "ನೀನ್ಯಾಕೆ ಚಿಂತೆ ಮಾಡ್ತೀ? ನಾನು ಅಡಿಗೆ ಮಾಡ್ತೀನಿ ಸುಮ್ಮನಿರು'' ಎಂದು ಸಮಾಧಾನಿಸಿದರು. "ಏನ್ರೀ..... ಸ್ನಾನ ಮಾಡ್ಕೊಂಡು ಮಡಿಯಲ್ಲಿ, ಅಡ್ಗೆ ಶುರು ಮಾಡಿ... ರ್ರೀ ಕುಸುಂಬ್ರಿಗೆ ಒಂಚೂರು ಇಂಗಿನ ನೀರು ಬಿಟ್ಕೊಂಡು ಒಗ್ಗರಣೆ ಹಾಕಿ, ಏನ್ರೀ... ಅವರಿಗೆ ಶ್ಯಾವಿಗೆ ಮಡಿಗೆ ಬರೋಲ್ಲ. ಅದು ಪಾಯಸ ಬೇಡ.. ಏನ್ರೀ.....'' ಎನ್ನುತ್ತಿದ್ದಂತೆ "ಏನ್ ಮಾಡ್ಬೇಕೋ ಅದನ್ನ ಮಾಡ್ತೀನಿ. ನೀನು ಸ್ವಲ್ಪ ಬಾಯಿಗೆ ಬೀಗ ಹಾಕ್ಕೊಂಡು ಕೂತ್ಕೋತೀಯಾ...'' ಸಟ್ಟನೆ ಹೇಳಿದಾಗ ನನ್ನ ಮುಖಕ್ಕೆ ಹೊಡೆದಂತಾಗಿ ಸುಮ್ಮನೆ ಕುಳಿತೆ. ವಿಶೇಷ ಅಡಿಗೆಯ ಹೊಣೆ, ನನ್ನ ಪುಕ್ಕಟೆ ಸಲಹೆ ಇವುಗಳಿಂದ ನನ್ನವರು ವ್ಯಗ್ರರಾಗಿದ್ದರು.

ಅಡಿಗೆ ಮನೆಗೆ ಹೋದ ಕೂಡಲೇ ಸೌಟು, ಪಾತ್ರೆ ಉರುಳಿ ಬಿದ್ದು, ಗಾಜಿನ ಸೀಸೆಯೊಂದು ಫಳಾರೆಂದು ಬಿದ್ದು ಪುಡಿಯಾದಾಗ ಚಿಂತೆಯಾಗ ತೊಡಗಿತ್ತು. ಮುಂದಿನ ಹತ್ತು ನಿಮಿಷ ಮೌನ. ಮತ್ತೆ ಕಾಯಿ ಹೆರೆದಿದ್ದು, ಕುಕ್ಕರ್, ಮಿಕ್ಸಿ ಗಲಾಟೆ, ಎಣ್ಣೆ ಬಾಟಲು, ಒಗ್ಗರಣೆಯ ಘಮಳ ಬರತೊಡಗಿತ್ತು. ಮುಂದಿನ ಮೂರು ಗಂಟೆಯಲ್ಲಿ ಮುಂಚಿನ ದಿನ ನಾನು ಏನೆಲ್ಲಾ ಅಡಿಗೆ ಮಾಡಬೇಕೆಂದು ಪಾಠ ಒಪ್ಪಿಸಿದ್ದೆನೋ ಅದೆಲ್ಲವನ್ನೂ ಮಾಡಿ, ಮತ್ತೂ 2 ಬಗೆ ಸಿಹಿ ಹಾಗೂ ಖಾರದ ತಿಂಡಿ ಮಾಡಿರುವುದಾಗಿ ತಮ್ಮ ಸುದ್ದಿ ತಂದಾಗ ದಂಗಾಗಿದ್ದೆ. ಬಂದವರಿಗೆಲ್ಲಾ ಮಡಿಯಲ್ಲೇ ಊಟ ಬಡಿಸಿದಾಗ "ನಳ ಮಹಾರಾಜನ ಕೈ ಅಡುಗೆ, ಎಷ್ಟು ರುಚಿ! ಎಷ್ಟು ಬಗೆ!'' ಎಂದೆಲ್ಲಾ ಹೊಗಳಿಕೊಂಡು ಉಂಡಾಗ, ವೃದ್ಧ ತಾಯಿಯವರೂ ಇವರು ಮಡಿಯಲ್ಲಿಯೇ ಇರುವುದನ್ನು ಕಂಡು ತಾವೂ ಉಂಡು ಹರಸಿದಾಗ, ಧನ್ಯತಾಭಾವ ಮೂಡಿತ್ತು. ರಾತ್ರಿ ರೈಲಿಗೆ ಹೋಗುವವರಿಗೆ ನನ್ನವರು ರವೆ ಇಡ್ಲಿ, ಮೊಸರವಲಕ್ಕಿ ಕಟ್ಟಿ ಕೊಟ್ಟಾಗ ಅವರೆಲ್ಲ ಮೂಕ ವಿಸ್ಮಿತರಾಗಿದ್ದರು.

'ನಳ ಮಹಾರಾಜನ ಕೈ ಹಿಡಿದ ಭಾಗ್ಯಶಾಲಿ ನೀನು' ಎಂದು ಅವರೆಲ್ಲಾ ಹೊಗಳಿದಾಗ ಅಭಿಮಾನದಿಂದ ನನ್ನವರತ್ತ ನೋಡಿದೆ. ಇವರು ಎಂದಿನ ಶಾಂತ ನಗೆಯೊಂದಿಗೆ ಮುಗುಳ್ನಗುತ್ತಿದ್ದರು. ... ನನ ಗಂಡ!

—ಭಾರ್ಗವಿ ಪರಮೇಶ್ವರ, ಮಂಗಳೂರು



ಪರಮೇಶ್ವರ

# ಫೈನಲ್ ಟಚ್

"ರೀ.... ನಂಗೆ ಒಂದೈನೂರು ರೂಪಾಯಿ ಬೇಕೂರೀ..."

"ಹುಂ... ನನ್ ಪರ್ಸ್‌ನಲ್ಲಿದೆ ತೊಗೊ" ಪೇಪರ್ ಓದ್ತಾಯಿದ್ದ ನನ್ನ ಯಜಮಾನರು ಅದರಿಂದ ತಲೆ ಎತ್ತದೆ ಹಾಗೇ ಉತ್ತರಿಸಿದರು.

"ರೀ... ರೀ...."

"ಏನೇ ನಿಂದು, ಒಂದೈದ್ ನಿಮಿಷ ಪೇಪರ್ ಓದೋಣಾಂದ್ರೆ ಅದಕ್ಕೂ ಬಿಡೋಲ್ಲ, ಸರಿ ಅದೇನ್ ಹೇಳು" ಎಂದು ಪೇಪರ್ ಮಡಿಚುತ್ತಾ ರೂಮಿಗೇ ಬಂದರು.

"ಅಲ್ಲಾರೀ... ಪರ್ಸ್‌ನಲ್ಲಿ ದುಡ್ಡಿದೆ ತೊಗೋಂದ್ರೀ ಇಲ್ಲಿ ನೋಡಿದ್ರೆ ಬರೀ ಅರವತ್ತು ರೂಪಾಯಿ ಮಾತ್ರ ಇದ್ಯಲ್ಲಾರೀ"

"ತಿಂಗಳ ಕೊನೆ ಅಲ್ವೇನೇ 60 ರೂಪಾಯಿ ಇರೋದೇ ಹೆಚ್ಚು"

"ಮತ್ತೆ ನಂಗೆ 500 ರೂಪಾಯಿ ತೋಗೋಂದ್ರಿ"

"ಏನು...! ನಾನು ... ನಿಗ್ಗೆ 500 ರೂಪಾಯಿ ತೊಗೋಂತ ಅಂದ್ನಾ.... ಹುಂ.... ಅಂದಿದ್ರೂ ಅಂದಿರ್‌ಬಹ್ದು, ಯಾಕೇಂದ್ರ ನಾನು ಪೇಪರ್ ಓದ್ತಾಯಿದ್ದೆ ನೋಡು ಅದಕ್ಕೆ"

"ಹುಂ, ಸರಿ ಸರಿ, ನೀವು ಆಫೀಸ್‌ನಿಂದ ಬರ್ತಾ ತೊಗೊಂಡ್ ಬನ್ನಿ"

"ಅಲ್ವೇ... ಆಫೀಸ್‌ನಿಂದ ಬರ್ತಾ ತರೋಕೆ ಅದೇನು ನನ್ನ ಸ್ವಂತದ್ದೇನೇ"

"ಅದೇನೋ ಅದೆಲ್ಲಾ ನಂಗೆ ಗೊತ್ತಿಲ್ಲಾರೀ ಮನೆ ಸಾಮಾನೆಲ್ಲ ಮುಗಿದ್ಹೋಗಿದೆ, ಹೇಗಾದ್ರೂ ಸರಿ ನಂಗೆ ದುಡ್ಡು ಬೇಕು"

"ಹಾಂ... ಏನೇ ಇದು, ಅಲ್ವೇ ರಾಜಿ, ತಿಂಗಳ ಸಾಮಾನಿಗೇಂತ ಒಂದನೇ ತಾರೀಖೇ ಪೂರ್ತಿ ದುಡ್ಡು ವಸೂಲು ಮಾಡ್ತೀಯ, ಇವತ್ತು ತಾರೀಖು ಇನ್ನೂ 20 ಅಲ್ವೇನೇ"

"ಅದೆಲ್ಲಾ ಸರೀರಿ, ಈ ತಿಂಗ್ಳು ನೀವು 5 ದಿವಸನಾದ್ರೂ ಅಡಿಗೆ ಮಾಡಿದೀರಾ ಅಲ್ವೇನ್ರಿ"

"ಹೌದು ಮಾಡಿದೀನಿ. ಅದಕ್ಕೇನೀಗಾ.. ನನ್ನಂಥ ರುಚಿರುಚಿಯಾದ ಅಡಿಗೆ ಮಾಡೋ ಗಂಡ ಸಿಕ್ಕಿರೋದು ನಿನ್ನ ಪುಣ್ಯಾ ಕಣೇ"

"ಹೌದೌದು ನಾನು ತುಂಬಾ ಪುಣ್ಯವಂತೇರಿ, ಈಗ 500 ರೂ..."

"ಒಳ್ಳೆ ನಕ್ಷತ್ರಿಕನ ತರಹ 500 ರೂಪಾಯಿ ಅಂತ ಬೆಳಗ್ಗೇನೇ ನನ್ನ ತಲೆ ತಿಂತಾ ಇದೀಯಲ್ಲೇ"

"ಅಲ್ಲಾ... ಏ ರಾಜಿ... ಅಡಿಗೆ ಮಾಡಿದೋನು ನಾನು. ಒಳ್ಳೇ ಅಡಿಗೆಯವ್ರು ಕೇಳೋ ತರಹ ಐದು ದಿನಕ್ಕೆ ಐದು ನೂರು ರೂಪಾಯಿ ಕೊಡೀಂತ ನನ್ನನ್ನೇ ಕೇಳ್ತಾ ಇದೀಯಲ್ಲೇ. ನ್ಯಾಯವಾಗಿ ನೋಡಿದರೆ ನಾನು ನಿನ್ನನ್ನು ಕೇಳಬೇಕಾಗಿತ್ತು ಗೊತ್ತಾ...."

"ಅಯ್ಯೋ... ರಾಮಾ... ರೀ... ನಿಮ್ಮನ್ನು ಅಡಿಗೆಯವ್ರು ಅಂತ ನಾನು ಹೇಳ್ಲಿಲ್ಲಾರೀ... ಅದೇ... ನೀವು 5 ದಿನ ಅಡಿಗೆ ಮಾಡಿದ್ರೆ 15 ದಿವಸಕ್ಕೆ ಆಗೋಷ್ಟು ಸಾಮಾನು ಖರ್ಚಾಗಿರುತ್ತೆ, ಅದಕ್ಕೆ ನಾನು ದುಡ್ಡು ಕೇಳಿದ್ದು"

"ಹುಂ... ಆಗತ್ತೆ.... ಆಗತ್ತೆ.. ನಿಂಗೆ, ನನ್ನ ಅಡಿಗೇನ ಎಲ್ರೂ ಹೊಗಳ್ತಾರೇ ನೋಡು ಅದಕ್ಕೇ

ಸುರೇಶ್



ಹೊಟ್ಟೆ ಉರಿ ಕಣೆ. ನೀನು ಉಪ್ಪಿಟ್ಟು ಮಾಡಿದ್ರೆ; ಮಕ್ಳು ಅಯ್ಯೋ ಉಪ್ಪಿಟ್ಟೇ ನಂಗೆ ಬೇಡಾಂತ ಎದ್ದು ಹೋಗ್ತಾವೆ, ಅದೇ ನಾನು ಮಾಡಿದ್ರೆ ಡ್ಯಾಡಿ.... ಒಳ್ಳೇ ಎಂಟಿಆರ್ ಖಾರಾಭಾತ್ ತರಹ ಇದೆ ಇನ್ನೂ ಬೇಕೂಂತಾರೆ. ಮೊನ್ನೆ ನಿನ್ನ ತಮ್ಮನ ಮಕ್ಳು ರವೆ ದೋಸೆ ಎಷ್ಟು ಹಾಕಿದ್ರೂ "ಇನ್ನೂ ಬೇಕು ಅಂಕಲ್, ಕಾಮತ್ ಹೋಟೇಲ್ ರವೆ ದೋಸೆಗಿಂತ ನೀವು ಮಾಡೋ ದೋಸೇನೇ ಬಂಬಾಟ್" ಅಂತ ಹೇಳಿ ಲ್ವೇನೇ, ಅದಕ್ಕೇ ನಿಂಗೆ ಹೊಟ್ಟೆಕಿಚ್ಚು. ಅಷ್ಟ್ಯಾಕೆ ಮೊನ್ನೆ ನನ್ನ ಫ್ರೆಂಡ್ಸ್ ಬಂದಿದ್ರಲ್ಲಾ ಅವ್ರು ಮಾತಿನ ಮಧ್ಯದಲ್ಲಿ ಏನೇ ಹೇಳಿದ್ರು; ಏನೇ ಹೇಳಿ ಶ್ರೀಮತಿ ಸುರೇಶ್ ಅವರಿಗಿಂತ ಶ್ರೀ ಸುರೇಶ್‌ರೇ ಅಡಿಗೆ ಚೆನ್ನಾಗಿ ಮಾಡ್ತಾರೇಂತ. ಅದೇ ಅವ್ರು ಬಂದಾಗ ಮೈಸೂರು ಪಾಕ್ ಮಾಡಿದ್ದು ನಿನ್ಗೆ ಗೊತ್ತೇ ಇದ್ಯಲ್ಲಾ, ನಾನು ಮಾಡೋ ತರಹ ಯಾವ ಹೋಟೆಲ್‌ನೋರೂ ಮಾಡೋಲ್ಲಾ ಕಣೇ, ನಾನೇನಾದ್ರೂ ಹೋಟೆಲ್ ಇಟ್ಟಿದ್ರೆ... ಆಹಾ... ದುಡ್ಡು.... ದುಡ್ಡಿನ ಸುರಿಮಳೆ ಕಣೆ"

"ಸಾಕು ಸುಮ್ನಿರಿ, ದುಡ್ಡಿನ ಸುರಿಮಳೆ ಅಲ್ಲ ಪಾಪರ್ ಚೀಟಿ"

ನನ್ನ ಯಜಮಾನ್ರು ಹೇಳಿದ್ದು ಸುಳ್ಳೇನಲ್ಲ. ಅವರೇನಾದ್ರೂ ಅಡಿಗೆ ಮನೆಗೆ ಬಂದ್ರೆ, ಅಡಿಗೆ ನಿಜವಾಗ್ಲೂ ನಳಪಾಕಾನೇ. ಎಲ್ಲರ ಬಾಯಲ್ಲೂ ನೀರೂರತ್ತೆ; ಆದ್ರೆ ನನ್ನ ತಿಂಗಳ ಬಜೆಟ್ ಮಾತ್ರ ಡಬ್ಬಲ್ ಆಗಿರುತ್ತೆ. ಯಾಕೇಂತೀರಾ, ತುಪ್ಪ, ಗೋಡಂಬಿ, ತೆಂಗಿನಕಾಯಿ, ಕೊಬ್ರಿ ಇವೆಲ್ಲಾ ಎಲ್ಲೇ ಮುಚ್ಚಿಟ್ಟಿದ್ರೂ ಒಂದೇ ದಿನದಲ್ಲಿ ಖಾಲಿ. ಒಂದೊಂದು ತುತ್ತಿಗೆ ಒಂದೊಂದು ಗೋಡಂಬಿ, ಇನ್ನು ಎಲ್ಲಾದಕ್ಕೂ ಒಳ್ಳೆ ತುಪ್ಪಾನೇ. ರವೆ ದೋಸೆಗೂ ಗೋಡಂಬಿ, ಮಸಾಲೆ ದೋಸೆ ಆದ್ರೆ ಆಲೂಗೆಡ್ಡೆ ಪಲ್ಯಕ್ಕೂ ಗೋಡಂಬಿ, ಬಿಸಿಬೇಳೆ ಭಾತ್, ಮೊಸರನ್ನ, ಇನ್ನೂ ಏನೇನು ಬೇಕು ಎಲ್ಲಾ ಗೋಡಂಬಿ – ರುಚಿಯಾಗದೇ ಇರುತ್ಯೇ?

ಹಾಂ... ಒಂದು ಗುಟ್ಟು; ಉಪ್ಪು ಹುಳಿ, ಖಾರ ಅವರ ಕೈಯಿಂದ ಹಾಕಿದ್ರೂ ಎಷ್ಟೆಷ್ಟು ಹಾಕಬೇಕೂಂತ ಹೇಳೋಕೆ ನಾನು ಇರಲೇಬೇಕು. ನನ್ನ ಯಜಮಾನರ ಭಾಷೇಲೇ ಹೇಳೋದಾದ್ರೆ;

"ಈಗ ಫೈನಲ್ ಟಚ್ (Final touch) ಕೊಡ್ತೀನಿ ನೋಡು ಹೇಗಿರಬೇಕು ನನ್ನ ಅಡುಗೆ" ಇದು ನನ್ನ ಯಜಮಾನರ ಅಡಿಗೆ ಸ್ಲೋಗನ್. ಹಿಂದೆ ಒಂದು ಗಾದೆ ಹೇಳ್ತಾಯಿದ್ರು "ಇಂಗು ತೆಂಗು ಇದ್ರೆ ಮಂಗಮ್ಯಾನೂ ಅಡಿಗೆ ಮಾಡ್ತಾಳೇ" ಅಂತ.

ಹಾಗೇ ನನಗೂ ಅನ್ನಿಸುತ್ತೆ, ತುಪ್ಪ ಗೋಡಂಬಿ ಇದ್ರೆ ಯಾವ ಗುಂಡುನು ಬೇಕಾದ್ರ ನಳ ಆಗಬಹುದೂಂತ. ಏನಂತೀರ...?

—ಶ್ರೀಮತಿ ರಾಜಲಕ್ಷ್ಮಿ ಸುರೇಶ್

## ಎಣ್ಣೆ ಬದನೇಕಾಯಿ ಮಾಡಲು ಕಲಿಸಿದ್ದ ರಾಯರು

ಸುಖ ದುಃಖವೆಂಬ ಎರಡು ಮುಖ ಹೊತ್ತ ಬದುಕೆಂಬ ಬಂಡಿ ಕಾಲಚಕ್ರದೊಡನೆ ಓಡುತ್ತಿರುವಾಗ ಹದಿನೈದು ವರ್ಷದ ಹಿಂದಿನ ನೆನಪಿನಾಳಕ್ಕೆ ಇಳಿದರೆ?

ಶ್ರೀಮಾತೆ ರೇಣುಕಾದೇವಿಯ ಪವಿತ್ರ ಸನ್ನಿಧಿಯಲ್ಲಿ ಸವದತ್ತಿಯಲ್ಲಿ ಇವರಿಗಾಗಿ ಕೊಟ್ಟ ಕ್ವಾರ್ಟಸ್ಸಿನಲ್ಲಿ ರಂಗು ರಂಗಿನ ಕನಸುಗಳನ್ನು ಹೊತ್ತು ಇವರೊಡನೆ ಹೆಜ್ಜೆ ಇರಿಸಿದ್ದೆ.

ಹೋದ ಮರುದಿವಸದಿಂದಲೇ ನನ್ನ ನಳಪಾಕ ಪ್ರಾರಂಭವಾಯಿತು. ಆಗಲೇಬೇಕಲ್ಲ? ನನಗೆ ತಿಳಿದಷ್ಟು ಪಲ್ಯ, ಚಪಾತಿ, ರೊಟ್ಟಿ ಮೊದಲಾದವನ್ನು ಮಾಡಿ ಹೇಗೋ ಕಷ್ಟಪಟ್ಟು (ಊಟ ಮಾಡಿ) ಎಂಟು ದಿವಸ ಸಾಗಿಸಿದ್ದೆವು. ರವಿವಾರ ಇವರು ಬಿಡುವು ಮಾಡಿಕೊಂಡು "ಇಂದು ನನ್ನ ಕೈ ಅಡುಗೆ ರುಚಿ ನೋಡುವಿಯಂತೆ" ಎಂದು ಹೇಳಿ ಅಡುಗೆ ಮನೆಗೆ ನುಗ್ಗಿದಾಗ ಕುತೂಹಲದಿಂದ ಕಣ್ಣರಳಿಸಿದ್ದೆ. ಎಳ್ಳು, ಜೀರಿಗೆ, ಕೊಬ್ರಿ, ಮಸಾಲೆ ಎಲ್ಲ ಸಣ್ಣಗೆ ಅರೆದು ಸಣ್ಣ ಸಣ್ಣ ಬದನೆಕಾಯಿಗಳಲ್ಲಿ ತುಂಬಿ ಪಲ್ಯ ಮಾಡಿದರೆ ಘಮ್ಮೆನ್ನುವ ವಾಸನೆ ಹಸಿವೆಯನ್ನು ಜಾಗೃತಗೊಳಿಸಿತ್ತು. ಪುಟ್ಟ ಪುಟ್ಟ ಚಪಾತಿಗಳು ಮೃದುವಾಗಿ ತಯಾರಾಗಿದ್ದವು. ಅವರ ಆ ಅಡಿಗೆ ಮಾಡುವಾಗಿನ ಚಾಕಚಕ್ಯತೆ, ಸಂಭ್ರಮ, ಸಡಗರ ನೋಡಿ, ಮನಸ್ಸಿನಲ್ಲಿಯೇ ಸಂತೋಷ ಪಟ್ಟಿದ್ದೆ. ಕಗ್ಗಲ್ಲಿನಂತಿದ್ದ ನನ್ನನ್ನು ಕಡೆದು ಪ್ರತಿಮೆ ಮಾಡಿದವರೇ ಇವರು.

ಎಲ್ಲ ಸಂತಸದ ದಿನಗಳೇ ಇದ್ದರೆ ಅದು ಸಂಸಾರವೇ ಅಲ್ಲವೇನೋ ಎನಿಸುತ್ತದೆ. ದಿನಗಳುರುಳಿ ಕಾಲಚಕ್ರ ಸಾಗಿ ಹದಿನೈದು ವರ್ಷ ನಿರಾತಂಕವಾಗಿ ಸಾಗಿದವು. ನನಗೆ ಬೇಜಾರಾದಾಗ ಇವರು ಬಾಣಸಿಗನಾಗುವುದು ರುಚಿಯಾದ ಅಡಿಗೆ ಮಾಡುವುದು ಇವೆಲ್ಲ ಮಾಮೂಲಾಗಿತ್ತು.

ಆದರೆ ಈಗೆರಡು ವರ್ಷದ ಹಿಂದೆ ನಮ್ಮ ಸುಖೀ ಸಂಸಾರದ ಮೇಲೆ ವಿಧಿಯ ವಕ್ರದೃಷ್ಟಿ ಬಿದ್ದು, ನನಗೆ ಟ್ಯೂಮರ ಆಗಿ ಸಾವು ಬದುಕಿನ ನಡುವೆ ಒದ್ದಾಡುತ್ತ ಮಲಗಿರುವಾಗ ಇವರು ಸಾಬೂದಾಣಿಯನ್ನು ಹುರಿದು ಗಂಜಿ ಮಾಡಿ ಕೊಡುವ ಸೊಪ್ಪನ್ನು ಹದವಾಗಿ ಪಲ್ಯ ಮಾಡಿ, ತುಪ್ಪ ಹಾಕಿ ಚಪಾತಿ ಮಾಡಿ ಅತಿ ಪ್ರೀತಿಯಿಂದ, ಆರೈಕೆ ಮಾಡಿದ ಇವರು ಆ ಭೀಮಸೇನ ನಳ ಮಹಾರಾಜರಿಗಿಂತಲೂ ನನ್ನ ಪಾಲಿಗೆ ದೊಡ್ಡವರು. ಆ ಭಗವಂತನ ದಯೆಯಿಂದ ಮತ್ತೆ ಸಂಸಾರದ ನೊಗಕ್ಕೆ ಹೆಗಲು ಕೊಟ್ಟಿದ್ದೇನೆ! ಆದರೆ ನಾನು ಮಲಗಿದಾಗ ಇವರು ಮಾಡಿದ ಅಡಿಗೆ ಕೆಲಸಕ್ಕೆ ಆ ಶಿವನೂ ಮೆಚ್ಚಿರಬೇಕು.

—ಲೀಲಾ ವಸಂತ ಜೋಗಿನ
ಆಲಮಟ್ಟಿ ಡ್ಯಾಮ್‌ಸೈಟ್

(ಮುಂದಿನ ಸಂಚಿಕೆಯಲ್ಲಿ)

## ಸ್ವಾರಸ್ಯಲೋಕ

### ಕೊನೆಗೂ ಅವನು ಬರಲಿಲ್ಲ...

ಪ್ರಪಂಚದಾದ್ಯಂತ ಕ್ರೈಸ್ತರು ಈ ಶತಮಾನದ ಕೊನೆಯಲ್ಲಿ ಏಸುಕ್ರಿಸ್ತ ಪುನಃ ಭೂಮಿಗೆ ಬರುತ್ತಾನೆ ಎಂಬ ನಂಬಿಕೆಯನ್ನು ಬೆಳೆಸಿಕೊಂಡಿದ್ದಾರೆ. ಆತನ ಸ್ವಾಗತಕ್ಕೆ ಜನರನ್ನು ಸಜ್ಜುಗೊಳಿಸಲು ಆತನ ಆಗಮನದ ಸುದ್ದಿಯನ್ನು ತೀವ್ರವಾಗಿ ಪ್ರಚಾರ ಮಾಡುತ್ತಿದ್ದಾರೆ. ಇತ್ತೀಚೆಗೆ (ಅಕ್ಟೋಬರ್ 29ರಂದು) ಮನಿಲಾದಲ್ಲಿ ಈ ನಂಬಿಕೆಯ ಸತ್ವ ಪರೀಕ್ಷೆಯಾಯಿತು.

ಅಂದು ರಾತ್ರಿ ಸರಿಯಾಗಿ 11 ಗಂಟೆಗೆ ಏಸು ಸ್ವರ್ಗದಿಂದ ದರ್ಶನ ನೀಡಿ, ಭಕ್ತರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾನೆಂದು ಚರ್ಚ್‌ನ ಧರ್ಮಾಧಿಕಾರಿಗಳು ಹೇಳಿದ್ದನ್ನು ನಂಬಿ, ಮನಿಲಾದ ಚರ್ಚ್ ಒಂದರ ಮೇಲೆ ಗಂಡಸರೂ ಹೆಂಗಸರು, ಮಕ್ಕಳು ಹೀಗೆ ಭಕ್ತ ಜನ ಆಕಾಶದತ್ತ ನೋಟ ನೆಟ್ಟು ಕುಳಿತಿದ್ದರು. ಪರಲೋಕ ಪಯಣದ ಸಮಯ ಸನ್ನಿಹಿತವಾದಂತೆ ಆರಾಧನಾ ಸಭೆಯ ಸದಸ್ಯರು ಹಾಡಿ, ನರ್ತಿಸಿ, ಒಬ್ಬರನ್ನೊಬ್ಬರು ಅಪ್ಪಿಕೊಂಡು ಬೀಳ್ಕೊಳ್ಳಲಾರಂಭಿಸಿದರು.

ಅಷ್ಟರಲ್ಲಿ ಕೊರಿಯನ್ ಮಿಷನರಿಯೊಬ್ಬರು ಎದ್ದು ನಿಂತು, "ಏಸು ದರ್ಶನದ ಸಮಯ ಸನ್ನಿಹಿತವಾಯಿತು" ಎಂದು ಘೋಷಿಸಿದರು. ಆರಾಧನಾ ಸಭೆಯ ಸದಸ್ಯರಂತೂ ತಾವು ದೇವದೂತರನ್ನು ಹಾಗೂ ಸಾಕ್ಷಾತ್ ಏಸುವನ್ನೂ ನೋಡಿದೆವು ಎಂದು ಹೇಳಿದರು. ಓರ್ವ ಮಹಿಳೆಯಂತೂ "ನಾನು ಸತ್ತು ಹೋದೆ. ಪರಲೋಕ ಹೋದ ನನ್ನ ಜೀವಕ್ಕೆ ದೇವದೂತರು ಸ್ವರ್ಗ ಹಾಗೂ ನರಕದ ದರ್ಶನ ಮಾಡಿಸಿ ಇದೀಗ ಹಿಂದಕ್ಕೆ ಕಳಿಸಿದರು" ಎಂದು ಸಾರಿದಳು. ಭಕ್ತವೃಂದದ ಭಾವೋನ್ಮಾದ ಬಾನಿನ ಎಲ್ಲೆಯನ್ನು ದಾಟಿತು.

ಆದರೆ ಗಡಿಯಾರ ಹನ್ನೊಂದು ಗಂಟೆ ಬಾರಿಸುತ್ತಿದ್ದಂತೆ, ಸಮಯಕ್ಕೆ ಸರಿಯಾಗಿ ಏಸು ದರ್ಶನ ನೀಡದಿದ್ದುದರಿಂದ ನಿರೀಕ್ಷೆ ಹೊಂದಿದ ಭಕ್ತರು



ಗೊಂದಲದಲ್ಲಿ ಬಿದ್ದರು. ಸಮಯ ಜಾರಿದಂತೆ ಗೊಂ... ನಿರಾಶೆಯಾಯಿತು. ಏಸು ಬರುವುದಿರಲಿ, ಆ... ಬರುವಿಕೆಯ ಯಾವುದೇ ಸೂಚನೆಯೂ ಕಾಣದಾ... ಹತಾಶರಾದ ಕೊರಿಯನ್ ಮಿಷನರಿಗಳು ಭೂ... ಬರಲಿರುವ ದೇವಕುಮಾರನ, ಆಗಮನದ ಸೂ... ಯನ್ನು ತಪ್ಪಾಗಿ ನೀಡಿದ್ದಕ್ಕಾಗಿ ತಮ್ಮನ್ನು ಮ... ಬೇಕೆಂದು ಏಸುವಿನಲ್ಲಿ ಅತ್ತು ಗೋಗರೆದು ಬ... ಕೊಂಡರು. ಆದರೂ ದಯಾಮಯನಾದ ... ಬರಲೇ ಇಲ್ಲ.

ಹಣಕ್ಕಾಗಿ ಏನೂ ಮಾಡಲೆಳಸುವ ಸಂಸ್ಥೆ ಮಾ... ಅಪರಾಧದಿಂದಾಗಿ ಏಸು ಪುನರವತರಿಸುವ ವಿಷ... ಹೀಗೆ ನಗೆಪಾಟಲಾಯಿತು ಎಂದು ಅಮೆರಿ... ಸುವಾರ್ತೋಪದೇಶಕ ಸಂಸ್ಥೆಯ ಸದಸ್ಯರು ಪತ್ರಕರ್ತ... ವಿವರಿಸಿದರು.

ಭಕ್ತ ಮಹಾಜನರು ಸಾಮೂಹಿಕ ಆತ್ಮಹ... ಯಲ್ಲಿಯೋ, ಅಥವಾ ಭಕ್ತಿಯ ಉನ್ಮಾದದ... ಬೇರಾವುದೇ ಅಪಾಯಕ್ಕೆ ತಮ್ಮನ್ನು ಒಡ್ಡಿಕೊ... ಬಹುದೆಂಬ ಶಂಕೆಯಿಂದ ಕೊರಿಯಾದಲ್ಲಿ ಇರು... ಚರ್ಚ್ ಚಟುವಟಿಕೆಗಳನ್ನು ಪೋಲೀಸರು ರಾತ್ರಿಯಿ... ಕಣ್ಣವೆ ಮುಚ್ಚದೆ ಗಮನಿಸುತ್ತಿದ್ದರು.

ಆದರೆ ರಾತ್ರಿಯಿಡೀ ಕಾದ ಜನರು ಏ... ಬಾರದಿದ್ದಾಗ ಕೆಲವರು ನಿಟ್ಟುಸಿರು ಬಿಟ್ಟು ಮ... ಮರಳಿದರೆ ಇನ್ನು ಕೆಲವರು ಕೋಪದಿಂದ "ಬರಿಗುಲ್ಲ... ನಿದ್ರೆಗೇಡು" ಎಂದು ಗೊಣಗುತ್ತ ಹೋದರು.

### ಧೂಮ್ರ ವಲಯಗಳು

ನವೆಂಬರ್ 1 ಕರ್ನಾಟಕದಲ್ಲಿ ರಾಜ್ಯೋತ್ಸವ ಆರಂಭದ ದಿನ. ಆ ದಿನದಂದು ದೂರದ ಫ್ರಾನ್ಸ್‌ನಲ್ಲಿ ಕೆಲವರಿಗೆ ಸಂತಸವಾಯಿತು ಮತ್ತೆ ಕೆಲವರಿಗೆ ಬೇಸರವಾಯಿತು, ಇನ್ನೂ ಕೆಲವರು ಉರಿದೆದ್ದು ಧಿಕ್ಕರಿಸಿದರು. ಕನ್ನಡ ರಾಜ್ಯೋತ್ಸವಕ್ಕೆ ಇವರೆಲ್ಲ ಹೀಗೆ ಮಾಡಬೇಕೆ ಎಂದು ಯಾರಾದರೂ ಕೇಳಬಹುದು. ವಿಷಯ ಅದಲ್ಲ, ಚೋಟುದ್ದದ ಸಿಗರೇಟು. 'ಧೂಮಪಾನ ನಿಷೇಧ ಕಾನೂನು' ಫ್ರಾನ್ಸ್‌ನಲ್ಲಿ ನವೆಂಬರ್ 1ರಂದು ಜಾರಿಗೆ ಬಂದಿತು.

ಉಪಾಹಾರ ಗೃಹಗಳಲ್ಲಿ, ಕೆಲಸ ಮಾಡುವ ಸ್ಥಳಗಳಲ್ಲಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಫ್ರಾನ್ಸ್‌ನಲ್ಲಿ ಧೂಮಪಾನ ನಿಷೇಧಿಸಲಾಗಿದೆ. ಧೂಮಪಾನಕ್ಕೆ ವಿಶೇಷ ಸ್ಥಳಗಳನ್ನು ಕಾದಿರಿಸಲಾಗಿದೆ.

ಈ ಕಾನೂನಿನ ಕುರಿತು ಜನಾಭಿಪ್ರಾಯ ಸಂಗ್ರಹವೂ ನಡೆಯಿತು. 84% ಜನ ಇದನ್ನು ಅನುಮೋದಿಸಿದ್ದಾರೆ. 65% ಜನ ಈ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ಆಗ್ರಹಿಸಿದ್ದಾರೆ. ಆದರೆ ಹೋಟೆಲು ಉದ್ಯಮಿಗಳು ಈ ಕಾನೂನನ್ನು ಜಾರಿಗೆ ತಂದ ಬಗ್ಗೆ ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಈ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದರೆ ಸಿಗರೇಟು ಸೇದುವ ಚಟವುಳ್ಳವರು ಬರದೆ ವ್ಯಾಪಾರ ತಗ್ಗುತ್ತದೆ. ಹಾಗೇನಾದರೂ ಸಿಗರೇಟು ಸೇದಲು ಅನುಮತಿ ನೀಡಿದರೆ ಹೋಟೆಲ್ ಮಾಲೀಕ 6000 ಫ್ರಾಂಕ್ (1,200 ಡಾಲರ್) ದಂಡ ತೆರಬೇಕು. ಇಲ್ಲದಿದ್ದಲ್ಲಿ ಸಶ್ರಮ ಜೈಲು ಶಿಕ್ಷೆ ಅನುಭವಿಸಬೇಕಾಗುತ್ತದೆ.

ವ್ಯಕ್ತಿಯೊಬ್ಬ ಈ ಕಾನೂನನ್ನು ಉಲ್ಲಂಘಿಸಿದರೆ 600ರಿಂದ 1,300 ಫ್ರಾಂಕ್‌ಗಳ ವರೆಗೆ ದಂಡ ತರಬೇಕಾಗುತ್ತದೆ.

ಫ್ರಾನ್ಸ್‌ನ ಕೆಲ ಶಾಸಕರಿಗೂ ಈ ಕಾನೂನು ಅಪ್ರಿಯ. ಅವರಲ್ಲೊಬ್ಬ ಮಹಾನುಭಾವ ರಾಷ್ಟ್ರೀಯ ಸಂಸತ್ತಿನಲ್ಲಿಯೇ ಅದರ ಆಚರಣೆಗೆ ವಿರೋಧವಾಗಿ ನಡೆದುಕೊಂಡ. ಆ ಕಾನೂನುತಜ್ಞ ನೀಡಿದ ಕಾರಣ ಅಷ್ಟೇ ಚಮತ್ಕಾರ ಪೂರ್ಣ. "ಸ್ವಾಮಿ ಈ ಸಂಸತ್ತು ಸಾರ್ವಜನಿಕ ಸ್ಥಳವಲ್ಲ. ಹಾಗೂ ಇತರ ಸಾರ್ವಜನಿಕ ಸ್ಥಳಗಳಿಂದ ಪ್ರತ್ಯೇಕ"

ಸೋಷಲಿಸ್ಟ್ ಸದಸ್ಯ ಜೀನ್ ರಾ ಗೆರ್ರಿಕ್ "... ನಿಷೇಧವೇ ನಿಷಿದ್ಧವಾದುದು. ಈ ಮೂರ್ಖತನ... ಸೋಷಲಿಸ್ಟ್ ಕಾನೂನುಗಳನ್ನು ಕಿತ್ತೆಸೆಯುತ್ತೇ... ಅದರ ಆರಂಭವಾಗಿ ಈ ಕಾನೂನಿಗೆ ವಿರೋ... ಸೂಚಿಸುತ್ತೇನೆ" ಎಂದು ಗುಡುಗಿದ.

ಅಷ್ಟರಲ್ಲೇ ನೂರಾರು ಕೆಫೆಗಳು, ಬಾರ್‌ಗ... ರೆಸ್ಟೋರೆಂಟ್‌ಗಳೂ ತಮ್ಮ ಅಂಗಡಿ ಬಾಗಿಲ ಮೇ... 'ಬಾರ್ ಫ್ಯೂಮ್ಯೂರ್ಸ್' (ಧೂಮಪಾನಿಗಳ ಶಾ... ಎಂದು ಅರಿಶಿನ ಬಣ್ಣದ ಫಲಕ ತೂಗು ಹಾಕಿದ್ದಾ...

ಫ್ರಾನ್ಸ್‌ನಲ್ಲಿ ದೇಶದೊಳಗೆ ಸಂಚರಿಸುವ ವಿಮಾ... ಗಳಲ್ಲಿ 1990ರಿಂದ ಧೂಮಪಾನ ನಿಷೇಧ ಜಾ... ಬಂದಿದೆ. ಈಗ 1993ರ ಜನವರಿ 1ರಿಂದ ಫ್ರಾನ್ಸ್... ಅಂತರರಾಷ್ಟ್ರೀಯ ಸಂಚಾರ ನಡೆಸುವ (ಎರ... ಗಂಟೆಗಳಿಗೂ ಕಡಿಮೆ ಕಾಲ ಹಾರಾಡುವ) ವಿಮಾ... ಗಳಲ್ಲಿ ಧೂಮಪಾನ ನಿಷೇಧ ಜಾರಿಗೆ ಬರಲಿದೆ.

ಇತರೇ ರಾಷ್ಟ್ರಗಳಿಗೆ ಹೋಲಿಸಿದರೆ ಫ್ರಾನ್ಸ್‌ನ... ಧೂಮಪಾನಿಗಳ ಸಂಖ್ಯೆ ಅತಿಹೆಚ್ಚು. ನೋಡಬೇ... ಫ್ರಾನ್ಸ್‌ನ ಧೂಮ್ರವಲಯಗಳಲ್ಲಿ ಇನ್ನೂ ಏನೇ... ನಡೆಯಲಿದೆಯೋ?!







Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026